# ❋ ಅರ್ಪಣ ಪತ್ರಿಕೆ ❋



ನಿವೃತ್ತ ಹಾಯಕೋರ್ಟ ನ್ಯಾಯಾಧೀಶರೂ,
ಈಗಿನ ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳೂ ಆದ,

**ಶ್ರೀಮಾನ್ ರಂಗಾಚಾರ್ಯ ಜಹಾಗೀರದಾರ**

ಎಮ್, ಎ, ಎಲ್, ಎಲ್, ಬಿ.

**ಇವರಿಗೆ.**

ಅವರಲ್ಲಿರುವ ನಿರಹಂಕಾರವೃತ್ತಿ, ದೇಶಾಭಿಮಾನ, ತ್ಯಾಗ,
ಆರ್ಯಸಂಸ್ಕೃತಿಯಲ್ಲಿ ಶ್ರದ್ಧೆ, ಶಾಂತಿ ಮುಂತಾದ
ಲೋಕೋತ್ತರ ಗುಣಗಳಿಂದ ಆಕೃಷ್ಟನಾಗಿ

**ಈ ಗ್ರಂಥವನ್ನು ಅರ್ಪಿಸುವೆನು.**



ಆದ್ಯ ಅನಂತಾಚಾರ್ಯ
ಅನುವಾದಕ



ಶ್ರೀಮಾನ್ **ರಂಗಾಚಾರ್ಯ ಅಪ್ಪಾಚಾರ್ಯ ಜಹಾಗೀರದಾರ**

ಎಮ್, ಎ, ಎಲ್, ಎಲ್, ಬಿ.

ನಿವೃತ್ತ ಹಾಯಕೋರ್ಟ ನ್ಯಾಯಾಧೀಶರು.

# ಶ್ರೀಮಾನ್ ರಂಗಾಚಾರ್ಯ ಜಹಾಗೀರದಾರ

## ಇವರ

## ಅಲ್ಪ ಪರಿಚಯ

ವಿಜಾಪೂರ ಜಿಲ್ಹೆಯಲ್ಲಿಯ **ಅಗರಖೇಡ** ಕ್ಷೇತ್ರವನ್ನು ಕೇಳದವರು ಯಾರೂ ಇಲ್ಲ. ಇದು 'ಆದ್ಯ' ಮನೆತನದವರಿಗೆ ಶ್ರೀ. ಪೇಶವೆಯವರಿಂದ ಇನಾಮು ದೊರೆತಿದೆ. ಪೂರ್ವಕಾಲದಲ್ಲಿ ಈ ಮನೆತನದವರು ಆರ್ಯ ಶಾಸ್ತ್ರಗಳಾದ ನ್ಯಾಯ, ವೇದಾಂತ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಪಡೆದು ಶ್ರೀ. ಪೇಶವೇ ಸರಕಾರದ ಆಸ್ಥಾನ ಪಂಡಿತರಾಗಿ ಶ್ರೀಮನ್ಮಧ್ವಾಚಾರ್ಯರ ಮುಖ್ಯ ಪೀಠವಾದ ಉತ್ತರಾದಿಮಠದ ಶ್ರೀಗಳವರಿಂದ ಆದ್ಯರೆಂಬ ಪದವಿಯನ್ನು ಗಳಿಸಿ ವೈಷ್ಣವ ಸಮಾಜದಲ್ಲಿ ಅಗ್ರಪೂಜೆಯನ್ನು ಹೊಂದಿದರು. ಇವರಲ್ಲಿ ಅನೇಕ ಗ್ರಂಥಕರ್ತರೂ, ತಪಸ್ವಿಗಳೂ, ಮಹಾನುಭಾವಿಗಳೂ ಆಗಿ ಹೋದರು. ಇಂಥ ಪವಿತ್ರ ಮತ್ತು ಪಂಡಿತ ಕುಲದಲ್ಲಿಯೇ ಶ್ರೀ. ರಂಗಾಚಾರ್ಯರು ೧೮೮೯ರಲ್ಲಿ ಜನ್ಮವೆತ್ತಿದರು. ಮನೆತನದ ರೂಢಿಯಂತೆ ಬಾಲ್ಯದಲ್ಲಿ ಸಂಸ್ಕೃತ ಶಿಕ್ಷಣವು ಆರಂಭವಾಯಿತು. ಆಗ್ಗೆ ಇಂಗ್ಲೀಷ ಶಿಕ್ಷಣಕ್ಕೆ ಕಳೆ ಏರಹತ್ತಿತ್ತು. ಕೆಲವು ಆಪ್ತೇಷ್ಟರು ಇಂಗ್ಲೀಷ ಕಲಿಸುವ ಸಲಹೆ ಕೊಟ್ಟಿದ್ದರಿಂದ ಇವರನ್ನು ಇಂಗ್ಲೀಷ ಶಾಲೆಗೆ ಹಾಕಿದರು. ಇವರು ತಮ್ಮ ಕುಶಾಗ್ರ ಬುದ್ಧಿಯಿಂದ ಅದರಲ್ಲಿ ಪ್ರಾವೀಣ್ಯವನ್ನು ತೋರಿಸುತ್ತ ೧೯೦೭ನೇ ಇಸವಿಯಲ್ಲಿ ಮ್ಯಾಟ್ರಿಕ್ ಪಾಸಾಗಿ ಹಾಯಸ್ಕೂಲಕ್ಕೆ ೧ನೇ ನಂಬರು ಬಂದರು. ಮುಂದೆ ಪುಣೆಯ ಫರ್ಗ್ಯೂಸನ್ ಕಾಲೇಜಕ್ಕೆ ಹೋಗಿ ಬಿ, ಎ, ಎಮ್, ಎ. ಡಿಗ್ರಿಗಳನ್ನು ಎಲ್. ಎಲ್. ಬಿ. ಯ ಪದವಿಯನ್ನೂ ಸಂಪಾದಿಸಿ ತಮ್ಮ ಶ್ವಶುರರಾದ ಗದಗಿನ ಶ್ರೀ ಗುರಾಚಾರ್ಯ ಮೊರಬ ವಕೀಲರ ಸಲಹೆಯಂತೆ ಮುಂಬಯಿಯಲ್ಲಿ ವಕೀಲಿಯನ್ನು ಆರಂಭಿಸಿದರು. ಆಗಿನ ಕಾಲಕ್ಕೆ ಮುಂಬಯಿಯಲ್ಲಿ ಕನ್ನಡಿಗರ ವರ್ಚಸ್ಸು ಇದ್ದಿಲ್ಲವಾದ್ದರಿಂದ ಅದೊಂದು ಪರದೇಶವೆಂದೆನಿಸುತ್ತಿತ್ತು. ಆದರೂ ಇವರು ಹಿಂತೆಗೆಯದೆ 'ಯಂ ದೇಶಂ ಶ್ರಯತೇ ತಮೇವ ಕುರುತೇ ಬಾಹುಪ್ರತಾಪಾರ್ಜಿತಮ್' ಎಂಬಂತೆ ಅಲ್ಲಿ ನೆಲಿಸಿ ಅದನ್ನು ಸ್ವದೇಶವನ್ನಾಗಿ ಮಾಡಿದರು. ಇವರಲ್ಲಿ ಬುದ್ಧಿಮತ್ತೆ, ಪ್ರಾಮಾಣಿಕತನ, ದಕ್ಷತೆ, ಸರಲತೆ ಮತ್ತು ವಿನೀತತೆ ಮುಂತಾದ ಸದ್ಗುಣಗಳು ನೆಲಿಸಿದ್ದರಿಂದ ಇಡೀ ಕರ್ನಾಟಕದ ವಕೀಲ ವೃಂದಕ್ಕೆ ಇವರು ಪ್ರಿಯರಾದ್ದರಿಂದ ಅಪೇಕ್ಷೆಮೀರಿ ಇವರಿಗೆ ಸಂಪತ್ತಿಯೂ ಯಶಸ್ಸೂ ದೊರೆಯಹತ್ತಿತು. ಇದು ವರೆಗೆ ಆದ್ಯ

ಕುಲವು ಪ್ರಾಚೀನ ವಿದ್ಯೆಯಲ್ಲಿ ತನ್ನ ಬುದ್ಧಿಪ್ರಭಾವವನ್ನು ತೋರಿಸಿ ಸಂಪತ್ತು ಮಾನ ಕೀರ್ತಿಗಳನ್ನು ಗಳಿಸಿತ್ತು. ಇವರು ಮೊದಲ್ಗೊಂಡು ಅದು ಪಾಶ್ಚಾತ್ಯ ವಿದ್ಯಾಭಿಮುಖವಾಯಿತೆಂದು ಹೇಳಬಹುದು. ಎಲ್ಲರೂ ಇತ್ತ ತಿರುಗಿದರು. ಕನ್ನಡ ಸಾಹಿತ್ಯದಲ್ಲಿ ವಿಲಕ್ಷಣ ಕ್ರಾಂತಿಯನ್ನುಂಟುಮಾಡಿದ ಆದ್ಯ ರಂಗಾಚಾರ್ಯರೂ ಇವರನ್ನು ಹಿಂಬಾಲಿಸಿದರು. ಹಿಂದಕ್ಕೆ ಪೂರ್ವಜರು ಆರ್ಯವಿದ್ಯೆಗಳಲ್ಲಿ ಪಾಂಡಿತ್ಯವನ್ನು ಪಡೆದು ದಿಗಂತ ಕೀರ್ತಿಯನ್ನು ಪಡೆದಂತೆ ಇವರು ಪಾಶ್ಚಾತ್ಯವಿದ್ಯೆಯಿಂದ ಅದನ್ನು ಪಡೆಯುಹತ್ತಿದರು ಇಷ್ಟೆ.

ರಾಷ್ಟ್ರಪ್ರೇಮವೂ ಇವರಲ್ಲಿ ಪ್ರಜ್ವಲಿತವಿದ್ದದರಿಂದ ಎಲ್ಲ ರಾಷ್ಟ್ರಭಕ್ತರಿಗೆ ಇವರ ಮನೆಯು ಮುಕ್ತದ್ವಾರ ಅನ್ನಸತ್ರವೇ ಆಗಿತ್ತು. ೧೯೩೦ ನೇ ಇಸವಿಯಲ್ಲಿ ಸರಕಾರದ ದಬ್ಬಾಳಿಕೆಯ ನಿಷೇದಾರ್ಥವಾಗಿ ತಮ್ಮ ಸರಕಾರೀ ವಕೀಲಿಯನ್ನು ತ್ಯಜಿಸಿದರು. ಇದರಿಂದ ಮುಂದೆ ನಿಮಗೆ ಸಿಗಬೇಕಾದ ಹಾಯಕೋರ್ಟ ಜಜ್ಜಪದವು ಸಿಗದು ಎಂದು ಅವರ ಮಿತ್ರರಾದ ಜಜ್ಜರೊಬ್ಬರು ಇವರಿಗೆ ಉಪದೇಶಮಾಡಿದರೂ ಅವರು ಆ ಪ್ರಲೋಭನಕ್ಕೆ ವಶರಾಗಿ ತಿಳ ಮಾತ್ರವೂ ಕದಲಲಿಲ್ಲ. 'ನಿಃಸ್ಪೃಹಸ್ಯ ತೃಣಂ ಜಗತ್' ಇದನ್ನು ನೋಡಿ ಎಲ್ಲರೂ ಬೊಟ್ಟುಕಚ್ಚಿಕೊಂಡರು. ೧೯೪೨ ರ ಚಳವಳಿಯಲ್ಲಿ ಭೂಗತರಾದ ಅನೇಕ ಕಾಂಗ್ರೆಸ ಕಾರ್ಯಕರ್ತರ ಖಟ್ಲೆಯನ್ನು ಧರ್ಮಾರ್ಥ ನಡಿಸುವದಲ್ಲದೆ ಅವರ ಕೋರ್ಟ ಫೀಯನ್ನು ಕೂಡ ತಾವು ತುಂಬಿರುವರು. ಇವರ ರಾಷ್ಟ್ರಪ್ರೇಮಕ್ಕೂ ಪಾಂಡಿತ್ಯಕ್ಕೂ ಮೆಚ್ಚಿ ಕಾಂಗ್ರೆಸ್ಸು ಇವರಿಗೆ ಹಾಯಕೋರ್ಟ ಜಜ್ಜ ಪದವನ್ನು ಕೊಟ್ಟಿತು.

ರಾಷ್ಟ್ರಸೇವೆಯಂತೆ ಸಾಹಿತ್ಯ ಸೇವೆಯನ್ನು ಇವರು ಮಾಡಿರುವರು. ಕರ್ನಾಟಕದಲ್ಲಿ ನಡೆದ ಬಹುತರ ಎಲ್ಲ ಸಂಘ ಸಂಸ್ಥೆಗಳಿಗೆ ಒಂದಿಲ್ಲೊಂದು ರೀತಿಯಿಂದ ಸೇವೆಯನ್ನು ಸಲ್ಲಿಸದೆ ಇಲ್ಲ. ಧಾರವಾಡದ ಕರ್ನಾಟಕ ಎಜ್ಯುಕೇಶನ ಬೋರ್ಡದ ಅಧ್ಯಕ್ಷರಾಗಿರುವರು. ಬೆಳಗಾವಿಯಲ್ಲಿ ಕೂಡಿದ ವಿಶ್ವವಿದ್ಯಾಲಯ ಪರಿಷತ್ತಿಗೆ ಅಧ್ಯಕ್ಷರಾಗಿದ್ದರು ೧೯೪೫ ರಲ್ಲಿ ಮುಂಬಯಿಯಲ್ಲಿ ಕೂಡಿದ ಕನ್ನಡ ಸಾಹಿತ್ಯ ಸಮ್ಮೇಲನ ೧೦ ನೇ ಏಕೀಕರಣ ಪರಿಷತ್ತುಗಳಿಗೆ ಸ್ವಾಗತಾಧ್ಯಕ್ಷರಾಗಿದ್ದರು. ಕಾಸರಗೋಡಿನ ಪರಿಷತ್ತಿನ ಉದ್ಘಾಟಕರಾಗಿದ್ದರು. ಕೆಲಕಾಲ ಮುಂಬೈಯುನಿವ್ಹರ್ಸಿಟಿಯ ಫೆಲೋಆಗಿದ್ದರು. ಕರ್ನಾಟಕಯುನಿವ್ಹರ್ಸಿಟಿಯ ಕಮಿಟಿಯ ಸದಸ್ಯರಾಗಿಯೂ ವೆಸ್ಟರ್ನ್‌ನ ಇಂಡಿಯಾ ಅಡ್ವೋಕೇಟ ಅಸೋಸಿಏಶನ್ನದ ಅಧ್ಯಕ್ಷರಾಗಿಯೂ ಕಾರ್ಯಮಾಡಿರುವರು. ಈಗ ತಮ್ಮ ಭೋರ್ಗರೆಯುವ ವಕೀಲಿಯನ್ನು ಬಿಟ್ಟು ನಾಡಸೇವೆಗಾಗಿ ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಗುರುಗಳು ಆಗಿ ಸೇವೆಸಲ್ಲಿಸುತ್ತಿರುವರು.

ಇಂಥ ರಾಷ್ಟ್ರಭಕ್ತ, ಧರ್ಮನಿಷ್ಠ, ಪರೋಪಕಾರಿ ರಂಗಾಚಾರ್ಯರಿಗೆ ಶ್ರೀ ಧನ್ವಂತರಿಯು ಆಯುರಾರೋಗ್ಯಗಳನ್ನು ಕೊಟ್ಟು ದಯಪಾಲಿಸಲಿ ಎಂದು ಪ್ರಾರ್ಥಿಸುವೆವು.

## ಡಾ. ಗೋವಿಂದರಾವ ಮಂಗಳವೇಢೆಕರ; L M S. (NAT) ಇವರ

# ಮುನ್ನುಡಿ

ಸೃಷ್ಟಿಕರ್ತನಾದ ಚತುರ್ಮುಖನಿಂದ ಪರಂಪರೆಯಿಂದ ಪ್ರಾಪ್ತವಾದ ಅಪೌರುಷೇಯವಾದ ಆಯುರ್ವೇದದ ಜ್ಞಾನವನ್ನು ಋಷಿಗಳು ತಂತ್ರರೂಪವಾಗಿ ಗ್ರಥಿತಮಾಡಿರುವರು. ಅವುಗಳಲ್ಲೊಂದಾದ ಅಗ್ನಿವೇಶತಂತ್ರವೇ ಚರಕಸಂಹಿತೆಯು. ಉಪಲಬ್ಧ ಆಯುರ್ವೇದ ಗ್ರಂಥಗಳಲ್ಲಿ ಅತಿ ಪ್ರಾಚೀನವಾಗಿದ್ದು, ಉಳಿದ ಗ್ರಂಥಗಳಿಗೆ ಉಪಜೀವ್ಯವಾಗಿರುವ ಈ ಸಂಹಿತೆಯ ಉತ್ತಮಾಂಗವಾದ ಚಿಕಿತ್ಸಾಸ್ಥಾನದ ಸರಸ ಕನ್ನಡ ಅನುವಾದವನ್ನು ಕೊನೆಗಾಣಿಸಿ, ಶ್ರೀಯುತ ಆಯುರ್ವೇದ ತೀರ್ಥ ಆದ್ಯ ಅನಂತಾಚಾರ್ಯರು ಪಠನ ಪಾಠನ ಮಾಡುವವರ ಮೇಲೆ ಮಹದುಪಕಾರವನ್ನು ಮಾಡಿರುವರು. ಅವರು ಉಪಕ್ರಮಿಸಿದ ಶಾಸ್ತ್ರಸೇವೆಯು ಅವ್ಯಾಹತವಾಗಿ ನಡೆಯುವಂತೆ ಪರಮಾತ್ಮನು ಅವರಿಗೆ ಆಯುರಾರೋಗ್ಯಾದಿಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುವೆನು.

ಇವತ್ತಿಗೂ ಪ್ರಾಯಃ ಆಯುರ್ವೇದೀಯ ಔಷಧಿಗಳನ್ನೇ ಉಪಯೋಗಿಸುತ್ತಿರುವ ಬಹುಸಂಖ್ಯಾಗ್ರಾಮೀಣ ಜನತೆಗೆ ಪದವೀಧರ ಡಾಕ್ಟರರ ಸಹಾಯವನ್ನು ಏರ್ಪಡಿಸುವದು ಅಶಕ್ಯವಾದ್ದರಿಂದ ರಾಜ್ಯಕರ್ತರು ಆಯುರ್ವೇದಕ್ಕೆ ಮನ್ನಣೆಯನ್ನು ಕೊಟ್ಟಾಗ್ಯೂ ಸಾಮಾನ್ಯವಾಗಿ ಡಾಕ್ಟರವರ್ಗದಲ್ಲಿ ಆಯುರ್ವೇದದ ಬಗ್ಗೆ ಅನಾದರ ಭಾವನೆಯೇ ನೆಲೆಗೊಂಡಿರುವದು. ಈ ಅನಾದರಕ್ಕೆ ಆಯುರ್ವೇದದ ತಳಹದಿಯಾದ ತ್ರಿದೋಷಸಿದ್ಧಾಂತವು ಆಧುನಿಕ ಶಾಸ್ತ್ರಕ್ಕೆ ಸಮನ್ವಯಿಸದಿರೋಣದರಿಂದ ಆಯುರ್ವೇದವು ಶಾಸ್ತ್ರವೆಂಬ ಸಂಜ್ಞೆಗೆ ಅರ್ಹವಲ್ಲೆಂಬ ಗ್ರಹಿಕೆಯು ಕಾರಣವಾಗಿರುವದು. ಈ ಪರಿಸ್ಥಿತಿಯು ಉಭಯ ಶಾಸ್ತ್ರಾನುಯಾಯಿಗಳಲ್ಲಿ ತತ್ವನಿರ್ಣಯಕ್ಕೆ ಅವಶ್ಯವಾದ ಸೌಹಾರ್ದ-ಸಹಕಾರ್ಯಗಳಿಗೆ ಪ್ರತಿಬಂಧಕವಾಗಿ ಜನಹಿತಕ್ಕೆ ಬಾಧಕವಾಗಿ ಪರಿಣಮಿಸುವದರಿಂದ ಆಧುನಿಕ ಶಾಸ್ತ್ರದ ದೃಷ್ಟಿಯಿಂದ ತ್ರಿದೋಷದ ಅರ್ಥವು ಏನಾಗಬಹುದೆಂಬ ಬಗ್ಗೆ ವಿಚಾರಮಾಡುವದು ಅವಶ್ಯವೆನಿಸುವದು ಈ ದೃಷ್ಟಿಯಿಂದ ಮಾನ್ಯರಾದ ಅನುವಾದಕರ ಅಪ್ಪಣೆಯ ಮೇರೆಗೆ ದಿಗ್ದರ್ಶನವೆಂದು ನಾಲ್ಕು ಶಬ್ದಗಳನ್ನು ಬರೆದಿರುವೆನು.

ಕಫ, ವಾತ, ಪಿತ್ತಗಳೆಂಬ ಮೂರು ದೋಷಗಳು, ರಸರಕ್ತಾದಿ ಸಪ್ತಧಾತುಗಳು, ಸ್ವೇದ ಮೂತ್ರ ಪುರೀಷಗಳೆಂಬ ಮೂರು ಮಲಗಳು ದೇಹಕ್ಕೆ ಮೂಲಾಧಾರವಾಗಿದ್ದು (ದೋಷಧಾತು ಮಲಮೂಲಂ ಹಿ ಶರೀರಂ) ತ್ರಿದೋಷಗಳು ಉಳಿದವುಗಳಿಗೆ ಉಪಜೀವ್ಯವಾಗಿರುವವೆಂದು ಆಯುರ್ವೇದದ ಸಿದ್ಧಾಂತವು. ತ್ರಿದೋಷಗಳಿಗೆ ಸ್ಥೂಲ ಸೂಕ್ಷ್ಮವೆಂದೆರಡವಸ್ಥೆಗಳು. ಮಹಾ

ಸ್ರೋತಃಸಿನ ( Alimentary Canal ) ಊರ್ಧ್ವಮಧ್ಯಾಧೋಭಾಗ ಗಳಾದ ಮುಖ ಆಮಾಶಯ ಪಕ್ವಾಶಯಗಳಲ್ಲಿ ಆಹಾರ ಪಚನಾರ್ಥವಾಗಿ ಪ್ರಾಪ್ತವಾಗುವ ಸ್ರಾವಗಳು (Secretions) ಅನುಕ್ರಮವಾಗಿ ಕಫಪಿತ್ತ ವಾತಗಳ ಸ್ಥೂಲ (ಸಂಘಾತ) ರೂಪಗಳೆಂದೆನ್ನಬಹುದು. ಅನ್ನದ ಪಿಷ್ಟಾಂಶವು (Starch) ಮುಖದಲ್ಲಿ ಉತ್ಪನ್ನವಾಗುವ ಶ್ಲೇಷ್ಮಕ ಸ್ರಾವದಿಂದ ಶರ್ಕರಾರೂಪವನ್ನು ಹೊಂದಿ ಆ ಸ್ರಾವಗತ ಮಧುರವಾದ ಕಫವನ್ನು ಉಪಚಿತಮಾಡುವದು. ಇದು ಷಡ್ರಸದ ಮೊದಲನೇ ಅಂದರೆ ಮಧುರ ವಿಪಾಕವು. ಅನ್ನವು ಆಮಾಶಯದಲ್ಲಿ ಬಂದಮೇಲೆ ಅಲ್ಲಿಯ ಆಮ್ಲವಾದ ಪೈತ್ತಿಕ ಸ್ರಾವದಿಂದ (gastric Secretion) ಎರಡನೇ ಅಂದರೆ ಆಮ್ಲ ವಿಪಾಕವು ಜರಗಿ ಅದು ಆ ಸ್ರಾವಗತ ಪಿತ್ತವನ್ನು ಉಪಚಿತಮಾಡುವದು. ಅನ್ನವು ಮುಂದಕ್ಕೆ ಸಾಗಿ ಪಕ್ವಾಶಯಕ್ಕೆ ಬಂದ ಮೇಲೆ ಅಲ್ಲಿಯ ವಾತಿಕ ಸ್ರಾವದಿಂದ ( ಇದರಲ್ಲಿ Liver, Pancreas, Intestines ಈ ಮೂರು Secretions ಕೂಡುವದು ) ಮೂರನೇ ಅಂದರೆ ಕಟು ವಿಪಾಕವು ಜರಗಿ ಅದರಿಂದ ಆ ಸ್ರಾವಗತ ವಾತವು ಉಪಚಿತವಾಗುವದು. ಈ ರೀತಿಯಿಂದ ತ್ರಿಧಾತುಗಳು ಮಹಾಸ್ರೋತೋಗತ ಷಡ್ರಸದ ತ್ರಿವಿಧ ವಿಪಾಕದ ಪರಿಣಾಮವಾದ ಅನ್ನರಸವನ್ನು (Chyle) ಸಾತ್ಮೀಕರಿಸಿ ಉಪಚಿತಿಯನ್ನು ಹೊಂದಿ ಅಲ್ಲಿಂದ ಹೊರಬಿದ್ದು Lymphatic Circulation ನಲ್ಲಿ ಕೂಡಿಕೊಂಡು ಅಲ್ಲಿಯ ರಸಧಾತುವನ್ನು ತಣಿಸಿ Thoracic Duct ಮಾರ್ಗವಾಗಿ ಹೃದಯವನ್ನು ಪ್ರವೇಶಿಸುವದು. ಅಲ್ಲಿಂದ ರಸರಕ್ತಗಳ ಸಹಿತವಾಗಿ ದೊಡ್ಡ ಧಮನೀಗಳ ದ್ವಾರಾ (Rateries) ಹೊರಬಿದ್ದು ಆಯಾ ಅವಯವಗಳಿಗೆ ಬೇಕಾಗುವ ತ್ರಿಧಾತುಗಳ ಅಂಶಗಳನ್ನು ಪೂರೈಸುತ್ತಾ ಯಾವತ್ತೂ ದೇಹದಲ್ಲಿ ಸಂಚರಿಸುವವು. ಈ ವಿತರಣ ಕರ್ಮದಿಂದ ಅಪಚಿತಿಯನ್ನು ಹೊಂದಿದ ತ್ರಿಧಾತುಗಳು ಪುನಃ ಮಹಾಸ್ರೋತಸ್ಸಿನಲ್ಲಿ ಬಂದು ಷಡ್ರಸ ವಿಪಾಕದಿಂದ ಉಪಚಿತವಾಗಿ ಹೊರಬಿದ್ದು ಯಾವದವಯಗಳ ಆಪ್ಯಾಯನವನ್ನು ಮಾಡುತ್ತಾ ಯಾವತ್ತೂ ಸ್ರೋತಸ್ಸುಗಳಲ್ಲಿ ಸಂಚರಿಸುವವು. ಈ ವ್ಯಾಪಾರವು ಅವ್ಯಾಹತವಾಗಿ ನಡೆಯುವದು. ( ಸಂತತ್ಯಾ ಭೋಜ್ಯ ಧಾತೂನಾಂ ಪರಿವೃತ್ತಿಸ್ತು ಚಕ್ರವತ್. ಚ. ಚಿ. ೧೫ ವಾತಪಿತ್ತಶ್ಲೇಷ್ಮಣಾಂ ಪುನಃ ಸರ್ವಶರೀರಚರಾಣಾಂ ಸರ್ವಾಣಿ ಸ್ರೋತಾಂಸಿ ಅಯನಭೂತಾನಿ ಚ ವಿ. ೫ ) ಸಾರಾಂಶವೇನಂದರೆ ಯಾವದಂಗಪ್ರತ್ಯಂಗಗಳ ಅಂತ್ಯಾವಯವಗಳಾದ ಸೂಕ್ಷ್ಮಪೇಶಿಗಳ (Cells) ಒಳಗೂ ಹೊರಗೂ ವ್ಯಾಪ್ತವಾಗಿ ಅವುಗಳ ಜೀವನಕಾರ್ಯವನ್ನು ನೆರವೇರಿಸುವ ರಕ್ತದ ದ್ರವಭಾಗವು (Free Protoplasma or Plasma) ಕಫವಾತಪಿತ್ತಗಳ ಸೂಕ್ಷ್ಮ (ಅಸಂ

ಘಾತ) ರೂಪವೆಂದೆನ್ನಬಹದು. ಅತೀಂದ್ರಿಯಗಳಾದ ತ್ರಿದೋಷಗಳು ಪ್ರತ್ಯಕ್ಷಕ್ಕೆ ಗೋಚರವಾಗದ Electricity ಯಂತೆ ಕಾರ್ಯಾನುಮೇಯವಾಗಿರುವವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಈ ಸಂದರ್ಭದಲ್ಲಿ ನಮ್ಮ ಶಾಸ್ತ್ರ ಬಂಧುಗಳು ಘನಪಂಡಿತರಾದ ವ್ರಜೇಂದ್ರನಾಥ ಸೀಲರು ತಮ್ಮ "Postive Sciences of the Hindus" ಎಂಬ ವಿದ್ವನ್ಮಾನ್ಯ ಗ್ರಂಥದಲ್ಲಿ ವ್ಯಕ್ತಪಡಿಸಿದ "ಚರಕೋಕ್ತ ಚಿಕಿತ್ಸೀಯ ಶಾಸ್ತ್ರೀಯ ಪದ್ಧತಿಯು (Scientific method) ಉತ್ಕೃಷ್ಟ ಉದಾಹರಣವಾಗಿರುವದು" ಎಂಬ ಅಭಿಪ್ರಾಯವನ್ನು ಗಮನಿಸಬೇಕು. ವಾತಪಿತ್ತಕಫಗಳಿಗೆ ಸ್ಥಾನಕಾರ್ಯಗಳ ಭೇದದಿಂದ ಐದೈದು ರೂಪಗಳಿರುವವು. ಚರಕ ಸೂತ್ರಸ್ಥಾನ ೧೨ನೇ ಅಧ್ಯಾಯದ "ವಾಯುಸ್ತಂತ್ರಯಂತ್ರಧರಃ" ಇತ್ಯಾದಿ ಪರಿಚ್ಛೇದದಲ್ಲಿ ನಿರ್ದಿಷ್ಟ ಕಾರ್ಯಗಳಲ್ಲಿ Carebro Spinal ಮತ್ತು Antonomic ಎಂಬೆರಡು ವಿಭಾಗವುಳ್ಳ Nervous Systemದ ಕಾರ್ಯಗಳಿರುವವು. ಪ್ರಾಣೋದಾನವ್ಯಾನಗಳ ಕಾರ್ಯಗಳಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯ ವ್ಯಾಪಾರಗಳನ್ನೂ ಮನೋವ್ಯಾಪಾರಗಳನ್ನೂ ನಿಯಂತ್ರಿಸುವ Cerebro Spinal System ದ ಕಾರ್ಯಗಳೂ ಮತ್ತು ಪ್ರಾಣಾಪಾನ ಸಮಾನಗಳ ಕಾರ್ಯಗಳ ರುಧಿರಾಭಿಸರಣ, ಶ್ವಾಸೋಚ್ಛ್ವಾಸ, ಮಲಮೂತ್ರ ವಿಸರ್ಜನ ಪ್ರಸವ ಮುಂತಾದ ವ್ಯಾಪಾರಗಳ ನಿಯಂತ್ರಣ ಮಾಡುವಂಥ antonomic system ದ ಕಾರ್ಯಗಳಾಗಿರುವವೆಂದು ಕಂಡು ಬರುವದು. ಪಿತ್ತಃ ಆಹಾರದ ಪರಿಪಾಕ, ದೇಹಧಾತುಗಳಿಂದ ಅನ್ನರಸದ ಸಾತ್ಮೀಕರಣ (assimila tion), ದೇಹದಉಷ್ಣತೆ, (Thermogenesis & matabolism) ಇವುಗಳಿಗೆ ಕಾರಣೀಭೂತವಾದ ಅಗ್ನಿ ಭೂಯಿಷ್ಠವಾದ ತತ್ವವು ಇದು ಪಂಚವಿಧವಾದದ್ದು.

೧. ಪಾಚಕಪಿತ್ತಃ ಮಹಾಸ್ರೋತೋಗತ ಪಾಚಕ ರಸಗಳು (Digestive Secretions)

೨. ಆಲೋಚಕಪಿತ್ತಃ ನೇತ್ರಪಟಲಗತ (Retina) Visual Purple ಎಂಬ ದ್ರವ್ಯವು. ಬಾಹ್ಯಪದಾರ್ಥಗಳ ಪ್ರತಿಬಿಂಬವು ನೇತ್ರಪಟಲದ ಮೇಲೆ ಸರಿಯಾಗಿ ಮೂಡಲಿಕ್ಕೆ ಇದು ಅವಶ್ಯವಿರುವದು.

೩. ಭ್ರಾಜಕಪಿತ್ತಃ ತ್ವಚೆಯ ಕಾಂತಿಗೆ ಕಾರಣೀ ಭೂತವಾದ ತ್ವಗ್ಗತ ಸೂಕ್ಷ್ಮಮೇದಃ ಪಿಂಡಗಳ (Sebaceous glands) ಉತ್ಸರ್ಗವು

೪. ರಂಜಕಪಿತ್ತಃ ರಸಧಾತುವಿಗೆ ರಕ್ತತ್ವವನ್ನು ಕೊಡತಕ್ಕಂಥ ದ್ರವ್ಯವು. ಯಕೃತ್ ಮತ್ತು ಪ್ಲೀಹ ಇವು ಇದರ ಸ್ಥಾನಗಳೆಂಬ ಸಂಗತಿಯು ಆಧುನಿಕ ಶಾಸ್ತ್ರಕ್ಕೆ ಸಮ್ಮತವಾಗಿರುವದು.

೫. ಸಾಧಕಪಿತ್ತಃ ಶೌರ್ಯಂ ಭಯಂ ಕ್ರೋಧಂ ಹರ್ಷಂ ಮೋಹಂ ಪ್ರಸಾದಮಿತಿ ಚ ಸೂ. ೧೨. ಈ ಮನೋವೃತ್ತಿಗಳು Thyroid, Supra-renal, Pituitary ಮುಂತಾದ ಅಂತಃಸ್ರಾವೀ ಗ್ರಂಥಿಗಳ ಸ್ರಾವಗಳನ್ನವಲಂಬಿಸಿರುವವೆಂದು ಆಧುನಿಕರೂ ಕಂಡು ಹಿಡಿದಿರುವದರಿಂದ ಈ ಸ್ರಾವಗಳಿಗೆ ಕಾರಣೀಭೂತವಾದ ತತ್ವಪ್ರಸಾಧಕ ಪಿತ್ತವೆಂದೆನ್ನಬಹುದು.

ಕಫ— ರುಕ್ಷ ಸ್ವಭಾವವಾದ ವಾತದಿಂದಲೂ ಉಷ್ಣ ಸ್ವಭಾವವಾದ ಪಿತ್ತದಿಂದಲೂ ದೇಹದ ರಕ್ಷಣವನ್ನು ಮಾಡುವಂಥ ದೇಹವ್ಯಾಪಿಯಾದ ಶೀತವೀರ್ಯವಾದ ಸ್ನಿಗ್ಧವಾದ ಅಪಪ್ರಧಾನವಾದ ತತ್ವವು. ಇದೂ ಐದು ವಿಧವಾದದ್ದು.

೧. ಶ್ಲೇಷ್ಮಿಕಃ ಅಸ್ಥಿ, ಸ್ನಾಯು, ಸಂಧಿಗಳು ಮುಂತಾದ ಸ್ಥೂಲಾವಯವಗಳ ಸಂಶ್ಲೇಷಣ ಮಾಡುವದು.

೨. ಅವಲಂಬಕ— ಸ್ಥೂಲಾವಯವಗಳ ಅಂತಿಮ ಘಟಕಗಳಾದ ಪೇಶಿಗಳ (Cells) ಸಂಶ್ಲೇಷಣ ಮಾಡುವದು.

೩. ಕ್ಲೇದಕಃ ಶ್ವಾಸಮಾರ್ಗ, ಅನ್ನಮಾರ್ಗ (ಮಹಾಸ್ರೋತಃಸ್ಸು) ಮುಂತಾದ ಸ್ರೋತಸ್ಸುಗಳನ್ನು ಆರ್ದ್ರವಾಗಿ ಇಡತಕ್ಕ ದ್ರವ್ಯವು, (Mucus of mucus membranes)

೪. ಬೋಧಕಃ ರಸನಾಂತರ್ಗತ ಜ್ಞಾನತಂತುಗಳಿಂದ ರಸಗ್ರಹಣವಾಗಲವಶ್ಯವಾದ ಆರ್ದ್ರತೆಯನ್ನುಂಟುಮಾಡುವದು.

೫. ತರ್ಪಕಃ ಮಿದುಳು (Brain) ಮತ್ತು ಕಂಣುಗಳನ್ನು ತಂಪಾಗಿಡುವದು. (Cerbrospinal Fluid & Humous of the Eyeball)

ಈ ದಿಗ್ದರ್ಶನದಮೇಲಿಂದ ತ್ರಿದೋಷಗಳು ಪ್ರಮಾಣಬದ್ಧ ಪ್ರಮೇಯಗಳಾಗಿದ್ದು ತ್ರಿದೋಷ ಸಿದ್ಧಾಂತವು ತರ್ಕಶುದ್ಧ (Scientific) ವಾಗಿರುವದೆಂದು ಕಂಡು ಬರುವದು. ಯಾವ ವಿಜ್ಞಾನವನ್ನು (Science) ಪುರಸ್ಕರಿಸಿ ನಮ್ಮ ಡಾಕ್ಟರ ಬಂಧುಗಳು ಆಯುರ್ವೇದವು ಅಶಾಸ್ತ್ರೀಯವೆಂದು ಆಕ್ಷೇಪಿಸುವರೋ ಅದೇ ವಿಜ್ಞಾನದ ಒಬ್ಬ ಉಚ್ಚ ಕೋಟಿಯ ಪ್ರಾಚಾರ್ಯರಾದ ಸರ್ ಶಾಂತಿ ಸ್ವರೂಪಭಟನಾಗರ ಮಹಾಶಯರು ಒಂದು ಭಾಷಣಪ್ರಸಂಗದಲ್ಲಿ ಹೇಳಿದ್ದನ್ನು ಗಮನಿಸಬೇಕು. ಅವರು ಅಂದದ್ದೇನಂದರೆ— "ಪದಾರ್ಥ ವಿಜ್ಞಾನಶಾಸ್ತ್ರವು ಅಧ್ಯಾತ್ಮಶಾಸ್ತ್ರದಲ್ಲಿ ಕೂಡಿ ಹೋಗಿರುವದು. ಹಿಂದಿನ ಕಾಲದ ವೈಜ್ಞಾನಿಕನಂತೆ ಇವತ್ತಿನ ವೈಜ್ಞಾನಿಕನು (Scientist) ದುರಹಂಕಾರಿಯೂ. ನಾಸ್ತಿಕವಾದಿಯೂ ಅಲ್ಲ. ಸೃಷ್ಟಿಯೊಳಗಿನ ಯಾವತ್ತೂ ವ್ಯಾಪಾರಗಳ ಉಪಪತ್ತಿಯನ್ನು ತಾನು ಹೇಳಬಲ್ಲೆನೆಂಬ ಅವನ ಅಹಂಕಾರವು ತಗ್ಗಿರುವದು. "ಇದರ ಮೇಲಿಂದ ವಿಜ್ಞಾನದ ಪ್ರಗತಿಯು ಯಾವ ದಿಕ್ಕಿನ ಕಡೆಗೆ ನಡೆದಿರುವದೆಂಬುದನ್ನು ಕಂಡುಹಿಡಿಯಬಹುದು.

# ವಿಷಯಾನುಕ್ರಮಣಿಕೆ

## ೨೭ನೇ ಅಧ್ಯಾಯ

[ಊರುಸ್ತಂಭ ಚಿಕಿತ್ಸೆ]

## ೨೮ನೇ ಅಧ್ಯಾಯ

[ ವಾತವ್ಯಾಧಿ ಚಿಕಿತ್ಸೆ ]

## ೨೯ನೇ ಅಧ್ಯಾಯ

[ವಾತರಕ್ತ ಚಿಕಿತ್ಸೆ]

## ೩೦ನೇ ಅಧ್ಯಾಯ

[ಯೋನಿವ್ಯಾಪ ಚಿಕಿತ್ಸೆ]

# ೨೬ ನೆಯ ಅಧ್ಯಾಯ



## ತ್ರಿಮರ್ಮೀಯ ಚಿಕಿತ್ಸೆ

ಉದ್ದೇಶಕ್ರಮದಂತೆ ತ್ರಿಮರ್ಮೀಯ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತಸ್ತ್ರಿಮರ್ಮೀಯ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನು ಮೇಲೆ ' ತ್ರಿಮರ್ಮೀಯ ಚಿಕಿತ್ಸಿತಂ ' ಎಂಬ ಅಧ್ಯಾಯವನ್ನು ಹೇಳುವೆವು

**ಇತಿ ಹ ಸ್ಮಾಹ ಭಗವಾನಾತ್ರೇಯಃ || ೧ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು || ೧ ||

**ಸಪ್ತೋತ್ತರಂ ಮರ್ಮಶತಂ ಯದುಕ್ತಂ ಶರೀರಸಂಖ್ಯಾ ಮಧಿಕೃತ್ಯ ತೇಭ್ಯಃ ||**
**ಮರ್ಮಾಣಿ ಬಸ್ತಿಂ ಹೃದಯಂ ಶಿರಶ್ಚ ಪ್ರಧಾನಭೂತಾ ನೃಷಯೋ ವದಂತಿ ||೨||**

**ಅರ್ಥ:—** ಶರೀರ ಸಂಖ್ಯಾ ಶಾರೀರ ಅಧ್ಯಾಯದಲ್ಲಿ (ಶಾ೬) ೧೦೭ ಮರ್ಮಗಳುಂಟೆಂದು ಹೇಳಿದೆ. ಅವುಗಳಲ್ಲಿ ಬಸ್ತಿ (ಮೂತ್ರಾಶಯ) ಹೃದಯ ತಲೆ ಈ ಮೂರು ಮರ್ಮಗಳು ಮುಖ್ಯವೆಂದು ಋಷಿಗಳು ಹೇಳುತ್ತಾರೆ. ||೨||

**ಪ್ರಾಣಾಶಯಾತ್ತಾನಿ ಹಿ ಪೀಡಯಂತೋ ವಾತಾದಯೋಽಸೂನಪಿ ಪೀಡಯಂತಿ ||**
**ತತ್ಸಂಶ್ರಿತಾನಾಮನುಪಾಲನಾರ್ಥಂ ಮಹಾಗದಾನಾಂ ಶೃಣು ಸೌಮ್ಯ ರಕ್ಷಾಮ್ ||೩||**

**ಅರ್ಥ—** ಯಾಕಂದರೆ ಇವು ಪ್ರಾಣಕ್ಕೆ ಆಧಾರವಾಗಿರುವದರಿಂದ ಈ ಮರ್ಮಗಳನ್ನು ಪೀಡಿಸುವ ವಾತಾದಿದೋಷಗಳು ಪ್ರಾಣವನ್ನು ತಕ್ಕೊಳ್ಳು ವವು. ಆದ್ದರಿಂದ ಪ್ರಾಣಗಳ ರಕ್ಷಣೆಗಾಗಿ ಮರ್ಮಗಳನ್ನು ಆಶ್ರಯಿಸಿದ ಮಹಾರೋಗಗಳಿಂದ (ಮಾಡಿಕೊಳ್ಳಬೇಕಾದ) ರಕ್ಷಣೆಯನ್ನು ಹೇಳುವೆವು, ಕೇಳಿರಿ.

ಮೊದಲನೆಯದಾದ ಬಸ್ತಿ (ಮರ್ಮ)ಯ ರೋಗಗಳನ್ನು ಹೇಳುತ್ತಾರೆ—

**ಕಷಾಯತಿಕ್ತೋಷಣರೂಕ್ಷಭೋಜ್ಯೈಃ ಸನ್ಧಾರಣೋದೀರಣಮೈಥು ನೈಶ್ಚ ||**
**ಪಕ್ವಾಶಯೇ ಕುಪ್ಯತಿ ಚೇದಪಾನಃ ಸ್ರೋತಾಂಸ್ಯಧೋಗಾನಿ ಬಲೀ ಸ ರುದ್ಧ್ವಾ ||೪||**
**ಕರೋತಿವಿಣ್ಮಾರುತಮೂತ್ರಸಂಗಂಕ್ರಮಾದುದಾವರ್ತಮತಶ್ಚ ಘೋರಂ**
**ರುಗ್ಬಸ್ತಿಹೃತ್ಕುಕ್ಷ್ಯುದರೇಷ್ವಭೀಕ್ಷ್ಣಂ ಸಪೃಷ್ಠಪಾರ್ಶ್ವೇಷ್ವತಿದಾರುಣಂ ಸ್ಯಾತ್ ||೫||**
**ಆಧ್ಮಾನಹೃಲ್ಲಾಸವಿಕರ್ತಿಕಾಶ್ಚ ತೋದೋ ವಿಪಾಕಶ್ಚ ಸಬಸ್ತಿಶೋಫಃ||**
**ವರ್ಚೋಽಪ್ರವೃತ್ತಿರ್ಜಠರೇ ಚ ಗಂಡಾನ್ಯೂರ್ಧ್ವಂ ಚ ವಾಯೌ ವಿಹತೇ ಗುದೇ ಸ್ಯಾತ್ ||೬||**

**ಅರ್ಥ—** ಒಗರು, ಕಹಿ, ಕಾರ, ರುಕ್ಷ ಆಹಾರಗಳಿಂದ ವೇಗಗಳ ಧಾರಣ ಮತ್ತು ಪ್ರವರ್ತನೆಗಳಿಂದ, ಮೈಥುನಗಳಿಂದ, ಪಕ್ವಾಶಯದಲ್ಲಿ ಅಪಾನ ವಾಯುವು ಕುಪಿತವಾದರೆ, ಬಲಿಷ್ಠವಾದ ಅದು ಕೆಳಗಿನ ಸ್ರೋತಸ್ಸುಗಳನ್ನು ಪ್ರತಿಬಂಧಿಸಿ ||೪|| ಮೂತ್ರಗಳ ಪ್ರತಿಬಂಧಮಾಡಿ, ಕ್ರಮವಾಗಿ ಅದರಿಂದ ಭಯಂಕರವಾದ (ಮುಂದೆ ಹೇಳುವ) ಉದಾವರ್ತವನ್ನು ಮಾಡುತ್ತದೆ. ಬಸ್ತಿ ಹೃದಯ, ಕುಕ್ಷಿ, ಹೊಟ್ಟೆಗಳಲ್ಲಿ ಅತಿ ಭಯಂಕರವಾದ ಬೇನೆಯು ಆಗಾಗ ಆಗುತ್ತದೆ ||೫|| ಹೊಟ್ಟೆ ಉಬ್ಬೋಣ, ಬಾಯಿಗೆ ನೀರು ಬಿಡೋಣ, ಗುದ ದ್ವಾರದಲ್ಲಿ ಕತ್ತರಿಸಿದಂತೆ ನೋವು, ಚುಚ್ಚುವಿಕೆ, ಅಪಚನ, ಬಸ್ತಿಗೆಬಾವು, ಮಲಬಂಧ, ಗುದದ್ವಾರದಲ್ಲಿ ವಾಯುವಿಗೆ ಪ್ರತಿಬಂಧವಾಗಲು ಮೇಲ್ಭಾಗದ ಹೊಟ್ಟೆಯಲ್ಲಿ ಗಂಟು ಆಗುತ್ತದೆ. ||೬||

**ಕ್ರಿಚ್ಛ್ರೇಣ ಶುಷ್ಕಸ್ಯ ಚಿರಾತ್ಪ್ರವೃತ್ತಿಃ ಸ್ಯಾದ್ವಾ ತನುಃ ಸಾ ಖರರುಕ್ಷ ಶೀತಾಃ ||**

ತತಶ್ಚ ರೋಗಾ ಜ್ವರಮೂತ್ರಕೃಚ್ಛ್ರ ಪ್ರವಾಹಿಕಾ ಹೃದ್ಗ್ರಹಣಿಹೇ
ಪ್ರದೋಷಾಃ ||೭||
ಛರ್ದ್ಯಾಂಧ್ಯಬಾಧಿರ್ಯಶಿರೋಭಿತಾಪಾ ವಾತೋದರಾಷ್ಠೀಲ
ಮನೋವಿಕಾರಾಃ ||
ತೃಷ್ಣಾಸ್ರಪಿತ್ತಾರ್ದಿತಗುಲ್ಮಕಾಸಶ್ವಾಸಪ್ರತಿಶ್ಯಾಯರುಚಿಪಾರ್ಶ್ವರೋಗಾಃ
|| ೮ ||
ಅನ್ಯೇ ಚ ರೋಗಾ ಬಹವೋಽನಿಲೋತ್ಥಾ ಭವಂತ್ಯುದಾವರ್ತಕೃತಾಃ
ಸುಘೋರಾಃ ||
ಚಿಕಿತ್ಸಿತಂ ಚಾಸ್ಯ ಯಥಾವದೂರ್ಧ್ವಂ ಪ್ರವಕ್ಷ್ಯತೇ ತಚ್ಛೃಣು
ಚಾಗ್ನಿವೇಶ ||೯||

**ಅರ್ಥ—** ಒಣಗಿದ ಮಲವು ಒಳ್ಳೇ ಕಷ್ಟದಿಂದ ಬಹಳ ಹೊತ್ತಿಗೆ ಆಗುವದು. ಮತ್ತು ಅದು ಸ್ವಲ್ಪ ಬಿರುಸು, ರುಕ್ಷ ಮತ್ತು ಶೀತವಿರುವದು. ಆಮೇಲೆ ಜ್ವರ, ಮೂತ್ರಕೃಚ್ಛ್ರ, ಪ್ರವಾಹಿಕೆ, ಹೃದ್ರೋಗ, ಸಂಗ್ರಹಣಿ, ||೭|| ವಾಂತಿ, ಅಂಧತ್ವ, ಕಿವುಡತನ, ತಲೆಕಾಯೋಣ, ವಾತೋದರ, ಅಷ್ಠೀಲ, ಮನೋವಿಕಾರ, ನೀರಡಿಕೆ, ರಕ್ತಪಿತ್ತ, ಅರ್ದಿತ, ಗುಲ್ಮ, ಕೆಮ್ಮು, ದಮ್ಮು, ನೆಗಡಿ, ಪಾರ್ಶ್ವರೋಗಗಳು ಉಂಟಾಗುವವು. ||೮|| ಇದಲ್ಲದೆ ಉದಾವರ್ತ ದಿಂದುಂಟಾಗುವ ಬೇರೆ ವಾತಜ ಭಯಂಕರ ರೋಗಗಳುಂಟಾಗುತ್ತವೆ. ಇನ್ನುಮೇಲೆ ಅದರ ಚಿಕಿತ್ಸೆಯನ್ನು ಸರಿಯಾಗಿ ಹೇಳುವೆನು. ಅಗ್ನಿವೇಶನೇ, ಕೇಳು. ||೯||

ಉದಾವರ್ತ ಚಿಕಿತ್ಸೆಯನ್ನು [ ೧೦-೧೬ ಶ್ಲೋಕಗಳವರೆಗೆ] ಹೇಳುತ್ತಾರೆ.

ತಂ ತೈಲಶೀತಜ್ವರನಾಶನಾಕ್ತಂ ಸ್ವೇದೈರ್ಯಥೋಕ್ತೈಃ
ಪ್ರವಿಲೀನದೋಷಮ್ ||
ಉಪಾಚರೇದ್ವರ್ತಿ ನಿರೂಹ ಬಸ್ತಿ ಸ್ನೇಹೈರ್ವಿರೇಕೈರನುಲೋಮ
ನಾನ್ನೈಃ ||೧೦||

**ಅರ್ಥ:—** ಶೀತ ಜ್ವರ ನಾಶಕವಾದ ತೈಲವನ್ನು ಅವನಿಗೆ ತೊಡೆದು, ಮುಂದೆ ಹೇಳಿದ ಸ್ವೇದಗಳನ್ನು ಕೊಟ್ಟು, ದೋಷವನ್ನು ಕಳೆದು, (ಮುಂದೆ

ಹೇಳುವ) ವರ್ತಿ, ನಿರೂಹ, ಬಸ್ತಿ, ಸ್ನೇಹ, ವಿರೇಚನ, ವಾತಾನುಲೋಮಕ ಆಹಾರಗಳಿಂದ ಉಪಚರಿಸಬೇಕು. ||೧೦||

**ಶ್ಯಾಮಾತ್ರಿವೃನ್ಮಾಗಧಿಕಾಂ ಸದಂತೀಂ ಗೋಮೂತ್ರಪಿಷ್ಟಾಂ ದಶಮಾಷಭಾಗಾಮ್ ||**
**ಸನೀಲಿಕಾಂ ದ್ವಿರ್ಲವಣಾಂ ಗುಡೇನ ವರ್ತಿಂ ಕರಾಂಗುಷ್ಠ ನಿಭಾಂ ವಿದಧ್ಯಾತ್ ||೧೧||**

**ಅರ್ಥ:—** ಕರೇ ತಿಗಡಿ, ಕೆಂಪು ತಿಗಡಿ, ಹಿಪ್ಪಲಿ, ದಂತಿಮೂಲ, ನೀಲಿಕೆ, ಇವುಗಳನ್ನು ಹತ್ತು ಹತ್ತು ಮಾಸಿ ತಕ್ಕೊಂಡು ಅವರ ಇಮ್ಮಡಿ ಉಪ್ಪುಕೂಡಿಸಿ, ಗೋಮೂತ್ರದಲ್ಲಿ ಅರೆದು ಬೆಲ್ಲಹಾಕಿ ಹೆಬ್ಬಟ್ಟಿನಷ್ಟು ಬತ್ತಿಯನ್ನು ಮಾಡಬೇಕು.

**ಪಿಣ್ಯಾಕ ಸೌವರ್ಚಲ ಹಿಂಗುಭಿರ್ವಾ ಸಸರ್ಷಪತ್ರ್ಯೂಷಣಯಾವಶೂಕೈಃ**
**ಕ್ರಿಮಿಘ್ನಕಂಪಿಲ್ಲಕಶಂಖಿನೀಭಿಃ ಸುಧಾರ್ಕಜಕ್ಷೀರ ಗುಡೈರ್ಯುತಾಭಿಃ||೧೨||**

**ಅರ್ಥ:—** ಅಥವಾ ಎಳ್ಳುಹಿಂಡಿ, ಕಾಜಲವಣ, ಇಂಗು, ಸಾಸಿವೆ, ತ್ರಿಕಟು, ಜವಖಾರ, ಇವುಗಳನ್ನು ಬೆಲ್ಲದೊಡನೆ ಕೂಡಿಸಿ ಬತ್ತಿಯನ್ನು ಮಾಡಬೇಕು. ಅಥವಾ ವಾವಡಿಂಗ, ಕಪಿಲೆ, ಶಂಖಿನಿ ಕಳ್ಳಿಯ ಹಾಲು, ಎಕ್ಕೆಯ ಹಾಲು, ಬೆಲ್ಲಗಳನ್ನು ಕೂಡಿಸಿ ಬತ್ತಿಯನ್ನು ಮಾಡಬೇಕು. ||೧೨||

**ಸ್ಯಾತ್‌ಪಿಪ್ಪಲೀಸರ್ಷಪರಾತಾ ವೇಶ್ಮ ಧೂಮೈಃ ಸಗೋಮೂತ್ರ ಗುಡೈಶ್ಚ ವರ್ತಿಃ ||**
**ಶ್ಯಾಮಾಫಲೇಕ್ಷ್ವಾಕು ಸಪಿಪ್ಪಲೀಕಂ ನಾಡ್ಯಾಥವಾ ತತ್ ಪ್ರಧಮೇತ್ತು ಚೂರ್ಣಮ್ || ೧೩ ||**

**ಅರ್ಥ—** ಹಿಪ್ಪಲಿ, ಸಾಸಿವೆ, ಮಂಗಾರಿಕಾಯಿಯ ಒಳಗಿನ ಎಸಳು, ಇಲ್ಲಣ ಗೋಮೂತ್ರ, ಬೆಲ್ಲಗಳಿಂದ ಬತ್ತಿಯನ್ನು ಮಾಡಬೇಕು. ಕರೇತಿಗಡಿ, ಮಂ ಮಂಗಾರೀಕಾಯಿ, ಕಹಿಹಾಲಗುಂಬಳ, ಹಿಪ್ಪಲಿಗಳ ಚೂರ್ಣವನ್ನು ನಲಿಕೆಯಲ್ಲಿಹಾಕಿ, ಗುದದಲ್ಲಿ ಇಟ್ಟು ಊದಬೇಕು. || ೧೩ ||

**ರಕ್ಷೋಘ್ನತುಂಬೀಕರಹಾಟಕೃಷ್ಣಾ ಚೂರ್ಣಂ ಸಜೀಮೂತಕಸೈಂಧವಂ ವಾ ||**

**ಸ್ನಿಗ್ಧೇ ಗುದೇ ತಾನ್ಯನುಲೋಮಯಂತಿ ಸರಸ್ಯ ವರ್ಚೋಽನಿಲಮೂತ್ರಸಂಗಮ್ ||೧೪||**

**ಅರ್ಥ—** ಸಾಸಿವೆ, ಕಪಿಹಾಲುಗುಂಬಳ, ಮಂಗಾರಿಕಾಯಿ, ಹಿಪ್ಪಲಿ, ಜೀಮೋತಕ ( ದೇವದಾಲಿ ) ಸೈಂಧವಗಳಿಂದ ಬತ್ತಿಯನ್ನು ಮಾಡಿ ಗುದಕ್ಕೆ ಸ್ನೇಹಹಚ್ಚಿ, ಆ ಬತ್ತಿಗಳನ್ನು ಇಡಲು, ಅವು ಮನುಷ್ಯನ ಮಲಮೂತ್ರವಾತಗಳ ಪ್ರತಿಬಂಧವನ್ನು ಕಳೆದು ಅನುಲೋಮನ ಮಾಡುವವು.

**ತೇಷಾಂ ವಿಘಾತೇಷು ಭಿಷಗ್ ವಿದಧ್ಯಾತ್ ಸ್ವಭ್ಯಕ್ತಸುಸ್ವಿನ್ನತನೋ ನಿರೂಹಂ ||**
**ಊರ್ಧ್ವಾನುಲೋಮೌಷಧಮೂತ್ರತೈಲ ಕ್ಷಾರಾಮ್ಲವಾತಘ್ನಯುತಂ ಸುತೀಕ್ಷ್ಣಮ್ ||೧೫||**

**ಅರ್ಥ—** ಇವುಗಳ ಉಪಯೋಗವಾಗದಿದ್ದರೆ, ವೈದ್ಯನು ರೋಗಿಗೆ ಅಭ್ಯಂಗವನ್ನು ಮಾಡಿಸಿ, ಸ್ವೇದಕೊಟ್ಟು, ಅನುಲೋಮಕ ಔಷಧ, ಮೂತ್ರ ತೈಲ, ಕ್ಷಾರ, ಹುಳಿ, ಮತ್ತು ವಾತನಾಶಕ ದ್ರವ್ಯಗಳಿಂದ ಕೂಡಿದ ತೀಕ್ಷ್ಣ ನಿರೂಹ ಬಸ್ತಿಯನ್ನು ಕೊಡಬೇಕು. ||೧೫||

**ವಾತೇಽಧಿಕೇಽಮ್ಲಂ ಲವಣಂ ಸತೈಲಂ ಕ್ಷೀರೇಣ ಪಿತ್ತೇ ತು ಕಫೇ ಸಮೂತ್ರಂ ||**
**ಸಮೂತ್ರವರ್ಚೋಽನಿಲಸಂಗಮಾಶು ಗುದಂ ಶಿರಾಶ್ಚ ಪ್ರಗುಣೀ ಕರೋತಿ ||೧೬||**

**ಅರ್ಥ—** ವಾತವು ಅಧಿಕವಿದ್ದರೆ ಉಪ್ಪು, ಹುಳಿ, ತೈಲವನ್ನು ಹಾಕಿ, ಪಿತ್ತವು ಅಧಿಕವಿದ್ದರೆ, ಹಾಲಿನಿಂದ, ಕಫವು ಹೆಚ್ಚಿದ್ದರೆ, ಗೋಮೂತ್ರವನ್ನು ಹಾಕಿ ಅದನ್ನು ಕೊಟ್ಟರೆ, ಅದು ಮಲಮೂತ್ರವಾತಗಳ ಪ್ರತಿಬಂಧವನ್ನು ತೀವ್ರವಾಗಿ ಕಳೆದು ಗುದಶಿರೆಗಳನ್ನು ಸರಿಪಡಿಸುವದು. ||೧೬||

ಆಹಾರವನ್ನು ಹೇಳುತ್ತಾರೆ—

**ತ್ರಿವೃತ್ಸುಧಾಪತ್ರತಿಲಾದಿಶಾಕಗ್ರಾಮ್ಯೌದಕಾನೂಪರಸೈರ್ಯವಾನ್ನಂ ||**
**ಅನ್ಯೈಶ್ಚ ಸೃಷ್ಟಾನಿಲಮೂತ್ರವಿಡ್‌ಭಿರದ್ಯಾತ್ ಪ್ರಸನ್ನಾ ಗುಡಸೀಧು ಪಾಯೀ ||೧೭||**

ಹೇಳುವ) ವರ್ತಿ, ನಿರೂಹ, ಬಸ್ತಿ, ಸ್ನೇಹ, ವಿರೇಚನ, ವಾತಾನುಲೋಮಕ ಆಹಾರಗಳಿಂದ ಉಪಚರಿಸಬೇಕು. ||೧೦||

**ಶ್ಯಾಮಾತ್ರಿವೃನ್ಮಾಗಧಿಕಾಂ ಸದಂತೀಂ ಗೋಮೂತ್ರಪಿಷ್ಟಾಂ ದಶಮಾಷಭಾಗಾಮ್ ||**
**ಸನೀಲಿಕಾಂ ದ್ವಿರ್ಲವಣಾಂ ಗುಡೇನ ವರ್ತಿಂ ಕರಾಂಗುಷ್ಠ ನಿಭಾಂ ವಿದಧ್ಯಾತ್ ||೧೧||**

**ಅರ್ಥ:—** ಕರೀ ತಿಗಡಿ, ಕೆಂಪು ತಿಗಡಿ, ಹಿಪ್ಪಲಿ, ದಂತಿಮೂಲ, ನೀಲಿಕೆ, ಇವುಗಳನ್ನು ಹತ್ತು ಹತ್ತು ಮಾಸಿ ತಕ್ಕೊಂಡು ಅವರ ಇಮ್ಮಡಿ ಉಪ್ಪುಕೂಡಿಸಿ, ಗೋಮೂತ್ರದಲ್ಲಿ ಅರೆದು ಬೆಲ್ಲಹಾಕಿ ಹೆಬ್ಬೆಟ್ಟಿನಷ್ಟು ಬತ್ತಿಯನ್ನು ಮಾಡಬೇಕು.

**ಪಿಣ್ಯಾಕ ಸೌವರ್ಚಲ ಹಿಂಗುಭಿರ್ವಾ ಸಸರ್ಷಪತ್ರ್ಯೂಷಣಯಾವಶೂಕೈಃ**
**ಕ್ರಿಮಿಘ್ನಕಂಪಿಲ್ಲಕಶಂಖಿನೀಭಿಃ ಸುಧಾರ್ಕಜಕ್ಷೀರ ಗುಡೈರ್ಯುತಾಭಿಃ||೧೨||**

**ಅರ್ಥ:—** ಅಥವಾ ಎಳ್ಳುಹಿಂಡಿ, ಕಾಜಲವಣ, ಇಂಗು, ಸಾಸಿವೆ, ತ್ರಿಕಟು, ಜವಖಾರ, ಇವುಗಳನ್ನು ಬೆಲ್ಲದೊಡನೆ ಕೂಡಿಸಿ ಬತ್ತಿಯನ್ನು ಮಾಡಬೇಕು. ಅಥವಾ ವಾವಡಿಂಗ, ಕಪಿಲೆ, ಶಂಖಿನಿ ಕಳ್ಳಿಯ ಹಾಲು, ಎಕ್ಕೆಯ ಹಾಲು, ಬೆಲ್ಲಗಳನ್ನು ಕೂಡಿಸಿ ಬತ್ತಿಯನ್ನು ಮಾಡಬೇಕು. ||೧೨||

**ಸ್ಯಾತ್ ಪಿಪ್ಪಲೀಸರ್ಷಪರಾತಾ ವೇಶ್ಮ ಧೂಮೈಃ ಸಗೋಮೂತ್ರ ಗುಡೈಶ್ಚ ವರ್ತಿಃ ||**
**ಶ್ಯಾಮಾಫಲೇಕ್ಷ್ವಾಕು ಸಪಿಪ್ಪಲೀಕಂ ನಾಡ್ಯಾಥವಾ ತತ್ ಪ್ರಧಮೇತ್ತು ಚೂರ್ಣಮ್ || ೧೩ ||**

**ಅರ್ಥ—** ಹಿಪ್ಪಲಿ, ಸಾಸಿವೆ, ಮಂಗಾರಿಕಾಯಿಯ ಒಳಗಿನ ಎಸಳು, ಇಲ್ಲಣ ಗೋಮೂತ್ರ, ಬೆಲ್ಲಗಳಿಂದ ಬತ್ತಿಯನ್ನು ಮಾಡಬೇಕು. ಕರೀತಿಗಡಿ, ಮಂ ಮಂಗಾರೀಕಾಯಿ, ಕಹಿಹಾಲಗುಂಬಳ, ಹಿಪ್ಪಲಿಗಳ ಚೂರ್ಣವನ್ನು ನಲಿಕೆಯಲ್ಲಿಹಾಕಿ, ಗುದದಲ್ಲಿ ಇಟ್ಟು ಊದಬೇಕು. || ೧೩ ||

**ರಕ್ಷೋಘ್ನತುಂಬೀಕರಹಾಟಕೃಷ್ಣಾ ಚೂರ್ಣಂ ಸಜೀಮೂತಕಸೈಂಧವಂ ವಾ ||**

**ಸ್ನಿಗ್ಧೇ ಗುದೇ ತಾನ್ಯನುಲೋಮಯಂತಿ ಸರಸ್ಯ**
**ವರ್ಚೋಽನಿಲಮೂತ್ರಸಂಗಮ್ ||೧೪||**

**ಅರ್ಥ—** ಸಾಸಿವೆ, ಕಹಿಹಾಲುಗುಂಬಳ, ಮಂಗಾರಿಕಾಯಿ, ಹಿಪ್ಪಲಿ, ಜೀಮೂತಕ ( ದೇವದಾಲಿ ) ಸೈಂಧವಗಳಿಂದ ಬತ್ತಿಯನ್ನು ಮಾಡಿ ಗುದಕ್ಕೆ ಸ್ನೇಹಹಚ್ಚಿ, ಆ ಬತ್ತಿಗಳನ್ನು ಇಡಲು, ಅವು ಮನುಷ್ಯನ ಮಲಮೂತ್ರವಾತಗಳ ಪ್ರತಿಬಂಧವನ್ನು ಕಳೆದು ಅನುಲೋಮನ ಮಾಡುವವು.

**ತೇಷಾಂ ವಿಘಾತೇಷು ಭಿಷಗ್ ವಿದಧ್ಯಾತ್ ಸ್ವಭಕ್ತಸುಸ್ವಿನ್ನತನೋ**
**ರ್ನಿರೂಹಂ ||**
**ಊರ್ಧ್ವಾನುಲೋಮೌಷಧಮೂತ್ರತೈಲ ಕ್ಷಾರಾಮ್ಲವಾತಘ್ನಯುತಂ**
**ಸುತೀಕ್ಷ್ಣಮ್ ||೧೫||**

**ಅರ್ಥ—** ಇವುಗಳ ಉಪಯೋಗವಾಗದಿದ್ದರೆ, ವೈದ್ಯನು ರೋಗಿಗೆ ಅಭ್ಯಂಗವನ್ನು ಮಾಡಿಸಿ, ಸ್ವೇದಕೊಟ್ಟು, ಅನುಲೋಮಕ ಔಷಧ, ಮೂತ್ರ ತೈಲ, ಕ್ಷಾರ, ಹುಳಿ, ಮತ್ತು ವಾತನಾಶಕ ದ್ರವ್ಯಗಳಿಂದ ಕೂಡಿದ ತೀಕ್ಷ್ಣ ನಿರೂಹ ಬಸ್ತಿಯನ್ನು ಕೊಡಬೇಕು. ||೧೫||

**ವಾತೇಽಧಿಕೇಽಮ್ಲಂ ಲವಣಂ ಸತೈಲಂ ಕ್ಷೀರೇಣ ಪಿತ್ತೇ ತು ಕಫೇ**
**ಸಮೂತ್ರಂ ||**
**ಸಮೂತ್ರವರ್ಚೋಽನಿಲಸಂಗಮಾಶು ಗುದಂ ಶಿರಾಶ್ಚ ಪ್ರಗುಣೀ**
**ಕರೋತಿ ||೧೬||**

**ಅರ್ಥ—** ವಾತವು ಅಧಿಕವಿದ್ದರೆ ಉಪ್ಪು, ಹುಳಿ, ತೈಲವನ್ನು ಹಾಕಿ, ಪಿತ್ತವು ಅಧಿಕವಿದ್ದರೆ, ಹಾಲಿನಿಂದ, ಕಫವು ಹೆಚ್ಚಿದ್ದರೆ, ಗೋಮೂತ್ರವನ್ನು ಹಾಕಿ ಅದನ್ನು ಕೊಟ್ಟರೆ, ಅದು ಮಲಮೂತ್ರವಾತಗಳ ಪ್ರತಿಬಂಧವನ್ನು ತೀವ್ರವಾಗಿ ಕಳೆದು ಗುದಶಿರೆಗಳನ್ನು ಸರಿಪಡಿಸುವದು. ||೧೬||

ಆಹಾರವನ್ನು ಹೇಳುತ್ತಾರೆ—

**ತ್ರಿವೃತ್ಸುಧಾಪತ್ರತಿಲಾದಿಶಾಕಗ್ರಾಮ್ಯೌದಕಾನೂಪರಸೈರ್ಯವಾನ್ನಂ ||**
**ಅನ್ಯೈಶ್ಚ ಸೃಷ್ಟಾನಿಲಮೂತ್ರವಿಡ್‌ಭಿರದ್ಯಾತ್ ಪ್ರಸನ್ನಾ ಗುಡಸೀಧು**
**ಪಾಯೀ ||೧೭||**

**ಅರ್ಥ—** ಸಿಶೋತ್ತರ, ಮೂಲಂಗಿ, ಸಕಳ್ಳಿ, ಎಳ್ಳು, ಮುಂತಾದವುಗಳ ಎಲೆಗಳ ಪಲ್ಲೆ, ಗ್ರಾಮ್ಯ, ಜಲಜ, ಅನೂಪಪ್ರಾಣಿಗಳ ಮಾಂಸರಸ, ಮಲ ಮೂತ್ರವಾತಗಳ ಅನುಲೋಮನಮಾಡುವ ಬೇರೆ ದ್ರವ್ಯಗಳೊಡನೆ ಜವೆಯ ಅನ್ನವನ್ನು ತಿಂದು, ಮೇಲೆಮದ್ಯದ ತಿಳಿ, ಬೆಲ್ಲದಮದ್ಯ ಕುಡಿಯಬೇಕು. ||೧೭||

**ಭೂಯೋಽನುಬಂಧೇ ತು ಭವೇದ್ ವಿರೇಚ್ಯೋ ಮೂತ್ರಪ್ರಸನ್ನಾದಧಿ**
**ಮಂಡಶುಕ್ತೈಃ ||**
**ಸ್ವಸ್ಥಂ ತು ಪಶ್ಚಾದನುವಾಸಯೀತ್ತಂ ರೌಕ್ಷ್ಯಾದ್ಧಿ ಸಂಗೋಽನಿಲ**
**ವರ್ಚಸೋಃ ಸ್ಯಾತ್ ||೧೮||**

**ಅರ್ಥ—** ಹೀಗೆ ಮಾಡಿದರೂ ಉದಾವರ್ತವು ಹಾಗೇ ಉಳಿದರೆ ಗೋಮೂತ್ರ, ಮದ್ಯದ ತಿಳಿ, ಮೊಸರಿನ ನೀರು, ಶುಕ್ತ (ಕಂದಮೂಲದಿಂದ ಮಾಡಿದ ಮದ್ಯ) ಗಳಿಂದ ವಿರೇಚನಮಾಡಿಸಬೇಕು. ಆರಾಮವಾದನಂತರ ಅನುವಾಸನ ಬಸ್ತಿಯನ್ನು ಕೊಡಬೇಕು. ಏಕೆಂದರೆ ಆಗ ರೂಕ್ಷತೆಯಿಂದ ವಾತಮಲಗಳ ಪ್ರತಿಬಂಧವಾಗಿರುವದು. ||೧೮||

**ದ್ವಿರುತ್ತರಂ ಹಿಂಗು ವಚಾ ಸಕೃಷ್ಣಾ ಸುವರ್ಚಿಕಾ ಚೈವ ವಿಡಂಗ**
**ಚೂರ್ಣಮ್ ||**
**ಸುಖಾಂಬುನಾನಾಹವಿಸೂಚಿಕಾರ್ತಿಹೃದ್ರೋಗಗುಲ್ಮೋರ್ಧ್ವಸಮೀ**
**ರಣಘ್ನಂ ||೧೯||**

**ಅರ್ಥ—** ಬಜೆ, ಹಿಪ್ಪಲೀ, ಸಜ್ಜೀಖಾರ, ವಾವಡಿಂಗ, ಇವುಗಳನ್ನು ಒಂದೊಂದು ಭಾಗ, ಹುರಿದ ಇಂಗು ೨ ಭಾಗ, ಹಾಕಿ ಚೂರ್ಣಮಾಡಬೇಕು. ಅದನ್ನು ಬೆಚ್ಚನ್ನನೀರಿನೊಡನೆ ಕುಡಿದರೆ, ಹೊಟ್ಟೆಯುಬ್ಬೇಣ, ವಿಷೂಚಿಕೆ, ಹೃದ್ರೋಗಗುಲ್ಮ, ಊರ್ಧ್ವವಾತಗಳನ್ನು ಕಳೆಯುವದು. ||೧೯||

**ವಚಾಭಯಾ ಚಿತ್ರಕಯಾವಶೂಕಾನ್ ಸಪಿಪ್ಪಲೀನ್ ಸಾತಿವಿಷಾನ್**
**ಸಕುಷ್ಠಾನ್ ||**
**ಕೊಷ್ಣಾಂಬುನಾನಾಹವಿಮೂಢವಾತಾನ್ ಪೀತ್ವಾ ಜಯೇದಾಶು**
**ರಸೌದನಾಶೀ ||೨೦||**

**ಅರ್ಥ—** ಮಾಂಸರಸ ಮತ್ತು ಅನ್ನವನ್ನು ತಿನ್ನುತ್ತ ಬಜೆ, ಅಣಲೆ, ಚಿತ್ರಕ, ಯವಕ್ಷಾರ, ಹಿಪ್ಪಲಿ, ಅತಿವಿಷ ಕೊಷ್ಠ ಇವುಗಳ ಚೂರ್ಣವನ್ನು

ಬಿಸಿನೀರಿನೊಡನೆ ಕುಡಿಯಬೇಕು. ಇದು ಹೊಟ್ಟೆಯುಬ್ಬೋಣ, ವಾತದ ಪ್ರತಿಬಂಧಗಳನ್ನು ಕಳೆಯುವದು. ||೨೦||

**ಹಿಂಗೂಗ್ರಗ್ರನ್ಥಾ ಬಿಡ್ ಶುಂಠ್ಯಜಾಜೀಹರೀತಕೀಪುಷ್ಕರಮೂಲಕುಷ್ಠಂ||**
**ಯಥೋತ್ತರಂ ಭಾಗವಿವೃದ್ಧಮೇತತ್ ಪ್ಲೀಹೋದರಾಜೀರ್ಣವಿಷೂಚಿ**
**ಕಾಸು ||೨೦||**

**ಅರ್ಥ—** ಇಂಗು, ಬಜೆ, ಬಿಡಲವಣ, ಶುಂಠಿ, ಕರೇಜೀರಗಿ, ಅಣಲೆ, ಪುಷ್ಕರಮೂಲ, ಕೋಷ್ಠ, ಇವುಗಳನ್ನು ೧-೨-೩-೪-೫-೬-೭-೮ ಈ ಪ್ರಮಾಣದಿಂದ ತಕ್ಕೊಂಡು, ಬಿಸಿನೀರಿನೊಡನೆ ಕುಡಿದರೆ, ಪ್ಲೀಹ, ಉದರ, ಅಜೀರ್ಣ, ವಿಷೂಚಿಕೆಗಳು ನಾಶವಾಗುವವು.

**ಸ್ಥಿರಾದಿವರ್ಗಸ್ಯಪುನರ್ನವಾಯಾಃ ಶ್ಯಾಮಾಕಪೂತಿಕಕರಂಜಯೋಶ್ಚ||**
**ಸಿದ್ಧಃ ಕಷಾಯೋ ದ್ವಿಪಲಾಂಶಿಕಾನಾಂ ಪ್ರಸ್ಥೋ ಘೃತಾತ್ ಸ್ಯಾತ್**
**ಪ್ರತಿಬಂಧವಾತೇ ||೨೨||**

**ಅರ್ಥ—** ವಾತದ ಪ್ರತಿಬಂಧವಿರಲು, ಲಘುಪಂಚಮೂಲ, ಬಿಳೇಗಣಜಲಿಬೇರು, ಕಳ್ಳಿ, ಹೊಲಸು ಹುಲಗಲಿ ಇವುಗಳನ್ನು ಎಂಟೆಂಟು ತೊಲೆ ತೆಗೆದುಕೊಂಡು ೨೫೬ ತೊಲೆ ನೀರಿನಲ್ಲಿ ಕುದಿಸಿ, ೧ಪಾಲು ಉಳಿಯಲು ಅದರಲ್ಲಿ ೬೪ ತೊಲಿ ಘೃತವನ್ನು ಸಿದ್ಧಮಾಡಿ ತಕ್ಕೊಳ್ಳಬೇಕು. ||೨೨||

**ಫಲಂ ಚ ಮೂಲಂ ಚ ವಿರೇಚನೋಕ್ತಂ ಹಿಂಸ್ರಾರ್ಕಮೂಲೇ ದಶ**
**ಮೂಲಮಗ್ರ್ಯಮ್ ||**
**ಸ್ನುಕ್ ಚಿತ್ರಕಶ್ಚೈವ ಪುನರ್ನವಾ ಚ ತುಲ್ಯಾನಿ ಸರ್ವೈರ್ಲವಣಾನಿ**
**ಪಂಚ ||೨೩||**
**ಸ್ನೇಹೈ: ಸಮೂತ್ರೈಃಸಹ ಜರ್ಜರಾಣಿಶರಾವಸಂಧೌವಿಪಚೇತ್**
**ಸುಲಿಪ್ತೇ ||**
**ಪಕ್ವಂ ಸುಪಿಷ್ಟಂ ಲವಣಂ ತದನ್ನೈಃ ಪಾನೈಸ್ತಥಾನಾಹರುಜಾಘ್ನ**
**ಮದ್ಯಾತ್ ||೨೪||**

**ಅರ್ಥ—** ವಿರೇಚನಕ್ಕಾಗಿ ಹೇಳಿದ ಫಲಮೂಲಗಳನ್ನು ನಸಗುನ್ನಿ ಮತ್ತು ಎಕ್ಕೆಯ ಬೇರುಗಳನ್ನು, ದಶಮೂಲವನ್ನು ಮೂರೇಣಿನಕಳ್ಳಿ, ಚಿತ್ರಕ, ಬಿಳೇಗಣಜಲ ಬೇರು, ಇವೆಲ್ಲವುಗಳ ಸಮ ಪಂಚಲವಣ ಹಾಕಿ ||೨೩||

ಸ್ನೇಹ, ಗೋಮೂತ್ರಗಳನ್ನು ಕೂಡಿಸಿ, ಜಜ್ಜಿ, ಪರಿವಾಣದಲ್ಲಿ ಹಾಕಿ, ಸಂಧಿ ಲೇಪಮಾಡಿ, ಪುಟ ಕೊಡಬೇಕು. ಪಕ್ವವಾದನಂತರ ಅದನ್ನು ಪುಡಿಮಾಡಿ ಅನ್ನಪಾನಗಳೊಡನೆ ಉಪಯೋಗಿಸಬೇಕು ಅದು ಹೊಟ್ಟೆಯುಬ್ಬೋಣ, ಹೊಟ್ಟೆಶೂಲಿಗಳನ್ನು ಕಳೆಯುವದು. ||೨೪||

**ಹೃತ್ಸ್ತಂಭಮೂರ್ಧಾಮಯಗೌರವಾಭ್ಯಾಮುದ್ಗಾರಸಂಗೇನ ಸಪೀನಸೇನ ||**

**ಆನಾಹಮಾಮಪ್ರಭವಂ ಜಯೇತ್ ತು ಪ್ರಚ್ಛರ್ದನೈರ್ಲಂಘನಪಾಚನೈಶ್ಚ ||೨೫||**

**ಅರ್ಥ—** ಎದೆ ಹಿಡಿಯೋಣ, ತಲೆನೋವು, ತಲೆ ಜಡವಾಗೋಣ, ತೇಗು ಸರಿಯಾಗಿ ಬರದಿರೋಣ, ನೆಗಡಿ ಈ ಲಕ್ಷಣಗಳಿದ್ದರೆ, ಆಮಜನ್ಯ ಆನಾಹವೆಂದು ತಿಳಿದು ಅದನ್ನು ವಮನ, ಲಂಘನ, ಪಾಚನ, ಔಷಧಗಳಿಂದ ಕಳೆಯಬೇಕು. ||೨೫||

ಈಮುಂದೆ ಬರೆದ ೫ ಶ್ಲೋಕಗಳು ನಿರ್ಣಯಸಾಗರ ಪುಸ್ತಕದಲ್ಲಿ ಕಂಡು ಬರುತ್ತವೆ. ಅವು ಮಹತ್ವದವೂ ಆಗಿವೆ. ಆದ್ದರಿಂದ ಅವುಗಳನ್ನು ಇಲ್ಲಿ ಕೊಟ್ಟಿರುವೆವು.

ಔಡಲ ಎಣ್ಣೆಯು ಉದಾವರ್ತ ಆನಾಹಗಳಿಗೆ ಮುಖ್ಯ ಔಷಧವೆಂದು ಹೇಳುತ್ತಾರೆ—

**ಗುಲ್ಮೋದರಬ್ರಧ್ನಾರ್ಶಃ ಪ್ಲೀಹೋದಾವರ್ತಯೋನಿಶುಕ್ರಗದೇ ||**
**ಮೇದಃ ಕಫಸಂಸೃಷ್ಟೇ ಮಾರುತರಕ್ತೇಽವಗಾಢೇ ಚ ||೧||**

**ಗೃಧ್ರಸಿಪಕ್ಷವಧಾದಿಷು ವಿರೇಚನಾರ್ಹೇಷು ವಾತರೋಗೇಷು ||**
**ವಾತೇ ವಿಬದ್ಧಮಾರ್ಗೇ ಮೇದಃಕಫಪಿತ್ತರಕ್ತೇನ ||೨||**

**ಪಯಸಾ ಮಾಂಸರಸೈರ್ವಾ ತ್ರಿಫಲಾರಸಯೂಷಮೂತ್ರಮದಿರಾಭಿಃ ||**
**ದೋಷಾನುಬಂಧಯೋಗಾತ್ಪ್ರಶಸ್ತಮೈರಂಡಜಂ ತೈಲಮ್ ||೩||**

**ತದ್ವಾತನುತ್ ಸ್ವಭಾವಾತ್ಸಂಯೋಗವಶಾದ್ವಿರೇಚನಾಚ್ಚ ಜಯೇತ್ ||**
**ಮೇದೋಽಸೃಕ್ಪಿತ್ತಕಫೋನ್ಮಿಶ್ರಾನಿಲರೋಗಜಿತ್ಸ್ಯಾತ್ ||೪||**

**ಬಲಕೋಷ್ಠವ್ಯಾಧಿವಶಾದಾಪಂಚಪಲಾ ಭವೇನ್ಮಾತ್ರಾ ||**
**ಮೃದುಕೋಷ್ಠಬಲಾನಾಂ ಸಹಭೋಜ್ಯಂ ತತ್ಪ್ರಯೋಜ್ಯಂ ಸ್ಯಾತ್ ||೫||**

**ಅರ್ಥ—** ಗುಲ್ಮ, ಉದರ, ಬಧ್ನ, ಪ್ಲೀಹ, ಉದಾವರ್ತ, ಯೋನಿ ರೋಗಗಳಲ್ಲಿಯೂ ಮೇದ ಮತ್ತು ಕಫಯುಕ್ತವಾದ ಗುಂಭವಾತರಕ್ತದಲ್ಲಿಯೂ ||೧|| ಗೃಧ್ರಸಿ ಅರ್ಧಾಂಗವಾಯುಗಳಲ್ಲಿಯೂ ವಿರೇಚನಕ್ಕೆ ಯೋಗ್ಯವಾದ ವಾತರೋಗಗಳಲ್ಲಿಯೂ ಮೇದ, ಕಫ, ಪಿತ್ತ, ರಕ್ತಗಳಿಂದ ಪ್ರತಿಬಂಧಿಸಲ್ಪಟ್ಟ ವಾತರೋಗಗಳಲ್ಲಿಯೂ ||೨|| ಹಾಲಿನೊಡನೆ ಅಥವಾ ಮಾಂಸರಸದೊಡನೆ ತ್ರಿಫಳಾ ಕಷಾಯದೊಡನೆ ಅಥವಾ ಕಟ್ಟಿನೊಡನೆ, ಗೋಮೂತ್ರದೊಡನೆ ಅಥವಾ ಮದ್ಯದೊಡನೆ ಆಯಾ ದೋಷಗಳ ಸಂಬಂಧವನ್ನು ನೋಡಿ ಔಡಲ ಎಣ್ಣೆಯನ್ನು ಕೊಡುವದು ಒಳ್ಳೆಯದು. ||೩|| ಅದು ಸ್ವಾಭಾವಿಕವಾಗಿಯೇ ವಾತನಾಶಕವಿದ್ದು ಸಂಯೋಗವರದಿಂದಲೂ ವಿರೇಚನದಿಂದಲೂ ಮೇದ, ರಕ್ತ, ಪಿತ್ತ ಕಫಮಿಶ್ರಿತ ವಾತರೋಗಗಳನ್ನು ಗೆಲ್ಲುವದು. ||೪|| ಅದರ ಪ್ರಮಾಣವು ರೋಗಿಯ ಬಲ, ಕೋಷ್ಠ ಮತ್ತು ರೋಗ ಇವುಗಳಿಗನುಸಾರವಾಗಿ ೨೦ ತೊಲೆಯವರೆಗೆ ಇರುತ್ತದೆ. ಕೋಷ್ಠ ಮತ್ತು ಶಕ್ತಿಗಳು ಇದ್ದರೆ ಅನ್ನ ದೊಡನೆ ಅದನ್ನು ಕೂಡಿಸಿ ಕೊಡಬೇಕು. ||೫||

ಉದಾವರ್ತ ಆನಾಹಗಳಂತೆ ಮೂತ್ರಕೃಚ್ಛ್ರಗಳೂ ಬಸ್ತಿಯಲ್ಲಿ ಆಗುವದರಿಂದ ಅವನ್ನು ಹೇಳುತ್ತಾರೆ. ಮೊದಲು ಅವುಗಳ ಸಾಮಾನ್ಯ ನಿದಾನ ಮತ್ತು ಸಂಖ್ಯಾಸಂಪ್ರಾಪ್ತಿಗಳನ್ನು ಹೇಳುತ್ತಾರೆ—

**ವ್ಯಾಯಾಮತೀಕ್ಷ್ಣೌಷಧರೂಕ್ಷಮದ್ಯಪ್ರಸಂಗನಿತ್ಯದ್ರುತಪೃಷ್ಠ ಯಾನಾತ್ ||**
**ಆನೂಪಮಾಂಸಾಧ್ಯಶನಾದಜೀರ್ಣಾತ್ ಸ್ಯುರ್ಮೂತ್ರಕೃಚ್ಛ್ರಾಣಿ ನೃಣಾಂ ತಥಾಷ್ಟೌ ||೨೬||**

**ಅರ್ಥ—** ವ್ಯಾಯಾಮ, ತೀಕ್ಷ್ಣಔಷಧ, ರುಕ್ಷಪದಾರ್ಥ, ಮದ್ಯಪಾನ, ದಿನಾಲು ತೀವ್ರ ನಡೆಯುವ ಕುದುರೆ ಮುಂತಾದವುಗಳಮೇಲೆ ಕುಳಿತು ಹೋಗೋಣ, ಆನೂಪಮಾಂಸಭಕ್ಷಣ, ಅಧ್ಯಶನ, ಅಜೀರ್ಣ ಇವುಗಳಿಂದ ಮನುಷ್ಯರಿಗೆ ೮ ಪ್ರಕಾರದ ( ೧ ವಾತಜ, ೨ ಪಿತ್ತಜ, ೩ ಕಫಜ, ೪ ಸನ್ನಿಪಾತಜ, ೫ ಅಶ್ಮರಿಜ, ೬ ಶರ್ಕರಾಜ, ೭ ಅಭಿಘಾತಜ, ೮ ಶುಕ್ರವಿಘಾತಜ,) ಮೂತ್ರಕೃಚ್ಛ್ರಗಳುಂಟಾಗುತ್ತವೆ. (೨೬)

ದೋಷಜ ಮೂತ್ರಕೃಚ್ಛ್ರಗಳನ್ನು ಹೇಳುತ್ತಾರೆ—

**ಪೃಥಙ್ಮಲಾಃ ಸ್ವೈಃ ಕುಪಿತಾ ನಿದಾನೈಃ ಸರ್ವೇಽಥವಾ ಕೋಪಮುಪೇತ್ಯ ವಸ್ತೌ |**

**ಮೂತ್ರಸ್ಯ ಮಾರ್ಗಂ ಪರಿಪೀಡಯಂತಿ ಯದಾ ತದಾ ಮೂತ್ರಯ
ತೀಹ ಕೃಚ್ಛ್ರಾತ್ ||೨೭||**

**ಅರ್ಥ—** ವಾತ, ಪಿತ್ತ, ಕಫಗಳು ತಮ್ಮ ತಮ್ಮ ಕಾರಣಗಳಿಂದ ಬೇರೆ ಬೇರೆ ಅಥವಾ ಒಮ್ಮೆಲೆ ಕುಪಿತವಾಗಿ ಬಸ್ತಿಯಲ್ಲಿದ್ದ ಮೂತ್ರದ ಮಾರ್ಗವನ್ನು ಪೀಡಿಸುವದರಿಂದ ರೋಗಿಯು ಕಷ್ಟದಿಂದ ಮೂತ್ರ ಬಿಡುತ್ತಾನೆ. ||೨೭||

**ತೀವ್ರಾ ಹಿ ರುಗ್ ವಂಕ್ಷಣಬಸ್ತಿಮೇಢ್ರೇ ಸ್ವಲ್ಪಂ ಮುಹುರ್ಮೂತ್ರಯ
ತೀಹವಾತಾತ್ ||**

**ಪೀತಂ ಸರಕ್ತಂ ಸರುಜಂ ಸದಾಹಂ ಕೃಚ್ಛ್ರಂ ಮುಹುರ್ಮೂತ್ರಯ
ತೀಹ ಪಿತ್ತಾತ್ ||೨೮||**

**ಅರ್ಥ—** ವಾತದಿಂದುಂಟಾದ ಮೂತ್ರಕೃಚ್ಛ್ರದಲ್ಲಿ ಕಿಬ್ಬೊಟ್ಟೆ, ಬಸ್ತಿ, ಶಿಶ್ನಗಳಲ್ಲಿ ಬಹಳಸೋವು ಇದ್ದು, ಆಗಾಗ ಸ್ವಲ್ಪ ಮೂತ್ರವನ್ನು ಮಾಡುತ್ತಾನೆ. ಪಿತ್ತಜ ಮೂತ್ರಕೃಚ್ಛ್ರದಲ್ಲಿ ಹಳದಿಬಣ್ಣ, ರಕ್ತ, ಸೋವು, ದಾಹಯುಕ್ತವಾದ ಮೂತ್ರವನ್ನು ಆಗಾಗ ಬಿಡುತ್ತಾನೆ. ||೨೮||

**ಬಸ್ತೇಃ ಸಲಿಂಗಸ್ಯ ಗುರುತ್ವಶೋಥೌ ಮೂತ್ರಂ ಸಪಿಚ್ಛಂ ಕಫ
ಮೂತ್ರಕೃಚ್ಛ್ರೇ ||**

**ಸರ್ವಾಣಿ ರೂಪಾಣಿ ಚ ಸನ್ನಿಪಾತಾತ್ ಭವಂತಿ ತತ್ ಕೃಚ್ಛ್ರತಮಂ
ಚ ಕೃಚ್ಛ್ರಮ್ ||೨೯||**

**ಅರ್ಥ—** ಕಫಮೂತ್ರ ಕೃಚ್ಛ್ರದಲ್ಲಿ ಬಸ್ತಿ ಶಿಶ್ನಗಳಿಗೆ ಜಡತ್ವ ಮತ್ತು ಬಾವು ಇದ್ದು ಮೂತ್ರವು ಜಿಗುಟು ಇರುತ್ತದೆ. ಸನ್ನಿಪಾತಜ ಮೂತ್ರಕೃಚ್ಛ್ರದಲ್ಲಿ ಮೇಲೆ ಹೇಳಿದ ಎಲ್ಲ ಲಕ್ಷಣಗಳೂ ಇರುತ್ತವೆ. ಅದು ಕಷ್ಟಸಾಧ್ಯ||೨೯||

ಅಶ್ಮಜ ಮೂತ್ರಕೃಚ್ಛ್ರವನ್ನು ಹೇಳಹೊರಟು, ಮೊದಲು ಅದು ಉಂಟಾಗುವ ಬಗೆಯನ್ನು ಹೇಳುತ್ತಾರೆ—

**ವಿಶೋಷಯೇದ್ ಬಸ್ತಿಗತಂ ಸಶುಕ್ರಂ ಮೂತ್ರಂ ಸಪಿತ್ತಂ ಪವನಃ
ಕಫಂ ವಾ ||**

**ಯದಾ ತದಾಶ್ಮರ್ಯುಪಜಾಯತೇ ತು ಕ್ರಮೇಣ ಪಿತ್ತೇಷ್ವಿವ
ರೋಚನಾ ಗೋಃ ||೩೦||**

**ಅರ್ಥ—** ವಾತವು ಬಸ್ತಿಯಲ್ಲಿರುವ ಶುಕ್ರಮೂತ್ರಗಳನ್ನು ಒಣಗಿಸಿದರೆ ಶುಕ್ರಾಶ್ಮರಿಯೂ, ಪಿತ್ತಮೂತ್ರಗಳನ್ನು ಒಣಗಿಸಿದರೆ, ಪಿತ್ತಾಶ್ಮರಿಯೂ, ಕಫ ಮೂತ್ರಗಳನ್ನು ಒಣಗಿದರೆ ಕಫಾಶ್ಮರಿಯೂ ಪಿತ್ತಗಳಲ್ಲಿ ಗೋರೋಚನವುಂಟಾ ಗುವಂತೆ ಉಂಟಾಗುತ್ತದೆ. ||೩೦||

**ಕದಂಬಪುಷ್ಪಾಕೃತಿರಶ್ಮತುಲ್ಯಾಶ್ಲಕ್ಷ್ಣಾ ತ್ರಿಪುಟ್ಯಾಪ್ಯಥವಾಽಪಿಮೃದ್ವೀ||**
**ಮೂತ್ರಸ್ಯ ಚೇನ್ಮಾರ್ಗಮುಪೈತಿ ರುಧ್ವಾ ಮೂತ್ರಂರುಜಂ ತಸ್ಯ**
**ಕರೋತಿ ಬಸ್ತೌ ||೩೧||**

**ಅರ್ಥ—** ಅದು ಕದಂಬ ಪುಷ್ಪದಂತೆ, ಅಥವಾ ತ್ರಿಕೋಣದಂತೆ, ಕಲ್ಲಿನಂತೆ ಒಮ್ಮೊಮ್ಮೆ ನುಣುಪು, ಒಮ್ಮೊಮ್ಮೆ ಮೆತ್ತಗೆ ಇರುತ್ತದೆ. ಅದು ಮೂತ್ರಮಾರ್ಗದಲ್ಲಿ ಬಂದರೆ ಅದನ್ನು ಪ್ರತಿಬಂಧಿಸಿ ಬಸ್ತಿಯಲ್ಲಿ ನೋವ ನ್ನುಂಟುಮಾಡುವದು. ||೩೧||

**ಮೃದ್ನಾತಿ ಮೇಢ್ರಂ ಸ ತು ವೇದನಾರ್ತೋ ಮುಹುಃ ಶಕೃನ್ಮುಂಚತಿ**
**ವೇಪತೇ ಚ ||**
**ಸಸೇವನೀಮೇಹನಬಸ್ತಿಶೂಲಂ ವಿಶೀರ್ಣಧಾರಂ ಚ ಕರೋತಿ**
**ಮೂತ್ರಮ್ ||೩೨||**

**ಅರ್ಥ—** ಅವನು ವೇದನೆಯಿಂದ ಪೀಡಿತನಾಗಿ ಶಿಶ್ನವನ್ನು ಆಗಾಗ ಕಿವುಚುವನು; ಮಲಬಿಡುವನು; ನಡಗುವನು; ಸೇವನಿ, ಶಿಶ್ನ ಬಸ್ತಿಗಳಲ್ಲಿ ಶೂಲವಾಗುವದು. ಮೂತ್ರದ ಧಾರೆಯು ಆಗಾಗ ಕಡಿಯುವದು. ||೩೨||

**ಕ್ಷೋಭಾತ್ ಕ್ಷತೇ ಮೂತ್ರಯತೀಯ ಸಾಸ್ರಂ ತಸ್ಯಾಃ ಸುಖಂ**
**ಮೂತ್ರಯತಿ ವ್ಯಪಾಯಾತ್ ||**
**ಏಷಾಶ್ಮರೀ ಮಾರುತಭಿನ್ನಮೂರ್ತಿಃ ಸ್ಯಾಚ್ಛರ್ಕರಾ ಮೂತ್ರಪಥಾತ್**
**ಕ್ಷರಂತೀ ||೩೩||**

**ಅರ್ಥ—** ಅಶ್ಮರಿಯು ಚುಚ್ಚುವದರಿಂದ ಕ್ಷತವಾದರೆ ರಕ್ತಯುಕ್ತ ಮೂತ್ರವನ್ನು ಬಿಡುವನು. ಇದೇ ಅಶ್ಮರಿಯು ವಾತದಿಂದ ಒಡೆದು ಸಣ್ಣಾಗಿ ಉಸುಕಿನಂತೆ ಮೂತ್ರದ್ವಾರದಿಂದ ಬೀಳಹತ್ತಿದರೆ ಅದು ಶರ್ಕರೆಯೆಂದು ಕರೆ ಯಲ್ಪಡುತ್ತದೆ. ||೩೩||

ಶುಕ್ರಜ ಮೂತ್ರಕೃಚ್ಛ್ರವನ್ನು ಹೇಳುತ್ತಾರೆ—

**ಶುಕ್ರಂ ಮಲಾಶ್ಚೈವ ಪೃಥಕ್ ಪೃಥಗ್ವಾ ಮೂತ್ರಾಯನಸ್ಥಾಃ ||**
**ಪರಿಪೀಡಯಂತಿ ||**
**ತದ್ವ್ಯಾಹತಂ ಮೇಹನಬಸ್ತಿಶೂಲಂ ಮೂತ್ರಂ ಸಶುಕ್ರಂ ಕುರುತೇ**
**ವಿಬದ್ಧಮ್ ||೩೪||**
**ಸ್ತಬ್ಧಶ್ಚ ಶೂನೋ ಭೃಶವೇದನಶ್ಚ ತುದ್ಯೇತ ಬಸ್ತಿರ್ವೃಷಣೌ ಚ**
**ತಸ್ಯ ||**

**ಅರ್ಥ—** ಮೂತ್ರದಲ್ಲಿರುವ ಶುಕ್ರ ಮತ್ತು ಎಲ್ಲ ದೋಷಗಳು ಕೂಡಿ ಅಥವಾ ಒಂದೊಂದಾಗಿ ಅವನ್ನು ಪೀಡಿಸುವವು. ಆಗ ರೋಗಿಗೆ ಎಪ್ಪುಗಳಿಂದ ಪ್ರತಿಬಂಧವಾಗುವದರಿಂದ ಶುಕ್ರಸಹಿತವಾದ ಮೂತ್ರವು ತಟ್ಟಿಸಿ ತಟ್ಟಿಸಿ ಆಗುವದು. ||೩೪|| ಮತ್ತು ಶಿಸ್ನ ಬಸ್ತಿಗಳಲ್ಲಿ ನೋವುಂಟಾಗುವದು. ಅವನ ಬಸ್ತಿ ಮತ್ತು ವೃಷಣಗಳು ಬಾತು ಸ್ತಬ್ಧವಾಗಿ ಬಹಳ ವೇದನೆಯಿಂದ ಪೀಡಿತವಾಗುವವು. || ೩೪|| ||

ಆಗಂತು ಮೂತ್ರಕೃಚ್ಛ್ರವನ್ನು ಹೇಳುತ್ತಾರೆ—

**ಕ್ಷತಾಭಿಘಾತಾತ್ ಕ್ಷತಜಂ ಕ್ಷಯಾದ್ ವಾ ಪ್ರಕೋಪಿತಂ ಬಸ್ತಿಗತಂ**
**ವಿಬದ್ಧಮ್ ||೩೫||**
**ತೀವ್ರಾರ್ತಿ ಮೂತ್ರೇಣ ಸಹಾಶ್ಮರೀತ್ವಮಾಯಾತಿ ತಸ್ಮಿನ್ನತಿಸಂಚಿತೇ ಚ||**
**ಆಧ್ಮಾತತಾ ಬಸ್ತಿಸುಗೌರವಂ ಚ ಬಸ್ತೇರ್ಲಘುತ್ವಂ ಚ ವಿನಿಃಸೃತೇ**
**ಸ್ಯಾತ್ ||೩೬||**

**ಅರ್ಥ—** ಗಾಯ ಅಥವಾ ಬಡತದಿಂದ ಅಥವಾ ರಸಾಧಿ ಧಾತುಗಳ ಕ್ಷಯದಿಂದ ಕುಪಿತವಾದ ರಕ್ತವು ಗಟ್ಟಿಯಾಗಿ ||೩೫|| ಮೂತ್ರದೊಡನೆ ಕೂಡಿ ಅಶ್ಮರಿಯಾಗಿ ನೋವನ್ನುಂಟುಮಾಡುವದು. ಅದು ಬಹಳ ದೊಡ್ಡದಾದರೆ ಬಸ್ತಿಯು ಉಬ್ಬುವದು, ಮತ್ತು ಜಡವಾಗುವದು. ಅದು ಹೊರಟುಹೋಗಲು ಬಸ್ತಿಯು ಹಗುರಾಗುವದು. ||೩೬||

ಮೂತ್ರಕೃಚ್ಛ್ರ ಚಿಕಿತ್ಸೆಯನ್ನು ಕ್ರಮದಿಂದ ಹೇಳಹೊರಟು ಮೊದಲು ವಾತಮೂತ್ರಕೃಚ್ಛ್ರ ಚಿಕಿತ್ಸೆಯನ್ನು ಹೇಳುತ್ತಾರೆ—

**ಅಭ್ಯಂಜನಸ್ನೇಹನಿರೂಹಬಸ್ತಿಸ್ವೇದೋಪನಾಹೋತ್ತರಬಸ್ತಿಸೇಕಾನ್||**
**ಸ್ಥಿರಾದಿಭಿರ್ವಾತಹರೈಶ್ಚ ಸಿದ್ಧಾನ್ದದ್ಯಾದ್ರಸಾಂಶ್ಚಾನಿಲಮೂತ್ರಕೃಚ್ಛ್ರೇ**

**ಅರ್ಥ—** ವಾತಮೂತ್ರಕೃಚ್ಛ್ರದಲ್ಲಿ ಅಭ್ಯಂಗ, ಸ್ನೇಹ, ನಿರೂಹ ಬಸ್ತಿ, ಸ್ವೇದ, ಉಪನಾಹ, ಉತ್ತರಬಸ್ತಿ, ಪರಿಷೇಕಗಳನ್ನು ಮಾಡಬೇಕು. ವಾತನಾಶಕ ಲಘುಪಂಚಮೂಲ ಮುಂತಾದ ಔಷಧಗಳಿಂದ ಸಿದ್ಧಮಾಡಿದ ಮಾಂಸರಸಗಳನ್ನು ತಿನ್ನಬೇಕು. ||೩೭||

**ಪುನರ್ನವೈರಂಡಶತಾವರೀಭಿಃ ಪತ್ತೂರವೃಕ್ಷೀರ ಬಲಾಶ್ಮಭಿದ್ಭಿಃ ||**
**ದ್ವಿಪಂಚಮೂಲೇನ ಕುಲತ್ಥಕೋಲಯವೈಶ್ಚ ತೋಯೋತ್ಕ್ವಥಿತೇ ಕಷಾಯೇ ||೩೮||**

**ತೈಲಂ ವರಾಹರ್ವ್ಯವಸಾ ಘೃತಂ ತೈಸ್ತೈರೇವ ಕಲ್ಕೈರ್ಲವಣೈಶ್ಚ ಸಾಧ್ಯಮ್ ||**
**ತನ್ಮಾತ್ರಯಾಶು ಪ್ರತಿಹಂತಿ ಪೀತಂ ಶೂಲಾನ್ವಿತಂ ಮಾರುತಮೂತ್ರ ಕೃಚ್ಛ್ರಮ್ ||೩೯||**

**ಅರ್ಥ—** ಬಿಳೀಗಣಜಲಬೇರು, ಔಡಲಬೇರು, ಶತಾವರಿ ಇವುಗಳ ಕಷಾಯದಲ್ಲಿ ಅವುಗಳದೇ ಕಲ್ಕವನ್ನೂ ಪಂಚಲವಣಗಳನ್ನೂ ಸ್ನೇಹದ ನಾಲ್ಕನೇ ಪಾಲಿನಷ್ಟು ಹಾಕಿ ತೈಲವನ್ನು ಅಥವಾ ಹಂದಿಯ ನೆಣವನ್ನೂ ಕರಡಿಯ ನೆಣ, ಅಥವಾ ಆಕಳ ತುಪ್ಪವನ್ನು ಸಿದ್ಧಮಾಡಬೇಕು. ಇದರಂತೆ ಪತ್ತೂರ (ಶಾಲಿಂಚಂಶಾಕ) ಕೆಂಪುಗಣಜಲ ಬೇರು, ಕಳ್ಳಂಗಡ್ಲೆ, ಪಾಷಾಣ ಭೇದ ಇವುಗಳ ಕಷಾಯದಲ್ಲಿ ಅವುಗಳ ಚೂರ್ಣವನ್ನು ಪಂಚಲವಣಗಳನ್ನು ಸ್ನೇಹದ ೪ನೇ ಪಾಲುಹಾಕಿ ತೈಲ ಅಥವಾ ಹಂದಿಯನೆಣ ಅಥವಾ ಕರಡಿಯ ನೆಣ ಅಥವಾ ಆಕಳ ತುಪ್ಪವನ್ನು ಸಿದ್ಧಪಡಿಸಬೇಕು. ಆದರಂತೆ ದಶಮೂಲ ಕಷಾಯದಲ್ಲಿ ದಶಮೂಲಗಳ ಚೂರ್ಣ ಪಂಚಲವಣಗಳನ್ನು ಸ್ನೇಹದ ನಾಲ್ಕನೇ ಪಾಲಿನಷ್ಟು, ಹಾಕಿ ಮೇಲೆ ಹಾಕಿದ ಸ್ನೇಹಗಳನ್ನು ಇವುಗಳಂತೆಯೇ ಹುರುಳಿ ಬೋರೆ ಜವೆಗಳ ಕಷಾಯದಲ್ಲಿ ಅವುಗಳ ಚೂರ್ಣ, ಪಂಲವಣಗಳ ಕಲ್ಕವನ್ನು ಸ್ನೇಹದ ನಾಲ್ಕನೇ ಪಾಲು ಹಾಕಿ ಮೇಲಿನ ಸ್ನೇಹಗಳನ್ನು ಸಿದ್ಧ ಮಾಡಬೇಕು. ಈ ತೈಲ, ನೆಣ, ಘೃತಗಳು ಯೋಗ್ಯ ಪ್ರಮಾಣದಿಂದ ಕೂಡಿ ದರೆ ಶೂಲವುಳ್ಳ ವಾತ ಮೂತ್ರಕೃಚ್ಛ್ರಗಳನ್ನು ಕಳೆಯುವವು. ||೩೮–೩೯||

**ಏತಾನಿ ಚಾನ್ಯಾನಿ ವರೌಷಧಾನಿ ಹಿತಾನಿ ಪಿಷ್ಟಾನ್ಯಪಿ ಚೋಪನಾಹೇ ||**
**ಸ್ಯುರ್ಲಾಭತಸ್ತೈಲಫಲಾನಿ ಚೈವ ಸ್ನೇಹಾಮ್ಲಯುಕ್ತಾನಿ ಸುಖೋಷ್ಣವಂತಿ ||೪೦||**

**ಅರ್ಥ—** ಮೇಲೆ ಹೇಳಿದ ಉತ್ತಮ ಔಷಧಗಳನ್ನು ತಕ್ಕಷ್ಟು ತಕ್ಕೊಂಡು ಕಲ್ಕಮಾಡಿ ಉಪನಾಹಕ್ಕಾಗಿ ಉಪಯೋಗಿಸಿದರೆ ಹಿತವಾಗುವವು. ಇದರಂತೆ (ಆಗಸೆ, ಎಳ್ಳು ಮುಂತಾದ) ತೈಲಫಲಗಳನ್ನು ಸ್ನೇಹ ಆಮ್ಲದೊಡನೆ ಕೂಡಿಸಿ ಬೆಚ್ಚಗೆಮಾಡಿ ಕಟ್ಟಿದರೂ ಹಿತವಾಗುತ್ತದೆ. ॥ ೪೦ ॥

ಪಿತ್ತಮೂತ್ರಕೃಚ್ಛ್ರದ ಚಿಕಿತ್ಸೆಯನ್ನು ಹೇಳುತ್ತಾರೆ—

**ಸೇಕಾವಗಾಹಾಃ ಶಿಶಿರಾಃ ಪ್ರದೇಹಾ ಗ್ರೈಷ್ಮೋ ವಿಧಿರ್ಬಸ್ತಿ**
**ಪಯೋವಿರೇಕಾಃ ॥**
**ದ್ರಾಕ್ಷಾವಿದಾರೀಕ್ಷುರಸೈರ್ಘೃತೈಶ್ಚ ಕೃಚ್ಛ್ರೇಷು ಪಿತ್ತ**
**ಪ್ರಭವೇಷು ಕಾರ್ಯಾಃ ॥೪೧॥**

**ಅರ್ಥ—** ಪಿತ್ತಮೂತ್ರಕೃಚ್ಛ್ರದಲ್ಲಿ ಸ್ನಾನ, ಅವಗಾಹನ, ಗ್ರೀಷ್ಮ ಋತುವಿನಲ್ಲಿಯ ( ತಸ್ಯಾಶಿಲೀಯ ಅಧ್ಯಾಯದಲ್ಲಿ ಹೇಳಿದ) ಆಹಾರ ವಿಹಾರ, ಮತ್ತು ದ್ರಾಕ್ಷೆ, ನೆಲಗುಂಬಳ, ಕಬ್ಬಿನ ಹಾಲು, ಘೃತ ಇವುಗಳಿಂದ ಮಾಡಿದ ಬಸ್ತಿ, ಕ್ಷೀರ ವಿರೇಚನಗಳನ್ನು ತಕ್ಕೊಳ್ಳಬೇಕು. ॥ ೪೧ ॥

**ಶತಾವರೀ ಕಾಶಕುಶಶ್ವದಂಷ್ಟ್ರಾ ವಿದಾರಿಶಾಲೀಕ್ಷು ಕಶೇರುಕಾಣಾಂ ॥**
**ಕ್ವಾಥಂ ಸುಶೀತಂ ಮಧುಶರ್ಕರಾಭ್ಯಾಂ ಯುಕ್ತ್ಯಾ ಪಿಬೇತ್**
**ಪೈತ್ತಿಕಮೂತ್ರಕೃಚ್ಛ್ರೇ ॥ ೪೨ ॥**

**ಅರ್ಥ—** ಶತಾವರಿ, ಕಾಶ(ಕಾಸಗಿಹುಲ್ಲು) ದರ್ಭ, ನೆಗ್ಗಿಲು, ನೆಲಗುಂಬಳ, ಭತ್ತಕಬ್ಬುಗಳ ಬೇರು, ಕಶೇರುಕ (ಕೊತ್ತೀಗಡ್ಡಿ) ಇವುಗಳ, ಕಷಾಯವನ್ನು ಮಾಡಿ ಆರಿಸಿ ಜೇನು—ಸಕ್ಕರೆಗಳನ್ನು ಹಾಕಿ ಯೋಗ್ಯಪ್ರಮಾಣದಲ್ಲಿ ಪಿತ್ತಜಮೂತ್ರಕೃಚ್ಛ್ರದಲ್ಲಿ ಕುಡಿಯಬೇಕು.

**ಪಿಬೇತ್ಕಷಾಯಂ ಕಮಲೋತ್ಪಲಾನಾಂ ಶೃಂಗಾಟಕಾನಾಮಥವಾ**
**ವಿದಾರ್ಯಾಃ ॥**
**ದಂಡೋತ್ಪಲಾನಾಮಥವಾಪಿ ಮೂಲಂ ಪೂರ್ವೇಣ ಕಲ್ಪೇನ ತಥಾಂಬು**
**ಶೀತಮ್ ॥ ೪೩ ॥**

**ಅರ್ಥ—** ನೀಲಕಮಲ, ಶಿಂಗಾಡೆ ಅಥವಾ ನೆಲಗುಂಬಳ ಅಥವಾ ದಂಡೋತ್ಪಲ (ತೃಣವಿಶೇಷ) ದ ಮೂಲ, ಇವುಗಳ ಕಷಾಯದಲ್ಲಿ ಅಥವಾ ತಣ್ಣೀರಿನಲ್ಲಿ ಜೇನು ಸಕ್ಕರೆಗಳನ್ನು ಹಾಕಿ ಕುಡಿಯಬೇಕು. ॥ ೪೩ ॥

**ಏರ್ವಾರುಬೀಜಂ ತ್ರಪುಷಾತ್ ಕುಸುಂಭಾತ್ ಸಕುಂಕುಮಃ ಸ್ಯಾದ್ ವೃಷಕಶ್ಚ ಪೇಯಃ ||**
**ದ್ರಾಕ್ಷಾರಸೇನಾಶ್ಮರಿಶರ್ಕರಾಸು ಕೃಚ್ಛ್ರೇಷು ಸರ್ವೇಷ್ವಪಿ ಶಸ್ತಮೇತತ್ || ೪೪ ||**

**ಅರ್ಥ—** ಮೂತ್ರಾಶ್ಮರಿ, ಮೂತ್ರಶರ್ಕರೆಗಳಲ್ಲಿ ಮತ್ತು ಎಲ್ಲ ಮೂತ್ರ ಕೃಚ್ಛ್ರಗಳಲ್ಲಿ ಸವತೆಯಬೀಜ, ತ್ರಪುಸ (ಸವತೆಯ ಜಾತಿ) ದ ಬೀಜಗಳನ್ನು ಕುಸುಂಭಬೀಜ, ಆಡಸಲ ಮತ್ತು ಕೇಶರಗಳನ್ನು ದ್ರಾಕ್ಷಾರಸದೊಡನೆ ಕುಡಿಯಬೇಕು. || ೪೪ ||

**ಏರ್ವಾರುಬೀಜಂ ಮಧುಕಂ ಸದಾರ್ವಿ ಪೈತ್ತೇ ಪಿಬೇತ್ ತಂಡುಲಧಾವನೇನ ||**
**ದಾರ್ವೀಂ ತಥೈವಾಮಲಕೀರಸೇನ ಸಮಾಕ್ಷಿಕಾಂ ಪಿತ್ತಕೃತೇ ತು ಕೃಚ್ಛ್ರೇ || ೪೫ ||**

**ಅರ್ಥ—** ಸವತೆಯ ಬೀಜ, ಜೇಷ್ಠಮಧು, ಮರಅರಿಷಿಣ ಇವುಗಳನ್ನು ಅಕ್ಕೀ ತೊಳೆದ ನೀರಿನಲ್ಲಿ ಅಥವಾ ಮರ ಅರಿಷಿಣವನ್ನು ನೆಲ್ಲಿಯ ಕಷಾಯದಲ್ಲಿ ಜೇನುಹಾಕಿ ಪಿತ್ತಜ ಮೂತ್ರ ಕೃಚ್ಛ್ರದಲ್ಲಿ ತಕ್ಕೊಳ್ಳಬೇಕು. ||೪೫||

**ಕಫಮೂತ್ರ ಕೃಚ್ಛ್ರ ಚಿಕಿತ್ಸೆಯನ್ನು ಹೇಳುತ್ತಾರೆ.**

**ಕ್ಷಾರೋಷ್ಣ ತೀಕ್ಷ್ಣೋಷ್ಣಮನ್ನಪಾನಂ ಸ್ವೇದೋ ಯವಾನ್ನಂ ವಮನಂ ನಿರೂಹಾಃ ||**
**ತಕ್ರಂ ಸತಿಕ್ತೌಷಧಸಿದ್ಧತೈಲಮಭ್ಯಂಗಪಾನಂ ಕಫಮೂತ್ರಕೃಚ್ಛ್ರೇ || ೪೬ ||**

**ಅರ್ಥ—** ಕಫಮೂತ್ರ ಕೃಚ್ಛ್ರದಲ್ಲಿ ಕ್ಷಾರ, ಉಷ್ಣ,ತೀಕ್ಷ್ಣ ಕಾರವಾದ ಅನ್ನಪಾನ ಸ್ವೇದ, ಜವೆಯ ಅನ್ನ, ವಮನ, ನಿರೂಹ ಬಸ್ತಿ, ಮಜ್ಜಿಗೆ ಕಹಿ ಔಷಧಗಳಿಂದ ಸಿದ್ಧವಾದ ತೈಲದ ಅಭ್ಯಂಗ ಪಾನಗಳನ್ನು ಮಾಡಬೇಕು. ||೪೬||

**ವ್ಯೋಷಂ ಶ್ವದಂಷ್ಟ್ರಾತ್ರುಟಿನಾರಸಾಸ್ಥಿ ಕೋಲಪ್ರಮಾಣಂ ಮಧುಮೂತ್ರಯುಕ್ತಮ್ ||**

**ಅರ್ಥ—** ಮೇಲೆ ಹೇಳಿದ ಉತ್ತಮ ಔಷಧಗಳನ್ನು ತಕ್ಕಷ್ಟು ತಕ್ಕೊಂಡು ಕಲ್ಕಮಾಡಿ ಉಪನಾಹಕ್ಕಾಗಿ ಉಪಯೋಗಿಸಿದರೆ ಹಿತವಾಗುವವು. ಇದರಂತೆ (ಅಗಸೆ, ಎಳ್ಳು ಮುಂತಾದ) ತೈಲಫಲಗಳನ್ನು ಸ್ನೇಹ ಆಮ್ಲದೊಡನೆ ಕೂಡಿಸಿ ಬೆಚ್ಚಗೆಮಾಡಿ ಕಟ್ಟಿದರೂ ಹಿತವಾಗುತ್ತದೆ. || ೪೦ ||

ಪಿತ್ತಮೂತ್ರಕೃಚ್ಛ್ರದ ಚಿಕಿತ್ಸೆಯನ್ನು ಹೇಳುತ್ತಾರೆ—

**ಸೇಕಾವಗಾಹಾಃ ಶಿಶಿರಾಃ ಪ್ರದೇಹಾ ಗ್ರೈಷ್ಮೋ ವಿಧಿರ್ಬಸ್ತಿ ಪಯೋವಿರೇಕಾಃ ||**
**ದ್ರಾಕ್ಷಾವಿದಾರೀಕ್ಷುರಸೈರ್ಘೃತೈಶ್ಚ ಕೃಚ್ಛ್ರೇಷು ಪಿತ್ತ ಪ್ರಭವೇಷು ಕಾರ್ಯಾಃ ||೪೧||**

**ಅರ್ಥ—** ಪಿತ್ತಮೂತ್ರಕೃಚ್ಛ್ರದಲ್ಲಿ ಸ್ನಾನ, ಅವಗಾಹನ, ಗ್ರೀಷ್ಮ ಋತುವಿನಲ್ಲಿಯ ( ತಸ್ಯಾಶಿತೀಯ ಅಧ್ಯಾಯದಲ್ಲಿ ಹೇಳಿದ) ಆಹಾರ ವಿಹಾರ, ಮತ್ತು ದ್ರಾಕ್ಷೆ, ನೆಲಗುಂಬಳ, ಕಬ್ಬಿನ ಹಾಲು, ಘೃತ ಇವುಗಳಿಂದ ಮಾಡಿದ ಬಸ್ತಿ, ಕ್ಷೀರ ವಿರೇಚನಗಳನ್ನು ತಕ್ಕೊಳ್ಳಬೇಕು. || ೪೧ ||

**ಶತಾವರೀ ಕಾಶಕುಶಶ್ವದಂಷ್ಟ್ರಾ ವಿದಾರಿಶಾಲೀಕ್ಷು ಕಶೇರುಕಾಣಾಂ ||**
**ಕ್ವಾಥಂ ಸುಶೀತಂ ಮಧುಶರ್ಕರಾಭ್ಯಾಂ ಯುಕ್ತ್ವಾ ಪಿಬೇತ್ ಪೈತ್ತಿಕಮೂತ್ರಕೃಚ್ಛ್ರೇ || ೪೨ ||**

**ಅರ್ಥ—** ಶತಾವರಿ, ಕಾಶ(ಕಾಸಗಿಹುಲ್ಲು) ದರ್ಭ, ನೆಗ್ಗಿಲು, ನೆಲಗುಂಬಳ, ಭತ್ತ ಕಬ್ಬುಗಳ ಬೇರು, ಕಶೇರುಕ (ಕೊತ್ತೀಗಡ್ಡಿ) ಇವುಗಳ, ಕಷಾಯವನ್ನು ಮಾಡಿ ಆರಿಸಿ ಜೇನು—ಸಕ್ಕರೆಗಳನ್ನು ಹಾಕಿ ಯೋಗ್ಯಪ್ರಮಾಣದಲ್ಲಿ ಪಿತ್ತಜಮೂತ್ರಕೃಚ್ಛ್ರದಲ್ಲಿ ಕುಡಿಯಬೇಕು.

**ಪಿಬೇತ್ಕಷಾಯಂ ಕಮಲೋತ್ಪಲಾನಾಂ ಶೃಂಗಾಟಕಾನಾಮಥವಾ ವಿದಾರ್ಯಾಃ ||**
**ದಂಡೋತ್ಪಲಾನಾಮಥವಾಪಿ ಮೂಲಂ ಪೂರ್ವೇಣ ಕಲ್ಪೇನ ತಥಾಂಬು ಶೀತಮ್ || ೪೩ ||**

**ಅರ್ಥ—** ನೀಲಕಮಲ, ಶಿಂಗಾಡೆ ಅಥವಾ ನೆಲಗುಂಬಳ ಅಥವಾ ದಂಡೋತ್ಪಲ (ತೃಣವಿಶೇಷ) ದ ಮೂಲ, ಇವುಗಳ ಕಷಾಯದಲ್ಲಿ ಅಥವಾ ತಣ್ಣೀರಿನಲ್ಲಿ ಜೇನು ಸಕ್ಕರೆಗಳನ್ನು ಹಾಕಿ ಕುಡಿಯಬೇಕು. || ೪೩ ||

**ಏರ್ವಾರುಬೀಜಂ ತ್ರಪುಷಾತ್ ಕುಸುಂಭಾತ್ ಸಕುಂಕುಮಃ ಸ್ಯಾದ್ ವೃಷಕಶ್ಚ ಪೇಯಃ ||**
**ದ್ರಾಕ್ಷಾರಸೇನಾಶ್ಮರಿಶರ್ಕರಾಸು ಕೃಚ್ಛ್ರೇಷು ಸರ್ವೇಷ್ವಪಿ ಶಸ್ತಮೇತತ್ || ೪೪ ||**

**ಅರ್ಥ—** ಮೂತ್ರಾಶ್ಮರಿ, ಮೂತ್ರಶರ್ಕರೆಗಳಲ್ಲಿ ಮತ್ತು ಎಲ್ಲ ಮೂತ್ರ ಕೃಚ್ಛ್ರಗಳಲ್ಲಿ ಸವತೆಯಬೀಜ, ತ್ರಪುಸ (ಸವತೆಯ ಜಾತಿ) ದ ಬೀಜಗಳನ್ನು ಕುಸುಂಭಬೀಜ, ಅಡಸಲ ಮತ್ತು ಕೇಶರಗಳನ್ನು ದ್ರಾಕ್ಷಾರಸದೊಡನೆ ಕುಡಿಯಬೇಕು. || ೪೪ ||

**ಏರ್ವಾರುಬೀಜಂ ಮಧುಕಂ ಸದಾರ್ವಿ ಪೈತ್ತೇ ಪಿಬೇತ್ ತಂಡುಲ ಧಾವನೇನ ||**
**ದಾರ್ವೀಂ ತಥೈವಾಮಲಕೀರಸೇನ ಸಮಾಕ್ಷಿಕಾಂ ಪಿತ್ತಕೃತೇ ತು ಕೃಚ್ಛ್ರೇ || ೪೫ ||**

**ಅರ್ಥ—** ಸವತೆಯ ಬೀಜ, ಜೇಷ್ಠಮಧು, ಮರಅರಿಷಿಣ ಇವುಗಳನ್ನು ಅಕ್ಕಿ ತೊಳೆದ ನೀರಿನಲ್ಲಿ ಅಥವಾ ಮರ ಅರಿಷಿಣವನ್ನು ನೆಲ್ಲಿಯ ಕಷಾಯದಲ್ಲಿ ಜೇನುಹಾಕಿ ಪಿತ್ತಜ ಮೂತ್ರ ಕೃಚ್ಛ್ರದಲ್ಲಿ ತಕ್ಕೊಳ್ಳಬೇಕು. ||೪೫||

**ಕಫಮೂತ್ರ ಕೃಚ್ಛ್ರ ಚಿಕಿತ್ಸೆಯನ್ನು ಹೇಳುತ್ತಾರೆ.**

**ಕ್ಷಾರೋಷ್ಣ ತೀಕ್ಷ್ಣೋಷ್ಣಮನ್ನಪಾನಂ ಸ್ವೇದೋ ಯವಾನ್ನಂ ವಮನಂ ನಿರೂಹಾಃ ||**
**ತಕ್ರಂ ಸತಿಕ್ತೌಷಧಸಿದ್ಧತೈಲಮಭ್ಯಂಗಪಾನಂ ಕಫಮೂತ್ರಕೃಚ್ಛ್ರೇ || ೪೬ ||**

**ಅರ್ಥ—** ಕಫಮೂತ್ರ ಕೃಚ್ಛ್ರದಲ್ಲಿ ಕ್ಷಾರ, ಉಷ್ಣ,ತೀಕ್ಷ್ಣ ಕಾರವಾದ ಅನ್ನಪಾನ ಸ್ವೇದ, ಜವೆಯ ಅನ್ನ, ವಮನ, ನಿರೂಹ ಬಸ್ತಿ, ಮಜ್ಜಿಗೆ ಕಹಿ ಔಷಧಗಳಿಂದ ಸಿದ್ಧವಾದ ತೈಲದ ಅಭ್ಯಂಗ ಪಾನಗಳನ್ನು ಮಾಡಬೇಕು. ||೪೬||

**ವ್ಯೋಷಂ ಶ್ವದಂಷ್ಟ್ರಾತ್ರುಟಿನಾರಸಾಸ್ಥಿ ಕೋಲಪ್ರಮಾಣಂ ಮಧುಮೂತ್ರಯುಕ್ತಮ್ ||**

**ಪಿಬೇತ್ ತ್ರುಟಿಂ ಕ್ಷೌದ್ರಯುತಾಂ ಕದಲ್ಯಾ ರಸೇನ ಕೈಟರ್ಯ ರಸೇನ ವಾಪಿ ||೪೭||**

**ಅರ್ಥ—** ತ್ರಿಕಟು, ನೆಗ್ಗಿಲು, ಯಾಬಕ್ಕಿ, ಸಾರಸಪಕ್ಷಿಯ ಎಲವು ಇವುಗಳ ಚೂರ್ಣವನ್ನು ಜೇನು ಗೋಮೂತ್ರಗಳನ್ನು ಹಾಕಿ ಬೋರೆಯ ಪ್ರಮಾಣದಲ್ಲಿ ತಕ್ಕೊಳ್ಳಬೇಕು. ಅಥವಾ ಯಾಲಕ್ಕಿಯ ಚೂರ್ಣವನ್ನು ಜೇನು ಕೂಡಿಸಿ ಬಾಳೆಯ ಅಥವಾ ಕೈಟರ್ಯ (ಅಪಪೀ ಬೇವು) ರಸದೊಡನೆ ತಕ್ಕೊಳ್ಳಬೇಕು. || ೪೭ ||

**ತಕ್ರೇಣಯುಕ್ತಂ ಶಿತಿಮಾರಕಸ್ಯ ಬೀಜಂ ಪಿಬೇತ್ ಕೃಚ್ಛ್ರವಿಘಾತ ಹೇತೋಃ ||**
**ಪಿಬೇತ್ ತಥಾ ತಂಡುಲಧಾವನೇನ ಪ್ರವಾಲಚೂರ್ಣಂ ಕಫಮೂತ್ರ ಕೃಚ್ಛ್ರೇ || ೩೮ ||**

**ಅರ್ಥ—** ಮೂತ್ರಕೃಚ್ಛ್ರನಾಶಕ್ಕಾಗಿ ಶಿತಿಮಾರಕ ಶಾಲಿಂಚ ಬೀಜ ವನ್ನು ಮಜ್ಜಿಗೆಯೊಡನೆ ಅಥವಾ ಪ್ರವಾಳ ಚೂರ್ಣವನ್ನು ಅಕ್ಕಿ ತೊಳೆದ ನೀರಿನೊಡನೆ ಕುಡಿಯಬೇಕು. || ೪೮ ||

**ಸಪ್ತಚ್ಛದಾರಗ್ವಧಕೇಬುಕೈಲಾ ಧವಾಃ ಕರಂಜಃ ಕುಟಜೋ ಗುಡೂಚೀ ಸಾಧ್ಯಾ ಜಲೇ ತೇನ ಪಿಬೇದ್ ಯವಾಗೂಂ ಸಿದ್ಧಾಂ ಕಷಾಯಂ ಮಧುಸಂಯುತಂ ವಾ || ೪೯ ||**

**ಅರ್ಥ—** ಸಪ್ತಪರ್ಣ, ಕಕ್ಕಿ, ಕೇಬುಕ, ಯಾಲಕ್ಕಿ, ಧವ ( ದಿಂಡಿಲ ) ಹುಲಗಲಿ, ಹಲಗತ್ತಿ, ಅಮೃತಬಳ್ಳಿಗಳಲ್ಲಿ ೮ ಪಟ್ಟು ನೀರು ಹಾಕಿ ಅರ್ಧ ಉಳಿಸಿ ಅದರ ಪೇಯವನ್ನು ಸಿದ್ಧಮಾಡಿ ಕುಡಿಯಬೇಕು. ಅಥವಾ ಅವುಗಳ ಕಷಾಯ ವನ್ನೇ ಜೇನು ಹಾಕಿ ಕುಡಿಯಬೇಕು. || ೪೯ ||

ತ್ರಿದೋಷಜ ಮೂತ್ರಕೃಚ್ಛ್ರ ಚಿಕಿತ್ಸೆಯನ್ನು ಹೇಳುತ್ತಾರೆ—

**ಸರ್ವಂ ತ್ರಿದೋಷಪ್ರಭವೇ ತು ವಾಯೋಃ ಸ್ಥಾನಾನುಪೂರ್ವ್ಯಾ ಪ್ರಸಮೀಕ್ಷ್ಯ ಕಾರ್ಯಂ ||**
**ತ್ರಿಭ್ಯೋಧಿಕೇ ಪ್ರಾಗ್ವಮನಂ ಕಫೇ ಸ್ಯಾತ್ ಪಿತ್ತೇ ವಿರೇಕಃ ಪವನೇ ತು ಬಸ್ತಿಃ || ೫೦ ||**

**ಅರ್ಥ—** ತ್ರಿದೋಷಜ ಮೂತ್ರಕೃಚ್ಛ್ರದಲ್ಲಿ ವಾತಪಿತ್ತಕಫಗಳಲ್ಲಿ ಮಾಡುವ ಚಿಕಿತ್ಸೆಯನ್ನು ವಿಚಾರಿಸಿ ಎಲ್ಲವನ್ನು ಮಾಡಬೇಕು. ಮೂರರಲ್ಲಿ ಕಫವು ಹೆಚ್ಚಿದ್ದರೆ ಮೊದಲುವಮನವನ್ನು ಪಿತ್ತವು ಹೆಚ್ಚಿದ್ದರೆ ವಿರೇಚನವನ್ನು ವಾತವು ಹೆಚ್ಚಿದ್ದರೆಮೊದಲು ಬಸ್ತಿಯನ್ನು ಕೊಡಬೇಕು. || ೩೦ ||

ಅಶ್ಮರಿ ಶರ್ಕರಾಜನ್ಯ ಮೂತ್ರಕೃಚ್ಛ್ರ ಚಿಕಿತ್ಸೆಯನ್ನು ಹೇಳುತ್ತಾರೆ—

**ಕ್ರಿಯಾ ಹಿತಾ ತ್ವಶ್ಮರಿ ಶರ್ಕರಾಭ್ಯಾಂ ಯಾ ಮೂತ್ರ ಕೃಚ್ಛ್ರೇ ಕಫ ಮಾರು ತೋಕ್ತೇ ||**
**ಕಾರ್ಯಾಶ್ಮರೀ ಭೇಧನ ಪಾತನಾಯ ವಿಶೇಷಯುಕ್ತಂ ಶೃಣು ಕರ್ಮ ಸಿದ್ಧಮ್ ||೩೧||**

**ಅರ್ಥ—** ಅಶ್ಮರೀ ಶರ್ಕರೆಗಳಲ್ಲಿ, ಕಫವಾತಗಳಿಂದುಂಟಾದ ಮೂತ್ರ ಕೃಚ್ಛ್ರಗಳಲ್ಲಿ ಹೇಳಿದ ಚಿಕಿತ್ಸೆಯೇ ಹಿತಕರವು. ಅಶ್ಮರಿಗಳನ್ನು ಒಡೆಯುವದಕ್ಕಾಗಿ ಮತ್ತು ಕೆಡುಹುವದಕ್ಕಾಗಿ ಅನುಭೂತವಾದ ಹೆಚ್ಚಿನ ಚಿಕಿತ್ಸೆಯನ್ನು ಹೇಳುತ್ತೇನೆ. ಕೇಳು. || ೩೧ ||

ಅಶ್ಮರೀ ಭೇದಕ ಔಷಧಗಳನ್ನು ಹೇಳುತ್ತಾರೆ—

**ಪಾಷಾಣಭೇದಂ ವೃಷಕಂ ಶ್ವದಂಷ್ಟ್ರಾ-ಪಾಠಾಭಯಾ ವ್ಯೋಷ ಶಠೀನಿಕುಂಭಾಃ ||**
**ಹಿಂಸ್ರಾಖರಾಹ್ವಾಶಿತಿಮಾರಕಾಣಾಮೇರ್ವಾರುಕಾಚ್ಚ ತ್ರಪುಷಾಚ್ಚ ಬೀಜಮ್ || ೩೨ ||**
**ಉತ್ಕುಂಚಿಕಾ ಹಿಂಗ ಸವೇತಸಾಮ್ಲಂ ಸ್ಯಾದ್ವೇ ಬೃಹತ್ಯೌ ಹಪುಷಾ ವಚಾಚ ||**
**ಚೂರ್ಣಂಪಿಬೇದಶ್ಮರಿಭಿದ್ ವಿಪಕ್ವಂ ಸರ್ಪಿಶ್ಚ ಗೋಮೂತ್ರ ಚತುರ್ಗುಣಂ ತೈಃ || ೩೩ ||**

**ಅರ್ಥ—** ಪಾಷಾಣಭೇಧ, ಆಡಸಾಲ, ನೆಗ್ಗಿಲ, ಆಗಳಶುಂಠಿ, ಅಣಲೆ, ತ್ರಿಕಟು, ಕಚೋರೆ, ದಂತಿನಸಗುನ್ನಿಬೀಜ, ಅಜವಾನ, ಶಿತಿಮಾರಕ. (ಶಾಲಂಚ) ಏರ್ವಾರುಕ (ದೊಡ್ಡ ಸವತಿ) ಬೀಜ, ತ್ರಪುಷ ( ಸವತಿ ಜಾತಿ ) ದ ಬೀಜ || ೩೨ || ಕರೀಜೀರಿಗೆ, ಇಂಗು, ಅಮ್ಲವೇತಸ, ಸೆಲಗುಳ್ಳ, ಹೆಬ್ಬಗುಳ

ಹವುಷಾ (ಪಾಟೀರ) ಇವುಗಳ ಚೂರ್ಣವು ಅಥವಾ ಇವುಗಳಲ್ಲಿ ನಾಲ್ಕು ಪಟ್ಟು ಗೋಮೂತ್ರಹಾಕಿ ಸಿದ್ಧಪಡಿಸಿದ ಘೃತವು ಅಶ್ಮರಿಯನ್ನು ಪುಡಿಮಾಡುವದು. ||೫೩||

**ಮೂಲಂಶ್ವದಂಷ್ಟ್ರಾ ಕ್ಷುರಕೋರುಬೂಕಾತ್ ಕ್ಷೀರೇಣ ಪಿಷ್ಟಂ ಬೃಹತೀದ್ವಯಾಚ್ಚ ||**
**ಆಲೋಡ್ಯ ದಧ್ನಾ ಮಧುರೇಣ ಪೇಯಂ ದಿನಾನಿ ಸಪ್ತಾಶ್ಮರಿ-ಭೇದನಾರ್ಥಮ್ || ೫೪ ||**

**ಅರ್ಥ—** ನೆಗ್ಗಲು, ಇಕ್ಷುರಕ ಕೊಳಾಂಬಳಿಕೆ. ತಾಲೀಂಖಾನೆ ಔಡಲ ಗಳ ಬೇರುಗಳನ್ನು ಹಾಲಿನೊಡನೆ ಅರೆದು ೭ ದಿವಸ ಕುಡಿದರೆ, ಅಥವಾ ನೆಲ ಗುಳ್ಳ, ಹೆಬ್ಬಗುಳ್ಳ ಬೇರುಗಳ ಕಲ್ಕವನ್ನು ಹುಳಿಯಿಲ್ಲದ ಮಜ್ಜಿಗೆಯೊಡನೆ ೭ ದಿವಸ ಕುಡಿದರೆ ಅಶ್ಮರಿಯು ಒಡೆಯುವದು. || ೫೪ ||

**ಪುನರ್ನವಾಯೋರಜನೀ ಶ್ವದಂಷ್ಟ್ರಾ ಫಲ್ಗುಪ್ರವಾಲಾಶ್ಚ ಸದರ್ಭಪುಷ್ಪಾಃ||**
**ಕ್ಷೀರಾಂಬು ಮದ್ಯೇಕ್ಷುರಸೈಸ್ಸುಪಿಷ್ಟಂ ಪೇಯಂ ಭವೇದಶ್ಮರಿಶರ್ಕರಾಸು**

**ಅರ್ಥ—** ಬಿಳೇಗಣಜಲಿಬೇರು, ಲೋಹಭಸ್ಮ, ಅರಿಷಿಣ, ನೆಗ್ಗಿಲು, ಫಲ್ಗು (ಅತ್ತೀಗಿಡ) ಪ್ರವಾಳ, ದರ್ಭಪುಷ್ಪ (ದರ್ಭದ ಹೂವು) ಇವುಗಳನ್ನು ಹಾಲು, ನೀರು, ಮದ್ಯ, ಕಬ್ಬಿನರಸ ಇವುಗಳಲ್ಲಿ ಒಂದರೊಡನೆ ಅರೆದು ಕುಡಿಯಬೇಕು. ಅದು ಅಶ್ಮರೀ ಶರ್ಕರೆಗಳನ್ನು ಕಳೆಯುವದು|| ೫೫ ||

**ಏಲಾ ಶತಾಹ್ವಾ ಲವಣಾನಿ ಪಂಚ ಕಂಪಿಲ್ಲಕಂ ಗೋಕ್ಷುರಕಸ್ಯ ಬೀಜಂ||**
**ಯವಾಗ್ರಜಂ ಕುಂದುರುಕಾಶ್ಮಭೇದಾ ವೇರ್ವಾರುಕಾಶ್ಚ ತ್ರಪುಷಾಚ್ಚ ಬೀಜಮ್ ||೫೬||**

**ಚೂರ್ಣೀಕೃತಂ ಚಿತ್ರಕಹಿಂಗುಮಾಂಸೀಯಮಾನಿ ತುಲ್ಯಂ ತ್ರಿಫಲಾ ದ್ವಿರಂಶಂ ||**
**ಅಮ್ಲೈರನುಷ್ಣೈರಸಮದ್ಯಯೂಷೈಃ ಪೇಯಾನಿ ಗುಲ್ಮಾಶ್ಮರಿ ಭೇದನಾನಿ ||೫೭||**

**ಅರ್ಥ—** ಯಾಲಕ್ಕಿ, ಬಡೀಶೇಪು, ಪಂಚಲವಣ, ಕಪಿಲೆ, ನೆಗ್ಗಿಲ ಬೀಜ, ಜವಖಾರ, ಕುಂದರಕ, ಪಾಷಾಣಭೇದ, ಏರ್ವಾರುಕ, (ದೊಡ್ಡಸವತಿ)

ತ್ರಪುಸಗಳ ಬೀಜ, ಇವುಗಳ ಚೂರ್ಣಮಾಡಿ ಅದರಷ್ಟೇ ಚಿತ್ರಕ, ಇಂಗು, ಜಟಾಮಾಸಿ, ಅಜವಾನಗಳ ಚೂರ್ಣವನ್ನು ಇಮ್ಮಡಿ ತ್ರಿಫಳಾಚೂರ್ಣವನ್ನು ಹುಳಿಯಾದ, ಬೆಚ್ಚನ್ನ, ಮಾಂಸರಸ ಅಥವಾ ಮದ್ಯ ಅಥವಾ ಕಟ್ಟುಗಳೊಡನೆ ಕುಡಿಯಬೇಕು. ಇವು ಗುಲ್ಮ, ಅಶ್ಮರಿಗಳನ್ನು ಕತ್ತರಿಸುವವು.　||೫೬-೫೭||

**ಬಿಲ್ವ ಪ್ರಮಾಣೋ ಘೃತತೈಲಭೃಷ್ಟೋ ಯೂಷಃ ಕೃತಂ ಶಿಗ್ರುಕ ಮೂಲಕಲ್ಕಾತ್ ||**
**ಶೀತೋಽಶ್ಮಭಿತ್ ಸ್ಯಾತ್ ದಧಿಮಂಡಯುಕ್ತಃ ಪೇಯಃ ಪ್ರಕಾಮಂ ಲವಣೇನ ಯುಕ್ತಃ ||೫೮||**

**ಅರ್ಥ—** ನುಗ್ಗಿಯ ಬೇರಿನ ಕಲ್ಕ ೧ ತೊಲೆ ಮತ್ತು ಹೆಸರು ಬೇಳೆಗಳಲ್ಲಿ ೧೪ ಪಾಲು ನೀರು ಹಾಕಿಕುದಿಸಿ, ೪ನೇ ಪಾಲಿನಷ್ಟು ಉಳಿಸಿ, ಮಾಡಿದ ಕಟ್ಟಿಗೆ ತುಪ್ಪ-ಎಣ್ಣೆಗಳ ಒಗ್ಗರಣೆಯನ್ನು ಕೊಟ್ಟು, ಉಪ್ಪುಹಾಕಿ ಆರಿಸಿ, ೪ ತೊಲೆಯಷ್ಟು ಮೊಸರಿನ ನೀರಿನೊಡನೆ ಕುಡಿಯಬೇಕು. ಅದು ಅಶ್ಮರಿಯನ್ನು ಒಡೆಯುವದು　||೫೮||

**ಜಲೇನ ಶೋಭಾಂಜನಮೂಲಕಲ್ಕಃ ಶೀತೋಹಿತಶ್ಚಾಶ್ಮರಿಶರ್ಕರಾಸು||**
**ಸಿತೋಪಲಾ ವಾ ಸಮಯಾವಶೂಕಾ ಕೃಚ್ಛ್ರೇಷು ಸರ್ವೇಷ್ವಪಿ ಭೇಷಜಂ ಸ್ಯಾತ್ ||೫೯||**

**ಅರ್ಥ—** ನುಗ್ಗಿಯ ಮೂಲ ಕಲ್ಕವನ್ನು ನೀರಿನೊಡನೆಕಲಿಸಿ, ತಣ್ಣಗೆ ಮಾಡಿ ಕುಡಿದರೆ ಅಶ್ಮರಿಶರ್ಕರೆಗಳು ಹೋಗುವವು. ಕಲ್ಲುಸಕ್ಕರೆ ಯವಕ್ಷಾರಗಳನ್ನು ಸಮನಾಗಿ ತೆಗೆದುಕೊಂಡು ನೀರಿನೊಡನೆ ಕುಡಿದರೆ ಅದು ಎಲ್ಲ ಮೂತ್ರಕೃಚ್ಛ್ರಗಳಲ್ಲಿ ಔಷಧವಾಗುವದು.　||೫೯||

**ಪೀತ್ವಾ ಚ ಮದ್ಯಂ ನಿಗದಂ ರಸೇನ ಹಯೇನ ವಾ ಶೀಘ್ರಜವೇನ ಯಾಯಾತ್ ||**
**ತೈಃ ಶರ್ಕರಾ ಪ್ರಚ್ಯವತೇಽಶ್ಮರೀ ಚ ಶಾಮ್ಯೇನ್ನ ಚೇತ್ ಶಲ್ಯವಿದುದ್ಧರೇತ್ತಾಮ್ ||೬೦||**

**ಅರ್ಥ—** ನಿರ್ಮಲವಾದ ಮದ್ಯವನ್ನು ಮಾಂಸರಸದೊಡನೆ ಕುಡಿದು ಅತ್ಯಂತ ವೇಗವುಳ್ಳ ಕುದುರೆಯನ್ನು ಹತ್ತಿ ಓಡಿಸಬೇಕು. ಅದರಿಂದ ಅಶ್ಮರೀ

ನುತ್ತು ಶರ್ಕರೆಗಳು ಹೋಗುವವು. ಇದರಿಂದಲೂ ಹೋಗದಿದ್ದರೆ ಅದನ್ನು ಶಸ್ತ್ರದಿಂದ ತೆಗೆಯಬೇಕು. ||೬೦||

ಶುಕ್ರವಿಘಾತಜ ಮೂತ್ರಕೃಚ್ಛ್ರಗಳನ್ನು ಹೇಳುತ್ತಾರೆ—

**ರೇತೋವಿಘಾತಪ್ರಭವೇ ತು ಕೃಚ್ಛ್ರೇ ಸಮೀಕ್ಷ್ಯ ದೋಷಂ ಪ್ರತಿ ಕರ್ಮ ಕುರ್ಯಾತ್ ||**
**ಕಾರ್ಪಾಸಮೂಲಂ ವಸುಕಾಶ್ಮಭೇದೌ ಬಲಾ ಸ್ಥಿರಾದೀನಿ ಗವೇಧುಕಾ ಚ ||೬೧||**

**ವೃಶ್ಚೀರಮೈಂದ್ರೀ ಚ ಪುನರ್ನವಾ ಚ ಶತಾವರೀ ಮಧ್ವಶನಾಖ್ಯಪರ್ಣ್ಯೌ ||**
**ತತ್ಕ್ವಾಥಸಿದ್ಧಃ ಪವನೇ ರಸಸ್ಯಾತ್ ಪಿತ್ತಾಧಿಕೇ ಕ್ಷೀರಮಥಾಪಿ ಸರ್ಪಿಃ ||೬೨||**

**ಕಫೇ ತು ಯೂಷಾದಿಕಮನ್ನಪಾನಂ ಸಂಸರ್ಗಜೇ ಸರ್ವಹಿತಃ ಕ್ರಮಃ ಸ್ಯಾತ್**
**ಏವಂ ನ ಚೇಚ್ಛಾಮ್ಯತಿ ತಸ್ಯ ದದ್ಯಾತ್ ಸುರಾಂ ಪುರಾಣಾಂ ಮಧುಕಾಸವಂ ವಾ ||೬೩||**

**ಅರ್ಥ—** ಶುಕ್ರ ಪ್ರತಿಬಂಧದಿಂದುಂಟಾದ ಮೂತ್ರಕೃಚ್ಛ್ರದಲ್ಲಿ ದೋಷಗಳನ್ನು ವಿಚಾರಿಸಿ ಚಿಕಿತ್ಸೆ ಮಾಡಬೇಕು. ವಾತಜ ಮೂತ್ರಕೃಚ್ಛ್ರದಲ್ಲಿ ದೋಷಗಳನ್ನು ವಿಚಾರಿಸಿ ಚಿಕಿತ್ಸೆಮಾಡಬೇಕು. ವಾತಮೂತ್ರಕೃಚ್ಛ್ರದಲ್ಲಿ ಹತ್ತಿಯಬೇರು, ಬಿಳೇಗಣಜಲ ಬೇರು, ಪಾಷಾಣಭೇದ, ಕಳ್ಳಂಗಡ್ಲೆ, ಲಘುಪಂಚಮೂಲ, ಗವೇಧುಕಾ (ಧಾನ್ಯವಿಶೇಷ) ||೬೧|| ಕೆಂಪುಗಣಜಲ ಬೇರು, ಶತಾವರಿ, ಅಮೃತಬಳ್ಳಿ, ಅಶನಪರ್ಣೀ, (ಅಪರಾಜಿತಾ) ಇವುಗಳ ಕಷಾಯದಲ್ಲಿ ಸಿದ್ಧಮಾಡಿದ ಮಾಂಸರಸವನ್ನು ಪಿತ್ತಾಧಿಕಮೂತ್ರಕೃಚ್ಛ್ರದಲ್ಲಿ ಅದರಿಂದ ಸಿದ್ಧಮಾಡಿದ ಹಾಲನ್ನು ಅಥವಾ ಘೃತವನ್ನು ಕೊಡಬೇಕು||೬೨|| ಕಫವು ಹೆಚ್ಚಿದ್ದರೆ, ಇವುಗಳಿಂದ ಸಿದ್ಧಮಾಡಿದ ಕಟ್ಟು, ಪೇಯ ಮುಂತಾದ ಅನ್ನಪಾನವನ್ನು ಮೂರೂ ದೋಷಗಳು ಕೂಡಿದ್ದರೆ ಎಲ್ಲವುಗಳಿಗೆ ಹಿತವಾದ ಚಿಕಿತ್ಸೆಯನ್ನು ಮಾಡಬೇಕು. ಹೀಗೆ ಮಾಡಿದರೂ ಅದು ಶಾಂತವಾಗದಿದ್ದರೆ ಹಳೇ ಮದ್ಯವನ್ನು ಅಥವಾ ಮಧುಕಾಸವನ್ನು ಕೊಡಬೇಕು. ||೬೩||

**ವಿಹಂಗಮಾಂಸಾನಿ ಚ ಬೃಂಹಣಾರ್ಥಂ ಬಸ್ತೀಶ್ಚ ಶುಕ್ರಾಶಯ**
**ಶೋಧನಾರ್ಥಮ್ ||**
**ಶುದ್ಧಸ್ಯ ತೃಪ್ತಸ್ಯ ಚ ವೃಷ್ಯಯೋಗಾಃ ಪ್ರಿಯಾನುಕೂಲಾಃ ಪ್ರಮದಾ**
**ವಿಧೇಯಾಃ ||೬೪||**

**ಅರ್ಥ—** ಪುಷ್ಟಿಗಾಗಿ ಪಕ್ಷಿಗಳ ಮಾಂಸಗಳನ್ನು, ಶುಕ್ರಾಶಯದ ಶೋಧನಕ್ಕಾಗಿ ಬಸ್ತಿಗಳನ್ನು ಕೊಟ್ಟು, ಶುದ್ಧಿ ಮತ್ತು ಪುಷ್ಟಿಯಾದ ಬಳಿಕ ಶುಕ್ರವರ್ಧಕ ಔಷಧಗಳನ್ನೂ ಪ್ರಿಯ ಮತ್ತು ಅನುಕೂಲರಾದ ಸ್ತ್ರೀಯರನ್ನೂ ಕೊಡಬೇಕು. ||೬೪||

ರಕ್ತಜ ಮೂತ್ರಕೃಚ್ಛ್ರವನ್ನು ಹೇಳುತ್ತಾರೆ—

**ರಕ್ತೋದ್ಭವೇ ತೂತ್ಪಲನಾಲತಾಲಕಾಶೇಕ್ಷುಬಾಲೇಕ್ಷುಕಶೇರುಕಾಣಿ ||**
**ಪಿಬೇತ್ ಸಿತಾಕ್ಷೌದ್ರಯುತಾನಿ ಖಾದೇದಿಕ್ಷುಂ ವಿದಾರೀಂ ತ್ರಪುಷಾಣಿ**
**ಚೈವ ||೬೫||**

**ಅರ್ಥ—** ರಕ್ತಜ ಮೂತ್ರಕೃಚ್ಛ್ರದಲ್ಲಿ ಕಮಲದ ದೇಟು, ತಾಲಫಲ, ಕಾಶ (ಕಸಗೀಹುಲ್ಲಿ) ಇಕ್ಷುಬಾಲ, (ಇಕ್ಷುಭೇದ) ಕಬ್ಬಿನಬೇರು, ಕಶೇರುಕ (ಕೊತ್ತೀಗಡ್ಡೆ) ಇವುಗಳ ಕಲ್ಕವನ್ನು ಕಲ್ಲುಸಕ್ಕರೆ ಜೇನುಹಾಕಿ ಕುಡಿಯಬೇಕು. ಕಬ್ಬನ್ನೂ ನೆಲಗುಂಬಳವನ್ನೂ ತ್ರಪುಸ (ಸವತೇಜಾತಿ) ವನ್ನು ತಿನ್ನಬೇಕು. ||೬೫||

**ಘೃತಂ ಶ್ವದಂಷ್ಟ್ರಾಸ್ವರಸೇನ ಸಿದ್ಧಂ ಕ್ಷೀರೇಣ ಚೈವಾಷ್ಟಗುಣೇನ**
**ಪೇಯಮ್ ||**
**ಸ್ಥಿರಾದಿಕಾನಾಂ ಕತಕಾದಿಕಾನಾಮ್ಯೈಕೈಕಶೋ ವಾ ವಿಧಿನೈವ**
**ತೇನ ||೬೬||**

**ಅರ್ಥ—** ನೆಗ್ಗಿಲುಗಳ ಸ್ವರಸವನ್ನು ೮ ಪಾಲು ಹಾಕಿ ಅಥವಾ ಹಾಲನ್ನು ೮ ಪಾಲು ಹಾಕಿ ಸಿದ್ಧಮಾಡಿದ ಘೃತವನ್ನು ಕುಡಿಯಬೇಕು ಲಘು ಪಂಚಮೂಲದ ಕತಕಾದಿಗಣದ (ವಿಮಾನಸ್ಥಾನ ಅಧ್ಯಾಯ ೮ರಲ್ಲಿ ಹೇಳಿದ) ಒಂದೊಂದು ಔಷಧದಿಂದ ಇದೇರೀತಿಯಾಗಿ ಘೃತವನ್ನು ಸಿದ್ಧಮಾಡಿ ಕುಡಿಯಬೇಕು. ||೬೬||

**ಕ್ಷೀರೇಣ ಬಸ್ತಿರ್ಮಧುರೌಷಧೈಃ ಸ್ಯಾತ್ ತೈಲೇನ ವಾ ಸ್ವಾದು ಫಲೋತ್ಥಿತೇನ ||**
**ಯುಸ್ಮೂತ್ರಕೃಚ್ಛ್ರೇ ವಿಹಿತಂ ತು ಪೈತ್ತೇ ತತ್ಕಾರಯೇಚ್ಛೋಣಿತ ಮೂತ್ರಕೃಚ್ಛ್ರೇ ||೬೭||**

**ಅರ್ಥ—** ಕ್ಷೀರದ ಬಸ್ತಿಯನ್ನು ಮದುರ ಔಷಧಗಳ ಬಸ್ತಿಯನ್ನು ಮಧುರ ಫಲಗಳಿಂದ ಸಿದ್ಧಮಾಡಿದ ತೈಲಗಳ ಬಸ್ತಿಯನ್ನು ಕೊಡಬೇಕು. ಪಿತ್ತಜ ಮೂತ್ರಕೃಚ್ಛ್ರದಲ್ಲಿ ಹೇಳಿದ ಚಿಕಿತ್ಸೆಯನ್ನೆಲ್ಲ ರಕ್ತಮೂತ್ರಕೃಚ್ಛ್ರದಲ್ಲಿ ಮಾಡಬೇಕು. ||೬೭||

ಅಪಥ್ಯವನ್ನು ಹೇಳುತ್ತಾರೆ—

**ವ್ಯಾಯಾಮಸಂಧಾರಣಶುಷ್ಕಭಕ್ಷಪಿಷ್ಟಾನ್ನವಾತಾರ್ಕಕರವ್ಯವಾಯಾನ್ ||**
**ಖರ್ಜೂರಶಾಲೂಕಕಪಿತ್ಥಜಂಬೂಬಿಸಂ ಕಷಾಯಂ ನ ರಸಂ ಭಜೇತ್ ||೬೮||**

**ಅರ್ಥ—** ವ್ಯಾಯಾಮ, ವೇಗಧಾರಣ, ಶುಷ್ಕದ್ರವ್ಯ, ಹಿಟ್ಟಿನಪದಾರ್ಥ, ಗಾಳಿ, ಬಿಸಲು, ಮೈಥುನ, ಖರ್ಜೂರ, ಶಾಲೂಕ, (ಪದ್ಮಕಂದ) ಬೆಳವಲ, ನೇರಿಲ, ಕಮಲದದೇಟು ಮತ್ತು ಒಗರುರಸ ಇವುಗಳನ್ನು ಸೇವಿಸಬಾರದು. ||೬೮||

ಹೃದಯಮರ್ಮದ ರೋಗಗಳನ್ನು ಹೇಳಹೊರಟು ಮೊದಲು ಸಾಮಾನ್ಯ ಲಕ್ಷಣ ಹೇಳಿ ಆಮೇಲೆ ವಾತಜಾದಿಗಳ ಲಕ್ಷಣವನ್ನು ಹೇಳುತ್ತಾರೆ—

**ವ್ಯಾಯಾಮತೀಕ್ಷ್ಣಾತಿವಿರೇಕಬಸ್ತಿಚ್ಛರ್ದ್ಯಾಮಸಂಧಾರಣಕರ್ಷಣಾನಿ ||**
**ಚಿಂತಾಭಯತ್ರಾಸಗದಾಭಿಚಾರಾ ಹೃದ್ರೋಗಕರ್ತೃಣಿ ತಥಾವಿಘಾತಃ ||೬೯||**

**ಅರ್ಥ—** ವ್ಯಾಯಾಮ, ತೀಕ್ಷ್ಣ ಅಥವಾ ಬಹಳ ವಿರೇಚನ, ಬಹಳ ಬಸ್ತಿ, ವಾಂತಿ, ಆಮ, ವೇಗಧಾರಣ, ಕರ್ಷಣ (ಕೃಶಮಾಡುವದು), ಚಿಂತೆ, ಭಯ, ತ್ರಾಸರೋಗ, ಚೇಡಿ, ಬಡತ ಇವು ಹೃದ್ರೋಗವನ್ನುಂಟುಮಾಡುತ್ತವೆ. ||೬೯||

**ವೈವರ್ಣ್ಯಮೂರ್ಛಾಜ್ವರಕಾಸಹಿಕ್ಕಾಶ್ವಾಸಾಸ್ಯವೈರಸ್ಯತೃಷಾ ಪ್ರಮೋಹಾಃ ||**
**ಛರ್ದಿಃ ಕಫೋತ್ ಕ್ಲೇಶರುಜೋಽರುಚಿಶ್ಚ ಹೃದ್ರೋಗಜಾಃ ಸ್ಯುರ್ವಿವಿಧಾಸ್ತಥಾನ್ಯೇ ||೨೦||**

**ಅರ್ಥ—** ಇದರಿಂದ ವಿವರ್ಣತೆ, ಮೂರ್ಛೆ, ಜ್ವರ, ಕೆಮ್ಮು, ಬಿಕ್ಕು, ಶ್ವಾಸ, ಬಾಯಿ ಹೊಲಸುಆಗೋಣ, ನೀರಡಿಕೆ, ಮೋಹ, ವಾಂತಿ, ಕಫ ಬೀಳೋಣ, ನೋವು, ಅರುಚಿ, ಇದರ ಹೊರತು ಅನೇಕ ವಿಕಾರಗಳು ಉಂಟಾಗುವವು. ||೨೦||

**ಹೃಚ್ಛೂನ್ಯಭಾವದ್ರವಶೋಷಭೇದಸ್ತಂಭಾಃ ಸಮೋಹಾಃ ಪವನಾದ್ವಿಶೇಷಃ ||**
**ಪಿತ್ತಾತ್ತಮೋದೂಯನದಾಹಮೋಹಾಃ ಸಂತ್ರಾಸತಾಪಜ್ವರಪೀತಭಾವಾಃ ||೨೧||**

**ಅರ್ಥ—** ಎದೆಯು ಹಗುರು ಆಗೋಣ, ಧಡಧಡ ಅನ್ನೋಣ, ಶೋಷ ಚುಚ್ಚೋಣ, ಸ್ತಬ್ಧವಾಗೋಣ, ಮೋಹ, ಈ ವಿಶೇಷ ಲಕ್ಷಣಗಳು ವಾತಹೃದ್ರೋಗದಲ್ಲಿರುತ್ತವೆ. ಪಿತ್ತಜ ಹೃದ್ರೋಗದಲ್ಲಿ ಕಣ್ಣಿಗೆ ಕತ್ತಲೆ ಬರೋಣ, ಎದೆಯಲ್ಲಿ ನೋವು, ದಾಹ, ಮೋಹ, ತ್ರಾಸ, ಸಂತಾಪ, ಜ್ವರ, ಕಣ್ಣು ಮುಂತಾದವು ಹಳದಿಯಾಗೋಣ ಈ ವಿಶೇಷ ಲಕ್ಷಣಗಳಿರುತ್ತವೆ||೨೧||

**ಸ್ತಬ್ಧಂ ಗುರು ಸ್ಯಾತ್ ಸ್ತಿಮಿತಂ ಚ ಮರ್ಮ ಕಫಾತ್ ಪ್ರಸೇಕಜ್ವರಕಾಸತಂದ್ರಾಃ ||**
**ವಿದ್ಯಾತ್ ತ್ರಿದೋಷಂ ತ್ವಪಿ ಸರ್ವಲಿಂಗಂ ತೀವ್ರಾರ್ತಿತೋದಂ ಕ್ರಿಮಿಜಂ ಸಕಂಡುಮ್ ||೨೨||**

**ಅರ್ಥ—** ಕಫಜ ಹೃದ್ರೋಗದಲ್ಲಿ ಹೃದಯವು ಸ್ತಬ್ಧ, ಜಡ, ಸ್ತಿಮಿತವಾದದ್ದು ಬಾಯಿಗೆ ನೀರು ಬಿಡೋಣ, ಜ್ವರ, ಕೆಮ್ಮುಗಳು ವಿಶೇಷವಾಗಿರುವವು. ಹೃದ್ರೋಗದಲ್ಲಿ ಇವೆಲ್ಲ ಲಕ್ಷಣಗಳು ಇರುತ್ತವೆ. ಕ್ರಿಮಿಜ ಹೃದ್ರೋಗದಲ್ಲಿ ನೋವು ಚುಚ್ಚುವಿಕೆಗಳು ಬಹಳ ಇರುವವಲ್ಲದೆ ತಿಂಡಿಯೂ ಇರುವದು.

ಇವುಗಳ ಚಿಕಿತ್ಸೆಯನ್ನು ಕ್ರಮದಿಂದ ಹೇಳಹೊರಟು ಮೊದಲು ವಾತ ಹೃದ್ರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ತೈಲಂ ಸಸೌವೀರಕಮಸ್ತುತಕ್ರಂ ವಾತೇ ಪ್ರಪೇಯಂ ಲವಣಂ ಸುಖೋಷ್ಣಮ್ ||**
**ಮೂತ್ರಾಮ್ಲಸಿದ್ಧಂ ಲವಣೈಶ್ಚ ತೈಲಮಾನಾಹಗುಲ್ಮಾರ್ತಿ ಹೃದಾಮಯಘ್ನಮ್ ||೭೩||**

**ಅರ್ಥ—** ವಾತಹೃದ್ರೋಗದಲ್ಲಿ ಗಂಜಿ, ಮೊಸರಿನ ಮೇಲಿನ ನೀರು, ಮಜ್ಜಿಗೆಯೊಡನೆ ತೈಲವನ್ನು ಕುಡಿಯಬೇಕು. ಮೂತ್ರ ಮತ್ತು ಹುಳಿಗಂಜಿ ಮತ್ತು ಪಂಚಲವಣಗಳಿಂದ ಸಿದ್ಧಮಾಡಿದ ತೈಲವನ್ನು ಕುಡಿಯಬೇಕು. ಇವು ಹೊಟ್ಟೆಯುಬ್ಬು, ಗುಲ್ಮ, ಶೂಲಿ, ಹೃದ್ರೋಗಗಳನ್ನು ಕಳೆಯುವವು. ||೭೩||

**ಪುನರ್ನವಾದಾರು ಸಪಂಚಮೂಲಂ ರಾಸ್ನಾಂ ಯವಾನ್ ಕೋಲ ಕುಲಿತ್ಥಬಿಲ್ವಂ ||**
**ಪಕ್ತ್ವಾ ಜಲೇ ತೇನ ಪಚೇತ್ ತು ತೈಲಮಭ್ಯಂಗಂಪಾನೇಽನಿಲ ಹೃದ್ಗದಘ್ನಮ್ ||೭೪||**

**ಅರ್ಥ—** ಬಿಳೀಗಣಜಲಬೇರು, ದೇವದಾರು, ಪಂಚಮೂಲ, ರಾಸ್ನೆ, ಜವೆ, ಬೋರೆ, ಹೆಸರು, ಬಿಲ್ವ ಇವುಗಳ ಕಷಾಯದಲ್ಲಿ ತೈಲವನ್ನು ಸಿದ್ಧಮಾಡಬೇಕು. ಅದನ್ನು ಅಭ್ಯಂಗಪಾನಗಳಲ್ಲಿ ಉಪಯೋಗಿಸಿದರೆ ಅದು ವಾತ ಹೃದ್ರೋಗವನ್ನು ಕಳೆಯುವದು. || ೭೪ ||

**ಹರೀತಕೀನಾಗರಪುಷ್ಕರಾಹ್ವೈರ್ವಯಃ ಕಯಸ್ಥಾ ಲವಣೈಶ್ಚ ಕಲ್ಕೈಃ ||**
**ಸಹಿಂಗುಭಿಃ ಸಾಧಿತಮಗ್ರ್ಯಸರ್ಪಿರ್ಗುಲ್ಮೇ ಸಹೃತ್ಪಾರ್ಶ್ವಗದೇಽನಿಲೋತ್ಥೇ || ೭೫ ||**

**ಅರ್ಥ—** ಅಳಲೆ, ಶುಂಠಿ, ಪುಷ್ಕರಮೂಲ, ನೆಲ್ಲಿ, ಯಾಲಕ್ಕಿ, ಸೈಂಧವ, ಇಂಗು ಇವುಗಳ ಕಲ್ಕವನ್ನು ೪ ಪಾಲು ನೀರಿನಲ್ಲಿ ಕುದಿಸಿ ಸಿದ್ಧಮಾಡಿದ ಆಕಳ ಘೃತವು ವಾತದಿಂದುಂಟಾದ ಗುಲ್ಮಹೃದ್ರೋಗ ಪಾರ್ಶ್ವಶೂಲಗಳನ್ನು ಕಳೆಯುವದು. ||೭೫||

**ಸಪುಷ್ಕರಾಹ್ವಂ ಫಲಪೂರಮೂಲಂ ಮಹೌಷಧಂ ಶಠ್ಯಭಯಾ ಚ ಕಲ್ಕಾಃ ||**

**ಕ್ಷಾರಾಂಬುಸರ್ಪಿರ್ಲವಣೈರ್ವಿಮಿಶ್ರಾಃ ಸ್ಯುರ್ವಾತಹೃದ್ರೋಗವಿಕರ್ತಿಕಾಘ್ನಾಃ ||೭೬||**

**ಅರ್ಥ—** ಪುಷ್ಕರಮೂಲ, ಮಾದಾಳಮೂಲ, ಶುಂಠಿ, ಕಚೋರೆ, ಚಿಣಲೆ, ಇವುಗಳ ಬೇರೆಬೇರೆ ಕಲ್ಕದಲ್ಲಿ ಕ್ಷಾರದ ನೀರು, ಘೃತ ಮತ್ತು ಸೈಂಧವ ಮಿಶ್ರಮಾಡಿ ತಕ್ಕೊಂಡರೆ ಆಮ, ಎದೆಯಲ್ಲಿಯ ವಾತಜ, ನೋವು ಕತ್ತರಿಸುವಂತೆ ಆಗುವ ಪೀಡೆಗಳನ್ನು ಕಳೆಯುವದು. ||೭೬||

**ಕ್ವಾಥಃ ಕೃತಃ ಪೌಷ್ಕರಮಾತುಲಂಗಪಲಾಶಪೂತೀಕಶಠೀಸುರಾಹ್ವೈಃ ಸನಾಗರಾಜಾಜಿವಚಾಯಮಾನಿಃ ಸಕ್ಷಾರ ಉಷ್ಣೋಲವಣಶ್ಚ ಪೇಯಃ ||೭೭||**

**ಅರ್ಥ—** ಪುಷ್ಕರಮೂಲ, ಮಾದಳಮೂಲ, ಮುತ್ತಲು, ಹೊಲಸು ಹುಲಗಲಿ, ಕಚೋರೆ, ದೇವದಾರು, ಇವುಗಳ ಕಷಾಯವನ್ನು ಮಾಡಿ, ಅದರಲ್ಲಿ ಶುಂಠಿ, ಕರೇಜೀರಗಿ, ಬಜಿ, ಅಜವಾನ, ಜವಖಾರ, ಸೈಂಧಲವಣಗಳನ್ನು ಹಾಕಿ ಬಿಸಿ ಇರುವಾಗಲೇ ಕುಡಿಯಬೇಕು. ||೭೭||

**ಪಥ್ಯಾಶಠೀ ಪೌಷ್ಕರಪಂಚಕೋಲಾತ್ ಸಮಾತುಲುಂಗಾದ್ ಯಮಕೇನ ಕಲ್ಕಃ ||**
**ಗುಡಪ್ರಸನ್ನಾಲವಣೈಶ್ಚ ಭೃಷ್ಟೋ ಹೃತ್‌ಪಾರ್ಶ್ವಪೃಷ್ಠೋದರ ಯೋನಿಶೂಲೇ ||೭೮||**

**ಅರ್ಥ—** ಹೃದಯ ಪಾರ್ಶ್ವ, ಬೆನ್ನು, ಹೊಟ್ಟೆ, ಯೋನಿಗಳಲ್ಲಿ ಶೂಲವಿದ್ದರೆ ಚಿಣಲೆ, ಕಚೋರ, ಪುಷ್ಕರಮೂಲ, ಪಂಚಕೋಲ, ಮಾದಾಳ, ಇವುಗಳ ಕಲ್ಕದಲ್ಲಿ ಬೆಲ್ಲ, ಮದ್ಯದ ತಿಳಿ, ಸೈಂಧವಗಳನ್ನು ಹಾಕಿ, ತುಪ್ಪ, ಎಣ್ಣೆಗಳಲ್ಲಿ ಕರಿದು ಕೊಡಬೇಕು. ||೭೮||

**ತ್ರ್ಯೂಷಣಾದಿ ಘೃತವನ್ನು ಹೇಳುತ್ತಾರೆ—**

**ಸ್ಯಾತ್ ತ್ರ್ಯೂಷಣಂ ದ್ವೇ ತ್ರಿಫಲೇ ಸಪಾಠೇ ನಿದಿಗ್ಧಿಕಾ ಗೋಕ್ಷುರಕಾ ಬಲೇ ದ್ವೇ ||**
**ಮೇದೇ ತ್ರುಟಿಸ್ತಾಮಲಕೀ ಸ್ವಗುಪ್ತಾ ತ್ರುಟಿರ್ಮಧೂಕಂ ಮಧುಕಂ ಸ್ಥಿರಾ ಚ ||೭೯||**

**ಶತಾವರೀ ಜೀವಕಪೃಶ್ನಿಪರ್ಣ್ಯೈ ರ್ದ್ರವ್ಯೈರಿಮೈರಕ್ಷಸಮೈಃಸುಪಿಷ್ಟೈಃ ||**
**ಪ್ರಸ್ಥಂ ಘೃತಸ್ಯ ಪ್ರಪಚೇದ್ ವಿಧಿಜ್ಞಃ ಪ್ರಸ್ಥೇನದಧ್ನಾಸ್ತ್ವಥ**
**ಮಾಹಿಷೇಣ ||೮೦||**

**ಮಾತ್ರಾಂ ಪಲಂ ಚಾರ್ಧಪಲಂ ಪಿಚುಂ ವಾ ಪ್ರಯೋಜಯೇನ್ಮಾಕ್ಷಿಕ**
**ಸಂಪ್ರಯುಕ್ತಂ ||**
**ಶ್ವಾಸೇ ಸಕಾಸೇ ತ್ವಥ ಪಾಂಡುರೋಗೇ ಹಲೀಮಕೇ ಹೃದ್ಗ್ರಹಣೀ**
**ಪ್ರದೋಷೇ || ೮೧ ||**

**ಅರ್ಥ—** ತ್ರಿಕಟು, ೨ ತರದ ತ್ರಿಫಳಾ ( ೧ ಅಣಲೆ, ನೆಲ್ಲಿ, ತಾರಿ ೨ ದ್ರಾಕ್ಷೆ, ಶಿವನ್ನಿ, ಪರೂಷಕ, ) ಅಗಳಶುಂಠಿ, ನೆಲಗುಳ್ಳ, ನೆಗ್ಗಿಲು ಬಲಾ, ಅತಿಬಲಾ, ಮೇದಾ, ಮಹಾಮೇದಾ, ಯಾಲಕ್ಕಿ, ನೆಲನೆಲ್ಲಿ, ನಸಗುನ್ನಿಬೀಜ, ದೊಡ್ಡಯಾಲಕ್ಕಿ, ಇಪ್ಪೀಹೂವು, ಜೇಷ್ಠಮಧು, ಒಂದೆಲೆಹೊನ್ನೆ, ಶತಾವರಿ, ಜೀವಕ, ಮೂರೆಲೆಹೊನ್ನೆ, ಇವುಗಳನ್ನು ಒಂದೊಂದು ತೊಲೆ ತಕ್ಕೊಂಡು, ಚೂರ್ಣಮಾಡಿ, ೧೨೮ ತೊಲಿ ಎಮ್ಮೆಯ ಮೊಸರು ಹಾಕಿ ೧೨೮ ತೊಲಿ ಘೃತವನ್ನು ಸಿದ್ಧಮಾಡಬೇಕು. ಅದನ್ನು ೪ ತೊಲೆ ಅಥವಾ ೨ ತೊಲೆ ಅಥವಾ ೧ ತೊಲೆಯಷ್ಟು ಜೇನಿನಲ್ಲಿ ಕೊಡಬೇಕು. ಅದು ಶ್ವಾಸ, ಕಾಸ, ಪಾಂಡುರೋಗ, ಹಲೀಮಕ, ಹೃದ್ರೋಗ, ಗ್ರಹಣೀ ದೋಷಗಳನ್ನು ಕಳೆಯುವದು. || ೮೧ ||

ಪಿತ್ತ ಹೃದ್ರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ಶೀತಃ ಪ್ರದೇಹಃ ಪರಿಸೇಚನಂ ಚ ತಥಾ ವಿರೇಕೋ ಹೃದಿ ಪಿತ್ತದುಷ್ಟೇ ||**
**ದ್ರಾಕ್ಷಾಸಿತಾಕ್ಷೌದ್ರಪರೂಷಕೈಃ ಸ್ಯಾತ್ ಕೃಚ್ಛ್ರೇ ಚ ಪಿತ್ತಾಪಹ**
**ಮನ್ನಪಾನಮ್ || ೮೨ ||**

**ಅರ್ಥ—** ಪಿತ್ತಮೂತ್ರಕೃಚ್ಛ್ರದಲ್ಲಿ ಶೀತವಾದ ಲೇಪ, ಪರಿಷೇಕ, ವಿರೇಚನಗಳನ್ನು, ಪಿತ್ತನಾಶಕ ಅನ್ನಪಾನಗಳನ್ನು ದ್ರಾಕ್ಷೆ, ಸಕ್ಕರಿ, ಜೇನು, ಪರೂಷಕಗಳೊಡನೆ ತಕ್ಕೊಳ್ಳಬೇಕು. || ೮೨ ||

**ಪಿಷ್ಟ್ವಾ ಪಿಬೇಚ್ಚಾಪಿ ಸಿತಾಜಲೇನ ಯಷ್ಟ್ಯಾಹ್ವಯಂ ತಿಕ್ತಕ**
**ರೋಹಿಣೀಂ ಚ ||**

**ಕ್ಷತೇಷು ಸರ್ಪೀಂಷಿ ಹಿತಾನಿ ಸರ್ಪಿರ್ಗುಡಾಶ್ಚ ಯೇ ತಾನ್ ಪ್ರಸಮೀಕ್ಷ್ಯ ಸಮ್ಯಕ್ || ೮೩ ||**

**ಅರ್ಥ—** ಪಿತ್ತಹೃದ್ರೋಗದಲ್ಲಿ ಜೇಷ್ಠಮಧು, ಕಟುಕರೋಹಿಣಿಗಳ ಕಲ್ಕವನ್ನು ಸಕ್ಕರೆ ನೀರಿನೊಡನೆ ತಕ್ಕೊಳ್ಳಬೇಕು, ಉರಕ್ಷತ ವಿಕಾರದಲ್ಲಿ ಹೇಳಿನ ಘೃತ ಮತ್ತು ಸರ್ಪಿರ್ಗುಡಗಳನ್ನು ಚೆನ್ನಾಗಿ ವಿಚಾರಿಸಿ ಕೊಡಬೇಕು. ||೮೩||

**ದದ್ಯಾದ್ ಭಿಷಕ್ ಧನ್ವರಸಾನ್ನಗವ್ಯ ಕ್ಷೀರಾಶಿನಾಂ ಪಿತ್ತಹೃದಾಮಯೇಷು ||**
**ತೈರೇವ ಸರ್ವೇ ಪ್ರಶಮಂ ಪ್ರಯಾಂತಿ ಪಿತ್ತಾಮಯಾಃ ಶೋಣಿತ ಸಂಶ್ರಯಾ ಯೇ ||೮೪||**

**ಅರ್ಥ—** ಆ ರೋಗಿಗಳನ್ನು ಜಾಂಗಲರಸ, ಅನ್ನ, ಆಕಳಹಾಲುಗಳ ಮೇಲೆ ಇಡಬೇಕು. ಇವುಗಳಿಂದಲೇ ಪಿತ್ತರೋಗಗಳೂ ರಕ್ತಾಶ್ರಿತ ರೋಗಗಳೆಲ್ಲವೂ ಶಾಂತವಾಗುವವು. ||೮೪||

**ದ್ರಾಕ್ಷಾ .ಬಲಾ ಶ್ರೇಯಸಿ ಶರ್ಕರಾಭಿಃ ಖರ್ಜೂರವೀರರ್ಷಭಕೋತ್ಪಲೈಶ್ಚ ||**
**ಕಾಕೋಲಿಮೇದಾಯುಗಜೀವಕೈಶ್ಚ ಕ್ಷೀರೇಣ ಸಿದ್ಧಂ ಮಹಿಷಿ ಘೃತಂ ಸ್ಯಾತ್ || ೮೫ ||**

**ಅರ್ಥ—** ೧ ದ್ರಾಕ್ಷೆ, ಕಳ್ಳಂಗಡ್ಲೆ, ತುಳಸಿ, ಸಕ್ಕರೆ ಇವುಗಳ ಅಥವಾ ೨ ಉತ್ತತ್ತಿ, ವೀರಾ ( ಕಾಕೋಲಿ ) ವೃಷಭಕ, ನೀಲಕಮಲ, ಇವುಗಳ ಅಥವಾ ೩ ಕಾಕೋಲಿ, ಮೇದಾ, ಮಹಾಮೇದಾ, ಜೀವಕ ಇವುಗಳ ಕಲ್ಕದಲ್ಲಿ ೪ ಪಾಲು ಹಾಲು ಹಾಕಿ ಎಮ್ಮೆಯ ಘೃತವನ್ನು ಸಿದ್ಧಮಾಡಬೇಕು ||೮೫||

**ಕಶೇರುಕಾ ಶೈವಲಶೃಂಗವೇರಪ್ರಪೌಂಡರೀಕಂ ಮಧುಕಂ ಬಿಸಸ್ಯ ||**
**ಗ್ರಂಥಿಶ್ಚ ಸರ್ಪಿಃ ಪಯಸಾ ಪಚೇತ್ತೈಃ ಕ್ಷೌದ್ರಾನ್ವಿತಂ ಪಿತ್ತ ಹೃದಾಮಯಾಘ್ನಮ್ || ೮೬ ||**

**ಅರ್ಥ—** ಕಶೇರುಕ (ಕೋತೀಗಡ್ಡಿ) ಹಾವಸೆ, ಶುಂಠಿ, ಪುಂಡರೀಕ, ಕಮಲ, ಜೇಷ್ಟ್ಯಮಧು, ಕಮಲದ ದೇಟಿನಗಂಟು ಇವುಗಳ ಕಲ್ಕದಲ್ಲಿ ಘೃತದ ೪ ಪಾಲು ಹಾಕಿ ಘೃತವನ್ನು ಸಿದ್ಧಮಾಡಬೇಕು. ಅದನ್ನು ಜೇನಿನೊಡನೆ ತಕ್ಕೊಂಡರೆ ಪಿತ್ತಹೃದ್ರೋಗವು ಕಳೆಯುವದು. || ೮೬ ||

**ಸ್ಥಿರಾದಿಕಲ್ಕೈಃ ಪಯಸಾ ಚ ಸಿದ್ಧಂ ದ್ರಾಕ್ಷಾರಸೇನೇಕ್ಷುರಸೇನವಾಪಿ ||**
**ಸರ್ಪಿರ್ಹಿತಂ ಸ್ವಾದುಫಲೇಕ್ಷುಜಾಶ್ಚ ರಸಾಃ ಸುಶೀತಾ ಹೃದಿ ಪಿತ್ತದುಷ್ಟೇ**
**|| ೮೭ ||**

**ಅರ್ಥ—** ಲಘುಪಂಚಮೂಲದ ಕಲ್ಕದಿಂದ ನಾಲ್ಕು ಪಾಲು ಹಾಲು ಅಥವಾ ದ್ರಾಕ್ಷಾರಸ ಅಥವಾ ಕಬ್ಬಿನರಸ ಇವುಗಳಲ್ಲಿ ಸಿದ್ಧಮಾಡಿದ ಮೂರು ತರದ ಘೃತಗಳೂ ಶೀತ ಮತ್ತು ಸಿಹಿ ಫಲಗಳ ರಸಗಳೂ ಕಬ್ಬಿನರಸವೂ ಪಿತ್ತಹೃದ್ರೋಗದಲ್ಲಿ ಹಿತಕರವಾಗಿವೆ. || ೮೭ ||

ಕಫಹೃದ್ರೋಗದ ಚಿಕಿತ್ಸೆಯನ್ನು ಹೇಳುತ್ತಾರೆ—

**ಸ್ವಿನ್ನಸ್ಯ ವಾಂತಸ್ಯ ವಿಲಂಘಿತಸ್ಯ ಕ್ರಿಯಾ ಕಫಘ್ನೀ ಕಫಮರ್ಮರೋಗೇ ||**
**ಕೌಲತ್ಥಧಾನ್ಯೈಶ್ಚ ರಸೈರ್ಯವಾನ್ನ-ಪಾನಾನಿ ತೀಕ್ಷ್ಣಾನಿ ಸಶರ್ಕರಾಣಿ**
**|| ೮೮ ||**

**ಅರ್ಥ—** ಕಫಹೃದ್ರೋಗದಲ್ಲಿ ಸ್ವೇದ, ವಮನ, ಲಂಘನಗಳನ್ನು ಮಾಡಿಸಿ ಕಫನಾಶಕ ಚಿಕಿತ್ಸೆಯನ್ನು ಮಾಡಬೇಕು. ಹುರಳಿಯ ಮತ್ತು ಹವೀಜದ ಕಷಾಯದಲ್ಲಿ ಮಾಡಿದ ತೀಕ್ಷ್ಣವಾದ ಜವೆಯ ಆಹಾರಪಾನಗಳಲ್ಲಿ ಸಕ್ಕರೆ ಹಾಕಿ ಕೊಡಬೇಕು. || ೮೮ ||

**ಮೂತ್ರೇ ಶೃತಾಃ ಕಟ್ಫಲಶೃಂಗವೇರಪೀತದ್ರುಪಥ್ಯಾತಿವಿಷಾಃ**
**ಪ್ರದೇಯಾಃ ||**
**ತಥಾ ಶಠೀಶುಂಠಿವಚೋಪಕುಲ್ಯಾ ರಾಸ್ನಾ ವಚಾ ಪುಷ್ಕರಮೂಲ**
**ಚೂರ್ಣಮ್ || ೮೯ ||**

**ಅರ್ಥ—** ಕಟ್‌ಫಲ ( ಕಿರಿಶಿವನ್ನಿ ) ಶುಂಠಿ, ಪೀತದ್ರು ( ದೇವದಾರು ) ಅಣಲೆ, ಅತಿವಿಷಗಳನ್ನು ಮೂತ್ರದಲ್ಲಿ ಕುದಿಸಿ ಕೊಡಬೇಕು. ಅದರಂತೆ

ಕಚೋರ, ಶುಂಠಿ, ಬಜೆ, ಉಪಕುಲ್ಯ ( ಹಿಪ್ಪಲಿ ) ಇವುಗಳ ಚೂರ್ಣವನ್ನು ಅಥವಾ ರಾಸ್ನೆ, ಬಜೆ, ಪುಷ್ಕರಮೂಲ ಚೂರ್ಣವನ್ನು ಮೂತ್ರದಲ್ಲಿ ಕುದಿಸಿ ಕೊಡಬೇಕು. || ೮೯ ||

**ಉದುಂಬರಾಶ್ವತ್ಥವಟಾರ್ಜುನಾಖ್ಯೇ ಪಾಲಾಶರೌಹೀತಕ**
**ಖಾದೀರೇ ಚ ||**
**ಕ್ವಾಥೇ ತ್ರಿವೃತ್ತ್ರ್ಯೂಷಣಚೂರ್ಣಸಿದ್ಧೋ ಲೇಹಃ ಕಫಘ್ನೋ**
**ಯುತ ಉಷ್ಣತೋಯೈಃ || ೯೦ ||**

**ಅರ್ಥ—** ಅತ್ತಿ, ಅರಳಿ, ಆಲ, ಮತ್ತಿಗಳ ಮತ್ತು ಮುತ್ತಲ, ರೋಹಿತಕ, ಖದೀರಇವುಗಳ ಕಷಾಯದಲ್ಲಿ ನಿಶೋತ್ತರ ತ್ರಿಕಟುಗಳ ಚೂರ್ಣವನ್ನು ಹಾಕಿ ಸಿದ್ಧಮಾಡಿದ ಲೇಹವನ್ನು ಬಿಸಿನೀರಿನಲ್ಲಿ ತಕ್ಕೊಂಡರೆ ಕಫನಾಶವಾಗುವದು. || ೯೦ ||

**ಶಿಲಾಹ್ವಯಂ ವಾ ಭಿಷಗಪ್ರಮತ್ತಃ ಪ್ರಯೋಜಯೇತ್**
**ಕಲ್ಪವಿಧಾನದೃಷ್ಟಮ್ ||**
**ಪ್ರಾಶ್ಯಾಥವಾಗಸ್ತ್ಯಹರೀತಕೀ ಚ ರಸಾಯನಂ ಬ್ರಾಹ್ಮ್ಯಮಥಾಮ**
**ಲಕ್ಯಾಃ || ೯೧ ||**

**ಅರ್ಥ—** ಜಾಗರೂಕನಾದ ವೈದ್ಯನು ಕಲ್ಪಸ್ಥಾನದಲ್ಲಿ ಹೇಳಿದ ವಿಧಿಯಂತೆ ಶಿಲಾಜತುವನ್ನು ಕೊಡಬೇಕು. ಅಥವಾ ಅಗಸ್ತ್ಯಹರೀತಕೀ ಬ್ರಾಹ್ಮ್ಯರಸಾಯನ, ಆಮಲಕೀರಸಾಯನಗಳನ್ನು ನೆಕ್ಕಿಸಬೇಕು, || ೯೧||

ತ್ರಿದೋಷ ಹೃದ್ರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ—

**ತ್ರಿದೋಷಜೇ ಲಂಘನಮಾದಿತಃ ಸ್ಯಾದನ್ನಂ ಚ ಸರ್ವೇಷು ಹಿತಂ**
**ವಿಧೇಯಮ್ ||**
**ಹೀನಾತಿಮಧ್ಯತ್ವಮವೇಕ್ಷ್ಯ ಚೈವ ಕಾರ್ಯಂ ತ್ರಯಾಣಾಮಪಿ ಕರ್ಮ**
**ಶಸ್ತಮ್ || ೯೨ ||**

**ಅರ್ಥ—** ತ್ರಿದೋಷ ಹೃದ್ರೋಗದಲ್ಲಿ ಮೊದಲು ಲಂಘನಮಾಡಿಸಿ ಮೂರೂ ದೋಷಗಳಲ್ಲಿಯೂ ಹಿತಕರವಾದ ಅನ್ನವನ್ನು ಕೊಡಬೇಕು. ಮತ್ತು

ಅವುಗಳ ಬಲದ ತಾರತಮ್ಯವನ್ನು ವಿಚಾರಿಸಿ ಮೂರಕ್ಕೂ ಯೋಗ್ಯವಾದ ಚಿಕಿತ್ಸೆಯನ್ನು ಮಾಡಬೇಕು. ॥ ೯೨ ॥

**ಭುಕ್ತೇಽಧಿಕಂ ಜೀರ್ಯತಿ ಶೂಲಮಲ್ಪಂ ಜೀರ್ಣೇ ಸ್ಥಿತಂ ಸ್ಯಾತ್ ಸುರದಾರು ಕುಷ್ಠಮ್ ॥**
**ಸತಿಲ್ವಕಂ ದ್ವೇ ಲವಣೇ ವಿಡಂಗಮುಷ್ಣಾಂಬುನಾ ಸಾತಿವಿಷಂ ಪಿಬೇತ್ ಸಃ ॥೯೩॥**

**ಅರ್ಥ—** ಊಟಮಾಡಿದಕೂಡಲೇ ಹೆಚ್ಚು, ಅನ್ನಪಚನ ವಾಗುತ್ತಿರುವಾಗ ಸ್ವಲ್ಪ, ಶೂಲವಾಗುತ್ತ ಜೀರ್ಣವಾದಕೂಡಲೇ ಅದು ನಿಲ್ಲುತ್ತಿದ್ದರೆ ಆವನು ದೇವದಾರು, ಕೋಷ್ಠ, ಲೋಧ್ರ ಸೈಂಧಲವಣ, ಕಾಡಲವಣ, ವಾವಡಿಂಗ, ಅತಿ ವಿಷಗಳ ಚೂರ್ಣವನ್ನು ಬಿಸಿನೀರಿನೊಡನೆ ಕುಡಿಯಬೇಕು.

**ಜೀರ್ಣೇಽಧಿಕೇ ಸ್ನೇಹವಿರೇಚನಂ ಸ್ಯಾತ್ ಫಲೈರ್ವಿರೇಚ್ಯೋ ಯದಿ ಜೀರ್ಯತಿ ಸ್ಯಾತ್ ॥**
**ತ್ರಿಷ್ವೇವ ಕಾಲೇ ಷ್ವಧಿಕೇ ತು ಶೂಲೇ ತೀಕ್ಷ್ಣಂ ಹಿತಂ ಮೂಲವಿರೇಚನಂ ಸ್ಯಾತ್ ॥೯೪॥**

**ಅರ್ಥ—** ಅನ್ನ ಜೀರ್ಣವಾಗಲು ಶೂಲವು ಹೆಚ್ಚುತ್ತಿದ್ದರೆ, ಔಡಲೆಣ್ಣೆ ಮುಂತಾದವುಗಳಿಂದ ಸ್ನೇಹ ವಿರೇಚನ ಕೊಡಬೇಕು ಅನ್ನಪಚನವಾಗುವಾಗ ಅದು ಹೆಚ್ಚುತ್ತಿದ್ದರೆ, ವಿರೇಚನ ಫಲಗಳಿಂದ ವಿರೇಚನ ಮಾಡಿಸಬೇಕು. ಉಂಡಕೂಡಲೇ ಮತ್ತು ಪಚನವಾಗುವಾಗ ಪಚನ ವಾದನಂತರ ಹೀಗೆ ಮೂರೂ ಕಾಲಗಳಲ್ಲಿಯೂ ಶೂಲವು ಹೆಚ್ಚುತ್ತಿದ್ದರೆ ತೀಕ್ಷ್ಣವಾದ ಮೂಲ ವಿರೇಚನ ಕೊಡಬೇಕು. ॥೯೪॥

ಕೃಮಿ ಹೃದ್ರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ಪ್ರಾಯೋಽನಿಲೋ ರುದ್ಧಗತಿಃ ಪ್ರಕುಪ್ಯತ್ಯಾಮಾಶಯೇಶೋಧನಮೇವ ತಸ್ಮಾತ್ ॥**
**ಕಾರ್ಯಂತಥಾ ಲಂಘನಪಾಚನಂ ಚ ಸರ್ವಂ ಕ್ರಿಮಿಘ್ನಂ ಕ್ರಿಮಿಹೃದ್ಗದೇಚ ॥೯೫॥**

**ಅರ್ಥ—** ಕ್ರಿಮಿ ಹೃದ್ರೋಗದಲ್ಲಿ ಬಹಳ ಪಾಡಿ ವಾತ ಗತಿಯು ಪ್ರತಿಬದ್ಧವಾಗುವದರಿಂ ಅದು ಆಮಾಶಯದಲ್ಲಿ ಕುಪಿತವಾಗುತ್ತದೆ. ಆದ್ದರಿಂದ

ಶೋಧನ, ಲಂಘನ, ಪಾಚನಗಳನ್ನು ಎಲ್ಲ ಕ್ರಿಮಿನಾಶಕ ಉಪಾಯಗಳನ್ನು ಮಾಡಬೇಕು. ||೯೫||

ಸಿರೋ ಮರ್ಮದಲ್ಲಿರುವ ಅವಯವಗಳ ಚಿಕಿತ್ಸೆಯನ್ನು ಹೇಳುತ್ತಾರೆ ನಾಸಾರೋಗ ಚಿಕಿತ್ಸೆಯು ಸಣ್ಣದಾದುದರಿಂದ ಅದನ್ನು ಮೊದಲು ಹೇಳುತ್ತಾರೆ.

**ಸಂಧಾರಣಾಜೀರ್ಣರಜೋಽತಿಭಾಷ್ಯ ಕ್ರೋಧರ್ತುವೈಷಮ್ಯ ಶಿರೋಭಿತಾಪೈಃ ||**
**ಪ್ರಜಾಗರಾತಿಸ್ವಪನಾಂಬುಶೀತೈರವಶ್ಯಯಾ ಮೈಥುನಬಾಷ್ಪಧೂಮೈಃ || ೯೬ ||**

**ಸಂಸ್ತ್ಯಾನದೋಷೆ ಶಿರಸಿ ಪ್ರದುಷ್ಟೋ ವಾಯುಃ ಪ್ರತಿಶ್ಯಾಯಮುದೀರಯೇತ್ ತು ||**
**ಘ್ರಾಣಾರ್ತಿತೋದೌ ಕ್ಷವತುರ್ಜಲಾಭಃ ಸ್ರಾವೋಽನಿಲಾತ್ ಸಸ್ವರಶೀರ್ಷರೋಗಃ || ೯೭ ||**

**ನಾನಾಗ್ರಪಾಕಜ್ವರವಕ್ತ್ರಶೋಷಾತೃಷ್ಣೋಷ್ಣಪೀತಶ್ರವಣಾನಿಪಿತ್ತಾತ್||**
**ಕಾಸಾರುಚಿಸ್ರಾವಘನಪ್ರಸೇಕಾಃ ಕಫಾದ್ ಗುರುಃ ಸ್ರೋತಸಿ ಚಾಪಿ ಕಂಡೂಃ ||೯೮||**

**ಅರ್ಥ—** ವೇಗಧಾರಣ, ಅಜೀರ್ಣಧೂಳಿ, ಅತಿಶಯ ಮಾತಾಡೋಣ, ಕ್ರೋಧ, ಋತುಗಳ ಬದಲಾವಣಿ, ತಲೆನೋವು, ಜಾಗರಣಿ, ಬಹಳ ಮಲಗೋಣ ತಣ್ಣೀರು ಕುಡಿಯೋಣ, ಬರ್ಫತಿನ್ನೋಣ, ಸ್ತ್ರೀಸಂಗ, ಉಗೆ ಧೂಮಗಳ ಸೇವನ ( ಇವುಗಳಿಂದ) || ೯೬ ||

ಮೇಲಿನವುಗಳಿಂದ ಕಫವುಳ್ಳ ತಲೆಯಲ್ಲಿಯ ವಾತವು ದುಷ್ಟವಾಗಿ ನಗಡಿಯುನ್ನುಂಟುಮಾಡುವದು. ವಾತದ ನೆಗಡಿಯಲ್ಲಿ ಮೂಗಿನಲ್ಲಿ ನೋವು, ಚುಚ್ಚುವಿಕೆ, ಶೀನು ನೀರಿನಂಥ ಸ್ರಾವ, ಸ್ವರಬಂಗ ತಲಶೂಲಿಗಳಿರುವವು. ||೯೭|| ಪಿತ್ತದ ನೆಗಡಿಯಲ್ಲಿ ಮೂಗಿನ ತುದಿಯು ಕೆಂಪಾಗುವದು. ಜ್ವರ, ಬಾಯಿ ಒಣಗೋಣ, ನೀರಡಿಕೆ, ರಕ್ತ, ಉಷ್ಣ ಮತ್ತು ಹಳದಿಯಾದಂತೆ ಸುಂಬಳ ಆವು ಇರುವವು, ಕಫದ ನೆಗಡಿಯಲ್ಲಿ ಕೆಮ್ಮು, ಅರುಚಿ, ಗಟ್ಟಿಯಾದ ಸುಂಬಳ, ಜಡತ್ವ ಮೂಗು ತುಂಬೋಣ ಈ ವಿಕಾರಗಳಿರುವವು. ||೯೮||

**ಸರ್ವಾಣಿ ರೂಪಾಣಿ ತು ಸನ್ನಿಪಾತಾತ್ ಸ್ಯುಃ ಪೀನಸೇಽತೀವ ರುಜೋಽತಿದುಃಖೇ ||**

**ಸರ್ವೋಽತಿವೃದ್ಧೋಽಹಿತಭೋಜನಾತ್ ತು ದುಷ್ಟಪ್ರತಿಶ್ಯಾಯ ಉಪೇಕ್ಷಿತಃ ಸ್ಯಾತ್ || ೯೯ ||**

**ತತಶ್ಚ ರೋಗಾಃ ಕ್ಷವಥುಶ್ಚ ನಾಸಾ–ಶೋಷಃ ಪ್ರತೀನಾಹ ಪರಿಸ್ರವೌಚ ||**

**ಘ್ರಾಣಸ್ಯ ಪೂತಿತ್ವಮಪೀನಸಶ್ಚ ಸಪಾಕಶೋಥೋಽರ್ಬುದಪೂಯರಕ್ತೇ || ೧೦೦ ||**

**ಅರೂಂಷಿ ಶೀರ್ಷಶ್ರವಣಾಕ್ಷಿರೋಗಾಃ ಖಾಲಿತ್ಯಹರ್ಯರ್ಜುನ ಲೋಮಭಾವಾಃ ||**

**ತೃಟ್–ಶ್ವಾಸ–ಕಾಸ–ಜ್ವರ–ರಕ್ತ–ಪಿತ್ತ–ವೈವರ್ಣ್ಯ–ಶೋಷಾಶ್ಚ ತತೋ ಭವಂತಿ ||೧೦೧||**

**ಅರ್ಥ—** ಸನ್ನಿಪಾತದ ನೆಗಡಿಯಲ್ಲಿ ಬಹಳ ನೋವು ಮತ್ತು ಮೇಲಿನ ಎಲ್ಲ ಲಕ್ಷಣಗಳೂ ಇರುವದರಿಂದ ಬಹಳ ತ್ರಾಸ ಆಗುತ್ತದೆ. ||೯೯|| ಈ ಎತ ಪ್ರತಿಶ್ಯಾಯಗಳು ಅಹಿತ ಆಹಾರದಿಂದ ಬಹಳ ಹೆಚ್ಚಾಗುವವು ಆಗ ಅವನ್ನು ಉಪೇಕ್ಷಿಸಿದರೆ ದುಷ್ಟಪ್ರತಿಶ್ಯಾಯವಾಗುವದು ಅದರಿಂದ ಶೀನು, ನಾಸಾಶೋಷ ಪ್ರತಿ ನಾಹ( ? ) ಮೂಗು ಸೋರೋಣ ಮೂಗು ನಾರೋಣ, ಅಪೀನಸ, ಮೂಗು ಕೆಂಪಾಗೋಣ, ಮೂಗು ಬಾಯೋಣ ಅರ್ಬುದ, ಪೂಯರಕ್ತ, ಅರೂಂಷಿ, ತಲೆ ಕಿವಿ ಕಣ್ಣುಗಳ ರೋಗಗಳು ತಲೆಯಲ್ಲಿ ಕೂದಲು ಹಾರೋಣ ಕೂದಲುಗಳು ಹಸರು ಅಥವಾ ಬೆಳ್ಳಗೆ ಆಗೋಣ ಈ ರೋಗಗಳು ಉಂಟಾಗುತ್ತವೆ. ಆಮೇಲೆ ನೀರಡಿಕೆ, ಶ್ವಾಸ, ಕಾಸ, ಜ್ವರ, ರಕ್ತಪಿತ್ತ ವಿವರ್ಣತೆ ಶೋಷಗಳು ಉಂಟಾಗುವವು. ||೧೦೧||

ದುಷ್ಟಪ್ರತಿಶ್ಯಾಯಗಳನ್ನು ಹೇಳುತ್ತಾರೆ—

**ರೋಧಾಭಿಘಾತಸ್ರವಶೋಷಪಾಕೈರ್ಘ್ರಾಣಂ ಯುತಂ ಯಸ್ಯ ನ ವೇತ್ತಿ ಗಂಧಮ್ ||**

**ದುರ್ಗಂಧಿ ಚಾಸ್ಯಂ ಬಹುಶಃ ಪ್ರಕೋಪಿ ದುಷ್ಟಪ್ರತಿಶ್ಯಾಯಮುದಾಹರೇತ್ ತಮ್ || ೧೦೨ ||**

**ಅರ್ಥ—** ಮೂಗು ಕಟ್ಟಿಕೊಂಡು, ಅಭಿಘಾತ, ಸ್ರಾವ, ಶೋಷ, ಪಾಕ, ಗಂಧವು ತಿಳಿಯದಿರೋಣ ||೧೦೬|| ಬಾಯಿನಾರೋಣ, ಆಗಾಗ ಪ್ರಕೋಪವಾಗೋಣ, ಈ ಲಕ್ಷಣಗಳಿದ್ದರೆ ದುಷ್ಟ ಪ್ರತಿಶ್ಯಾಯವೆಂದು ಹೇಳಬೇಕು ||೧೦೭|| .

ಕ್ಷವಥು, ನಾಸಾಶೋಷ, ಪ್ರತಿನಾಹ, ಪರಿಸ್ರವ, ಪೂತಿನಸ್ಯ, ಅಪೀನಸ, ನಾಸಾಪಾಕ, ನಾಸಾಶೋಥ, ನಾಸಾರ್ಬುದ, ಪೂಯಶಕ್ತ, ಅರೂಂಷಿ ರೋಗಗಳನ್ನು ಕ್ರಮವಾಗಿ ಹೇಳುತ್ತಾರೆ.

**ಸಂಸ್ಪೃಶ್ಯ ಮರ್ಮಾಣ್ಯನಿಲಸ್ತು ಮೂರ್ಧ್ನಿ ವಿಶ್ವಕ್‌ಪಥಸ್ಥಃ ಕ್ಷವಥುಂ ಕರೋತಿ ।**
**ಕ್ಷುದ್ರಃ ಸ ಸಂಶೋಷ್ಯ ಕಫಂ ತು ನಾಸಾಶೃಂಗಾಟ ಘ್ರಾಣವಿಶೋಷಣಂ ಚ ॥**
**ಉಚ್ಛ್ವಾಸಮಾರ್ಗಂ ಚ ಕಫಃ ಸವಾತೋ ರುಂಧ್ಯಾತ್ ಪ್ರತಿನಾಹಮುದಾಹರೇತ್ ತಮ್ ||೧೦೩||**

**ಅರ್ಥ—** ತಲೆಯಲ್ಲಿ ಎಲ್ಲ ಕಡೆಗೆ ಹರಿದಾಡುವ ವಾತವು ಮರ್ಮಗಳನ್ನು ಮುಟ್ಟಲು 'ಕ್ಷವಥು' ಎಂಬ ರೋಗವಾಗುವದು. ಕುಪಿತವಾದ ವಾತವು ಕಫವನ್ನು ಒಣಗಿಸಿ, ಮೂಗಿನ ಶೃಂಗಾಟಕ ಮರ್ಮವನ್ನು ಮೂಗನ್ನೂ ಒಣಗಿಸುವದು, ಅದಕ್ಕೆ 'ನಾಸಾಶೋಷ' ವೆನ್ನುವರು. ವಾತದಿಂದ ಕೂಡಿದ ಕಫವು ಶ್ವಾಸಮಾರ್ಗವನ್ನು ತಡೆಯುವದು, ಅದಕ್ಕೆ 'ಪ್ರತೀನಾಹ' ವೆಂದು ಹೆಸರು ||೧೦೩||

**ಯೋ ಮಸ್ತುಲುಂಗಾದ್ ಘನಪೀತಪಕ್ವಃ ಕಫಃ ಸ್ರವೇದೇಷ ಪರಿಸ್ರವಸ್ತು ॥**
**ವೈವರ್ಣ್ಯದೌರ್ಗಂಧ್ಯಮುಪೇಕ್ಷಯಾ ತು ಸ್ಯಾತ್ಪೂತಿನಸ್ಯಂ ಶ್ವಯಥುರ್ಭ್ರಮಶ್ಚ ||೧೦೪||**

ರ್ಥ— ಮಿದುಳಿನಿಂದ ಗಟ್ಟಿಯಾದ ಹಳದಿ ಬಣ್ಣದ ಪಕ್ವ ಕಫವು ಸ್ರವಿಸುತ್ತಿದ್ದರೆ ಅದು 'ಪರಿಸ್ರವ' ವು ಅದನ್ನು ಉಪೇಕ್ಷಿಸಲು ವಿವರ್ಣತೆ, ದುರ್ಗಂಧ, ಬಾವು ಭ್ರಮಗಳುಂಟಾಗುವವು. ಅದಕ್ಕೆ 'ಪೂತಿನಸ್ಯ' ವೆಂದು ಹೆಸರು. ||೧೦೪||

**ಆನಹ್ಯತೇ ಯಸ್ಯ ವಿಶುಷ್ಯತೇ ಚ ಪ್ರಕ್ಲಿದ್ಯತೇ ಧೂಪ್ಯತಿ ಯಸ್ಯನಾಸಾ॥
ನ ವೇತ್ತಿ ಯೋ ಗಂಧರಸಾಂಶ್ಚ ಜಂತುರ್ಜುಷ್ಟಂ ವ್ಯವಸ್ಯೇತ್ ತಮ
ಪೀನಸೇನ ॥೧೦೩॥**

**ತಂ ಚಾನಿಲಶ್ಲೇಷ್ಮಭವಂ ವಿಕಾರಂ ಬ್ರೂಯಾತ್ ಪ್ರತಿಶ್ಯಾಯ ಸಮಾನ
ಲಿಂಗಮ್ ।
ಸದಾಹರಾಗಃ ಶ್ವಯಥುಃ ಸಪಾಕಃ ಸ್ಯಾತ್ ಘ್ರಾಣಪಾಕೋಽಪಿ ಚ
ರಕ್ತಪಿತ್ತಾತ್ ॥೧೦೬॥**

**ಅರ್ಥ—** ಯಾತರಲ್ಲಿ ಮೂಗು ಉಬ್ಬುವದು, ಒಣಗುವದು, ಹೆಚ್ಚು ಹಸಿಯಾಗುವದು, ಉಗಿ ಹೊರಟಂತೆಯಾಗುವದು, ಹೀಗೆ ಆಗಿ, ರೋಗಿಯು ಗಂಧರಸಗಳನ್ನು ತಿಳಿಯನೋ ಅದು 'ಅಪೀನಸ್' ವೆಂದು ಹೇಳಬೇಕು. ॥೧೦೬॥ ಇದು ವಾತ ಕಫ ವಿಕಾರವು ಇದರಲ್ಲಿ ಪ್ರತಿಶ್ಯಾಯದ ಎಲ್ಲ ಲಕ್ಷಣ ಗಳಿರುತ್ತವೆ. ರಕ್ತಪಿತ್ತದಿಂದ ದಾಹ, ರಾಗ, ಬಾವು, ಪಾಕಗಳುಂಟಾದರೆ 'ಘ್ರಾಣಪಾಕ' ವೆಂದು ತಿಳಿಯಬೇಕು. ॥೧೦೬॥

**ಘ್ರಾಣಾಶ್ರಿತಾಸೃಕ್‌ಪ್ರಭೃತೀನ್ ಪ್ರದೂಷ್ಯ ಕುರ್ವಂತಿ ನಾಸಾಶ್ವ
ಯಥುಂ ಮಲಾಶ್ಚ ।
ಘ್ರಾಣೇ ತಥೋಚ್ಛ್ವಾಸಗತಿಂ ನಿರುಧ್ಯ ಮಾಂಸಪ್ರದೋಷಾದಪಿ
ಚಾರ್ಬುದಾನಿ ॥೧೦೭॥**

**ಅರ್ಥ—** ದೋಷಗಳು ಮೂಗಿನಲ್ಲಿದ್ದ ರಕ್ತಮುಂತಾದವುಗಳನ್ನು ದುಷ್ಟ ಮಾಡಿ 'ನಾಸಾಶೋಥ' ವೆಂಬ ರೋಗವನ್ನುಂಟುಮಾಡುವವು. ಆ ದೋಷ ಗಳು ಮಾಂಸವನ್ನು ದುಷ್ಟಮಾಡಿ ಉಚ್ಛ್ವಾಸವನ್ನು ಪ್ರತಿಬಂಧಿಸುವ 'ಅರ್ಬುದ' ಗಳನ್ನುಂಟುಮಾಡುತ್ತದೆ. ॥ ೧೦೭ ॥

**ಘ್ರಾಣಾತ್ ಸ್ರವೇದ್ ವಾ ಶ್ರವಣಾನ್ಮುಖಾದ್ ವಾ ಪಿತ್ತಾಕ್ತಮುಸ್ರಂ
ತ್ವಪಿ ಪೂಯರಕ್ತಮ್ ॥
ಕುರ್ಯಾತ್ ಸ ಪಿತ್ತಃ ಪವನಃ ಕಫಾದೀನ್ ಸಂದೂಷ್ಯ ಚಾರೂಂಷಿ
ಸದಾಹಪಾಕಮ್ ॥ ೧೦೮ ॥**

**ಅರ್ಥ—** ಮೂಗು, ಕಿವಿ ಅಥವಾ ಬಾಯಿಯಿಂದ ಪಿತ್ತ ಕೂಡಿದ ರಕ್ತದ ಸ್ರಾವವಾಗಹತ್ತಿದರೆ ಅದು 'ಪೂಯ ರಕ್ತ' ವು ಪಿತ್ತದಿಂದ ಕೂಡಿದ

ವಾಯುವು ಕಫಾದಿಗಳನ್ನು ಕೆಡಿಸಿ ದಾಹಪಾಕಗಳುಳ್ಳ 'ಅರೂಂಷಿ' ಎಂಬ ರೋಗವನ್ನುಂಟುಮಾಡುವದು. || ೧೦೮ ||

'ಕಿಯಂತಃ ಶಿರಸೀಯ' ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿದ ಶೀರ್ಷರೋಗಗಳನ್ನು ಇಲ್ಲಿ ಚಿಕಿತ್ಸೆಯ ಸಲುವಾಗಿ ಸಂಕ್ಷೇಪವಾಗಿ ಹೇಳುತ್ತಾರೆ—

**ಭೃಶಾರ್ತಿಶೂಲಂ ಸ್ಫುರತೀಹ ವಾತಾತ್ ಪಿತ್ತಾತ್ ಸದಾಹಾರ್ತಿ ಕಫಾದ್ಗುರು ಸ್ಯಾತ್ ||**
**ಸರ್ವೈಸ್ತ್ರಿದೋಷಂ ಕ್ರಿಮಿಜಂ ಸಕಂಡು ದೌರ್ಗಂಧ್ಯತೋದಾರ್ತಿಯುತಂ ಶಿರಃ ಸ್ಯಾತ್ || ೧೦೯ ||**

**ಅರ್ಥ—** ವಾತಶಿರೋರೋಗದಲ್ಲಿ ತಲೆಯಲ್ಲಿ ನೋವು ಶೂಲಗಳಿರುವವು. ಪಿತ್ತಶಿರೋರೋಗದಲ್ಲಿ ದಾಹನೋವುಗಳೂ ಕಫಜದಲ್ಲಿ ಜಡತ್ವ ನೋವುಗಳೂ ತ್ರಿದೋಷಜದಲ್ಲಿ ಈ ಎಲ್ಲ ಲಕ್ಷಣಗಳೂ ಕ್ರಿಮಿಜದಲ್ಲಿ ತುರಿಕೆ, ದುರ್ಗಂಧ, ಚುಚ್ಚುವಿಕೆ ನೋವುಗಳಿರುವವು. || ೧೦೯ ||

**ಮುಖರೋಗಗಳನ್ನು ಹೇಳುತ್ತಾರೆ.**

**ಮುಖಾಮಯೇ ಮಾರುತಜೇ ತು ಶೋಥಃ ಕಾರ್ಕಶ್ಯರೌಕ್ಷ್ಯೇ ಪ್ರಬಲಾ ರುಜಶ್ಚ |**
**ಕೃಷ್ಣಾರುಣಂ ನಿಷ್ಪತನಂ ಸಶೀತಂ ಪ್ರಸ್ರಂಸನಸ್ಯಂದನತೋದ ಭೇದಾಃ ||೧೧೦||**

**ಅರ್ಥ—** ವಾತ ಮುಖರೋಗದಲ್ಲಿ ಬಾವು, ಕರ್ಕಶತೆ, ರುಕ್ಷತೆ, ಬಹಳ ನೋವು, ಕೆಂಪು ನಸುಗಪ್ಪು ಶೀತವಾದ ಕಫ, ಸ್ರಂಸನ, ( ಹಲ್ಲುಬೀಳೋಣ), ಸ್ಪಂದನ, ಚುಚ್ಚಿದಂತೆ ಒಡೆದಂತೆ ನೋವುಗಳಿರುವವು. ||೧೧೦||

**ತೃಷ್ಣಾಜ್ವರ ಸ್ಫೋಟಕದಾಹಪಾಕಾ ಧೂಮಾಯನಂ ಚಾಸ್ಯವದೀರ್ಣತಾ ಚ |**
**ಪಿತ್ತಾತ್ ಸಮೂಚ್ಛಾರ್ಯ ವಿವಿಧಾ ರುಜಶ್ಚ ವರ್ಣಾಶ್ಚ ಶುಕ್ಲಾರುಣವರ್ಣವರ್ಜ್ಯಾಃ ||೧೧೧||**

**ಅರ್ಥ—** ಪಿತ್ತಜ ಮುಖರೋಗದಲ್ಲಿ ನೀರಡಿಕೆ, ಜ್ವರ, ಬಕ್ಕೆ, ದಾಹ, ಪಾಕ, ಹೊಗೆ ಹೊರಟಂತೆ ಆಗೋಣ, ತುಟಿ ಮುಂತಾದವು ಸೀಳೋಣ,

ಮೂರ್ಛೆ, ಬೇರೆ ಬೇರೆ ತರದ ನೋವುಗಳೂ, ಬಿಳೀ ನಸುಗಪ್ಪು ಹೊರತಾಗಿ ಬೇರೆ ಬಣ್ಣಗಳೂ ಇರುವವು. ||೧೧೧||

**ಕಂಡೂರ್ಗುರುತ್ವಂ ಸಿತವಿಜ್ಜಲತ್ವಂ ಸ್ನೇಹೋಽರುಚಿರ್ಜಾಡ್ಯ ಕಫಪ್ರಸೇಕೌ ।**
**ಉತ್ಕ್ಲೇಶಮಂದಾನಲತಾ ಚ ತಂದ್ರಾ ರುಜಶ್ಚ ಮಂದಾಃ ಕಫವಕ್ತ್ರರೋಗೇ ||೧೧೨||**

**ಅರ್ಥ—** ಕಫಜ ಮುಖರೋಗದಲ್ಲಿ ತುರಿಕೆ, ಜಡತ್ವ, ಬಾಯಿಯು ಬೆಳ್ಳಗೆ ಜಿಗಟು ಆಗೋಣ, ಸ್ನಿಗ್ಧತೆ, ಅರುಚಿ, ಜಾಡ್ಯ, ಕಫಬೀಳೋಣ, ಉತ್ಕ್ಲೇಶ, ಮಂದಾಗ್ನಿ, ತಂದ್ರೆಗಳಿದ್ದು ನೋವು ಮಂದವಾಗಿರುವವು.||೧೧೨||

**ಸರ್ವಾಣಿ ರೂಪಾಣಿ ತು ವಕ್ತ್ರರೋಗೇ ಭವಂತಿ ಯಸ್ಮಿನ್ ಸ ತು ಸನ್ನಿಪಾತಾತ್ ।**
**ಸಂಸ್ಥಾನದೂಷ್ಯಾಕೃತಿನಾಮಭೇದಾಚ್ಚೈತೇ ಚತುಃಷಷ್ಟಿವಿಧಾ ಭವಂತಿ ||೧೧೩||**

**ಅರ್ಥ—** ಸನ್ನಿಪಾತಜ ಮುಖರೋಗದಲ್ಲಿ ಈ ಎಲ್ಲ ಲಕ್ಷಣಗಳೂ ಇರುವವು. ಈ ನಾಲ್ಕು ಮುಖರೋಗಗಳು ಸಂಸ್ಥಾನ ( ಆಕಾರ ) ದೂಷ್ಯ, ಲಕ್ಷಣ, ಹೆಸರುಗಳ ಭೇದದಿಂದ ೬೪ ಪ್ರಕಾರಗಳಿರುತ್ತವೆ. ||೧೧೩||

**ಶಾಲಾಕ್ಯತಂತ್ರೇ ವಿಹಿತಾನಿ ತೇಷಾಂ ನಿಮಿತ್ತರೂಪಾಕೃತಿಭೇಷಜಾನಿ ||**
**ಯಥಾಪ್ರದೇಶಂಚ ಚತುರ್ವಿಧಸ್ಯ ಚಿಕಿತ್ಸಿತಂ ವಕ್ತ್ರಗದಸ್ಯ ವಕ್ಷ್ಯೇ || ೧೧೪ ||**

**ಅರ್ಥ—** ಶಾಲಾಕ್ಯ ತಂತ್ರದಲ್ಲಿ ಅವುಗಳ ಕಾರಣ, ಲಕ್ಷಣ ಔಷಧಗಳು ಹೇಳಲ್ಪಟ್ಟಿವೆ. ನಾವು ಇಲ್ಲಿ ಹೇಳಿದಂತೆ ನಾಲ್ಕು ಮುಖ ರೋಗಗಳ ಚಿಕಿತ್ಸೆಯನ್ನು ಮಾತ್ರ ಹೇಳುವೆವು. || ೧೧೪ ||

ಮುಖರೋಗವಾದ ಅರುಚಿಯನ್ನು ಹೇಳುತ್ತಾರೆ—

**ವಾತಾದಿಭಿಃ ಶೋಕಭಯಾತಿಲೋಭಕ್ರೋಧೈರ್ಮನೋಘ್ನಾಶನರೂಪಗಂಧೈಃ ||**
**ಅರೋಚಕಾಃ ಸ್ಯುಃ ಪರಿಹೃಷ್ಟದಂತಃ ಕಷಾಯವಕ್ತ್ರಶ್ಚ ಮತೋಽನಿಲೇನ || ೧೧೫ ||**

**ಅರ್ಥ—** ವಾತಾದಿ ದೋಷಗಳಿಂದಲೂ, ಶೋಕ, ಭಯ, ಅತಿಲೋಭ, ಕ್ರೋಧ, ಮನೋನಾಶಕ ಆಹಾರ, ರೂಪ, ಗಂಧಗಳಿಂದಲೂ ಅರುಚಿರೋಗಗಳುಂಟಾಗುವವು. ವಾತದ ಅರುಚಿಯಲ್ಲಿ ದಂತಹರ್ಷ ಮತ್ತು ಬಾಯಿಯಲ್ಲಿ ಒಗರು ರಸವಿರುವದು. || ೧೧೫ ||

**ಕಟ್ವಮ್ಲಮುಷ್ಣಂ ವಿರಸಂ ಚ ಪೂತಿ ಪಿತ್ತೇನ ವಿದ್ಯಾಲ್ಲವಣಂ ಚ ವಕ್ತ್ರಮ್ ।**
**ಮಾಧುರ್ಯಪೈಚ್ಛಿಲ್ಯಗುರುತ್ವಶೈತ್ಯ ವಿಬಂಧಸಂಬಂಧಯುತಂ ಕಫೇನ ||೧೧೬||**

**ಅರ್ಥ—** ಪಿತ್ತದ ಅರುಚಿಯಲ್ಲಿ ಬಾಯಿಯು ಕಹಿ, ಹುಳಿ, ಉಷ್ಣ ಮತ್ತು ಹೊಲಸು ಇರುವದು. ಕಫದ ಅರುಚಿಯಲ್ಲಿ ಬಾಯಿಯು ಮಧುರ, ಜಿಗಟು, ಜಡ, ಶೀತವಿದ್ದು ಮಲಬಂಧವಿರುವದು. ||೧೧೬||

**ಅರೋಚಕೇ ಶೋಕಭಯಾತಿಲೋಭಕ್ರೋಧಾದ್ಯಹೃದ್ಯಾಶುಚಿಗಂಧ- ಜೇ ಸ್ಯಾತ್**
**ಸ್ವಾಭಾವಿಕಂ ವಕ್ತ್ರಮಥಾರುಚಿಶ್ಚ ತ್ರಿದೋಷಜೇ ನೈಕರಸಂ ಭವೇತ್ತು ||೧೧೭||**

**ಅರ್ಥ—** ಶೋಕ, ಭಯ, ಅತಿಲೋಭ, ಕ್ರೋಧ ಮುಂತಾದವುಗಳಿಂದ ಮತ್ತು ಮನಸ್ಸಿಗೆ ಬೇಡಾದ ಆಹಾರ, ಮತ್ತು ಅಪವಿತ್ರವಾದ ಗಂಧದಿಂದ ಉಂಟಾದ ಅರುಚಿಯಲ್ಲಿ ಬಾಯಿಯು ರಸವು ಇರುವಂತೆ ಇದ್ದು ಅರುಚಿ ಇರುವದು. ತ್ರಿದೋಷಜ ಅರುಚಿಯಲ್ಲಿ ಅನೇಕರಸಗಳಿರುವವು. ||೧೧೭||

ಕರ್ಣರೋಗಗಳನ್ನು ಹೇಳುತ್ತಾರೆ—

**ನಾದೋಽತಿರುಕ್ ಕರ್ಣಮಲಸ್ಯ ಶೋಷಃ ಸ್ರಾವಸ್ತನುಶ್ಚಾಶ್ರವಣಂ ಚ ವಾತಾತ್ ||**
**ಶೋಥಃ ಸರಾಗೋ ದರಣಂ ವಿದಾಹಃ ಸಪೀತಪೂತಿಶ್ರವಣಂ ಚ -ತ್ತಾತ್ || ೧೧೮ ||**

**ಅರ್ಥ—** ವಾತಜ ಕರ್ಣರೋಗದಲ್ಲಿ ಕಿವಿಯಲ್ಲಿ ಸಪ್ಪಳ, ಬಹಳ ನೋವು, ಕೂಗಣಿಯು ಒಣಗೋಣ, ತೆಳ್ಳಗಿನ್ನ ಸ್ರಾವ, ಬಾಧಿರ್ಯಗಳಿರುವವು. ಪಿತ್ತಜ ಕರ್ಣರೋಗದಲ್ಲಿ ಬಾವು, ಕೆಂಪುಬಣ್ಣ, ಸೀಳುವಿಕೆ, ವಿದಾಹ, ಹಳದಿ ಬಣ್ಣದ ಹೊಲಸು ಸ್ರಾವವಿರುವದು. || ೧೧೮ ||

**ವೈಶ್ರುತ್ಯಕಂಡೂಸ್ಥಿರಶೋಫಶುಕ್ಲಸ್ನಿಗ್ಧ ಶ್ರುತಿಃ ಶ್ಲೇಷ್ಮಭವೇಽಲ್ಪರುಕ್ ಚ ||**
**ಸರ್ವಾಣಿ ಲಿಂಗಾನಿ ತು ಸನ್ನಿಪಾತಾತ್ ಸ್ರಾವಶ್ಚ ತತ್ರಾಧಿಕದೋಷವರ್ಣಃ ೧೧೯**

**ಅರ್ಥ—** ಕಫಜ ಕರ್ಣರೋಗದಲ್ಲಿ ಬಾಧಿರ್ಯ, ಕಂಡೂ, ಸ್ಥಿರವಾದ ಬಾವು, ಬಿಳೀ ಸ್ನಿಗ್ಧಸ್ರಾವ, ಇವುಗಳಿದ್ದು ನೋವು ಸ್ವಲ್ಪ ಇರುವದು. ತ್ರಿದೋಷಜ ಕರ್ಣರೋಗದಲ್ಲಿ ಈ ಎಲ್ಲ ಲಕ್ಷಣಗಳಿದ್ದು ಸ್ರಾವಕ್ಕೆ ಹೆಚ್ಚಾದ ದೋಷದ ಬಣ್ಣವಿರುತ್ತದೆ. || ೧೧೯ ||

ಕಣ್ಣಿನ ರೋಗವನ್ನು ಹೇಳುತ್ತಾರೆ.

**ಅಲ್ಪಸ್ತು ರಾಗೋಽನುಪದೇಹವಾಂಶ್ಚ ಸತೋದಭೇದೋಽನಿಲಜಾಕ್ಷಿ ರೋಗಃ ।**
**ಪೀತೋಪದೇಹಶ್ಚ ಭೃಶೋಷ್ಣವಾಹೀ ಪಿತ್ತಾತ್ ಸದಾಹೋಽತಿರುಜಃ ಸರಾಗಃ ||೧೨೦||**

**ಅರ್ಥ—** ಕೆಂಪು ಬಣ್ಣವು ಸ್ವಲ್ಪ, ಪಿಚ್ಚು ಇಲ್ಲದಿರೋಣ, ಚುಚ್ಚಿದಂತೆ ಒಡೆದಂತೆ ನೋವುಗಳಿದ್ದರೆ ವಾತಜ ಕಣ್ಣುರೋಗವು. ಹಳದಿ ಪಿಚ್ಚು, ಬಹಳ ಉಷ್ಣಸ್ರಾವ, ದಾಹ, ಬಹಳ ನೋವು, ಕೆಂಪು ಬಣ್ಣಗಳಿದ್ದರೆ ಪಿತ್ತಜ ಕಣ್ಣು ರೋಗವು. ||೧೨೦||

**ಶುಕ್ಲೋಪದೇಹೋ ಬಹುಪಿಚ್ಛಿಲಾಶ್ರು ನೇತ್ರೆ ಕಫಾತ್ ಸ್ಯಾತ್ ಗುರುತಾ ಸಕಂಡೂಃ ।**
**ಸರ್ವಾಣಿ ರೂಪಾಣಿ ತು ಸನ್ನಿಪಾತಾತ್ ಷಟ್ಸಪ್ತತಿರ್ನೇತ್ರಗದಾಸ್ತು ಭೇದಾತ್ ||೧೨೧||**

**ಅರ್ಥ—** ಕಣ್ಣಿನಲ್ಲಿ ಬಿಳೀ ಪಿಚ್ಚು, ಬಹಳ ಜಿಗಟು ನೀರು, ಜಡತ್ವ ತುರಿಕೆಗಳಿದ್ದರೆ, ಕಫಜನೇತ್ರರೋಗವು, ಸನ್ನಿಪಾತಜನೇತ್ರರೋಗದಲ್ಲಿ ಈ ಎಲ್ಲ ಲಕ್ಷಣಗಳಿರುತ್ತವೆ. ( ಹಿಂದೆ ಹೇಳಿದಂತೆ ) ಸಂಸ್ಥಾನ, ದೂಷ್ಯ, ಆಕೃತಿ ನಾಮಗಳ ಭೇದದಿಂದ ೭೬ ಪ್ರಕಾರಗಳಿವೆ. ||೧೨೧||

**ತೇಷಾಮಭಿವ್ಯಕ್ತಿರತಿಪ್ರದಿಷ್ಟಾ ಶಾಲಾಕ್ಯತಂತ್ರೇಷು ಚಿಕಿತ್ಸಿತಂ ಚ ।**
**ಪರಾಧಿಕಾರೇಷು ನ ವಿಸ್ತರೋಕ್ತಿಃ ಶಸ್ತೇತಿ ತೇನಾತ್ರನನಃ ಪ್ರಯತ್ನಃ ||೧೨೨||**

**ಅರ್ಥ—** ಶಾಲಾಕ್ಯ ತಂತ್ರಗಳಲ್ಲಿ ಇವುಗಳ ಲಕ್ಷಣ ಚಿಕಿತ್ಸೆಗಳು ವಿಸ್ತಾರವಾಗಿ ಹೇಳಲ್ಪಟ್ಟಿವೆ. ಅದು ಶಾಲ್ಯಾಕ್ಯಶಾಸ್ತ್ರದ ವಿಷಯವಾದುದರಿಂದ ಇಲ್ಲಿ ವಿಸ್ತಾರವಾಗಿ ಹೇಳುವದು ಯೋಗ್ಯವಲ್ಲದ್ದರಿಂದ ನಾವು ಇಲ್ಲಿ ಹೇಳುವದಿಲ್ಲ. ॥೧೨॥

ಖಾಲಿತ್ಯ ಪಾಲಿತ್ಯಗಳನ್ನು ಹೇಳುತ್ತಾರೆ.

**ತೇಜಃ ಸವಾತಂ ಖಲು ಕೇಶಭೂಮಿಂ ದಗ್ಧ್ವಾ ತು ಕುರ್ಯಾತ್ ಖಲಿತಿಂ ನರಸ್ಯ ।**
**ಕಿಂಚಿತ್ತು ದಗ್ಧ್ವಾ ಪಲಿತಾನಿ ಕುರ್ಯಾತ್ ಹರಿತ್ಪ್ರಭತ್ವಂ ಚ ಶಿರೋರುಹಾಣಾಮ್ ॥೧೩॥**

**ಅರ್ಥ—** ವಾತದಿಂದ ಕೂಡಿದ ತೇಜವು ಕೇಶಗಳ ಸ್ಥಾನವನ್ನು ಸುಟ್ಟು ಖಲತಿಯನ್ನೂ ಸ್ವಲ್ಪಮಾತ್ರ ಸುಟ್ಟು ಕೂದಲುಗಳನ್ನು ಹಸರು ಬಣ್ಣದ್ದಾಗಿ ಮಾಡಿ ಪಲಿತವನ್ನೂ ಉಂಟುಮಾಡುವದು ॥೧೩॥

**ಇತ್ಯೂರ್ಧ್ವಜತ್ರುಸ್ಥಗದೈಕದೇಶಃ ಪ್ರೋಕ್ತಶ್ಚಿಕಿತ್ಸಾಂ ಚ ಪರಂ ನಿಬೋಧ ।**
**ಅತಃಪರಂ ಭೇಷಜಸಂಗ್ರಹಂ ತು ನಿಬೋಧ ಸಂಕ್ಷೇಪತ ಉಚ್ಯಮಾನಮ್ ॥೧೪॥**

**ಅರ್ಥ—** ಇಲ್ಲಿಯವರೆಗೆ ಜತ್ರುವಿನ ಮೇಲಿನ ರೋಗಗಳಲ್ಲಿ ಕೆಲವನ್ನು ಹೇಳಿದೆವು. ಇನ್ನು ಮೇಲೆ ಚಿಕಿತ್ಸೆಯನ್ನು ಕೇಳಿರಿ. ಔಷಧ ಸಂಗ್ರಹವನ್ನು ಸಂಕ್ಷೇಪವಾಗಿ ಹೇಳುವೆವು, ಕೇಳಿರಿ. ॥೧೪॥

ವಾತದ ಪ್ರತಿಶ್ಯಾಯಕ್ಕೆ ಚಿಕಿತ್ಸೆಯನ್ನು ಹೇಳುತ್ತಾರೆ.

**ವಾತಾತ್ ಸಕಾಸನ್ಯೈಸ್ವರ್ಯೇ ಸಕ್ಷಾರಂ ಪೀನಸೇ ಘೃತಮ್ ।**
**ಪಿಬೇದ್ರಸಂ ಪಯುಶ್ಚೋಷ್ಣಂ ಸ್ನೈಹಿಕಂ ಧೂಮಮೇವ ವಾ॥೧೫॥**

**ಅರ್ಥ—** ವಾತದ ಹೊಸ ನೆಗಡಿಯಲ್ಲಿ ಕೆಮ್ಮು, ಸ್ವರಭಂಗಗಳಿದ್ದರೆ ಜವಖಾರ ಹಾಕಿ ಘೃತವನ್ನು ಕುಡಿಯಬೇಕು. ಅಥವಾ ಉಷ್ಣ ಮಾಂಸರಸ, ಅಥವಾ ಹಾಲು ಅಥವಾ ಸ್ನಿಗ್ಧ ( ಮುಂದೆ ಹೇಳಿದ ) ಧೂಮವನ್ನು ಕುಡಿಯಬೇಕು. ॥೧೫॥

**ಶತಾಹ್ವಾತ್ವಗ್‌ಬಲಾಮೂಲಂ ಸ್ಯೋನಾಕ್ಯೈರಂಡ ಮೂಲಜಮ್ ।**
**ಆರಗ್ವಧಂ ಪಿಬೇದ್ವರ್ತಿಂ ಮಧೂಚ್ಛಿಷ್ಟವಸಾಘೃತೈಃ ॥೧೨೬॥**

**ಅರ್ಥ—** ಬಡೇಸೋಪು, ದಾಲಚಿನ್ನಿ, ಬಲಾಮೂಲ, ಪೆನ್ಮರ, ಔಡಲಬೇರು, ಕಕ್ಕೇತೋಟಿ ಇವುಗಳ ಚೂರ್ಣದಲ್ಲಿ ಮೇಣ, ನೆಣ, ತುಪ್ಪ ಕೂಡಿಸಿ ಬತ್ತಿಯನ್ನು ಮಾಡಿ, ಅದರ ಹೊಗೆಯನ್ನು ತಕ್ಕೊಳ್ಳಬೇಕು.

**ಅಥವಾ ಸಘೃತಾನ್ ಸಕ್ತೂನ್ ಕೃತ್ವಾ ಮಲ್ಲಕಸಂಪುಟೇ ॥**
**ನವಪ್ರತಿಶ್ಯಾಯವತಾಂ ಧೂಮಂ ವೈದ್ಯಃ ಪ್ರಯೋಜಯೇತ್ ॥೧೨೭॥**

**ಅರ್ಥ—** ಅಥವಾ ಪರಿವಾಣದ ಸಂಪುಟದಲ್ಲಿ ಸಕ್ತು ಮತ್ತು ಘೃತ ಗಳನ್ನು ಹಾಕಿ ಧೂಮವನ್ನು ಕೊಡಬೇಕು. ॥೧೨೭॥

**ಶಂಖಮೂರ್ಧ್ನಿ ಲಲಾಟಾಂತೇ ಪಾಣಿಸ್ವೇದೋಪನಾಹನಮ್ ॥**
**ಸ್ವಭ್ಯಕ್ತೇ ಕ್ಷವಥುಸ್ರಾವರೋಧಾದ್ವಾ ಸಂಕರಾದಯಃ ॥೧೨೮॥**

**ಅರ್ಥ—** ಶಂಖ, ತಲೆ, ಹಣೆಗಳಲ್ಲಿ ಕೈಯಿಂದ ಅಥವಾ ಪೋಟೀಸಿ ನಿಂದ ಕಾವು ಕೊಡಬೇಕು. ಶೀನು ಸ್ರಾವಗಳಿಗೆ ಪ್ರತಿಬಂಧವಾಡಿದ್ದರೆ, ಅಭ್ಯಂಗಮಾಡಿ ಸಂಕರ ಮುಂತಾದ ಸ್ವೇದಗಳನ್ನು ಕೊಡಬೇಕು. ।೧೨೮॥

**ಘ್ರೇಯಾ ರೋಹಿಷತರ್ಕಾರೀ ವಚಾ ಜೀರಕಚೋರಕಾಃ ॥**
**ತ್ವಕ್‌ಪತ್ರಮರಿಚೈಲಾನಾಂ ಚೂರ್ಣಾ ವಾ ಸೋಪಕುಂಚಿಕಾಃ ॥೧೨೯॥**

**ಅರ್ಥ—** ಗಂಧತೃಣ, ತರ್ಕಾರಿ, (ಹೂಸಲಕ್ಕಿ) ಬಜೆ, ಜೀರಿಗೆ ಕಿರ ಮಾಜಿ ಅಜವಾನ ದಾಲಚಿನ್ನಿ, ತಮಾಲಪತ್ರ, ಮೆಣಸು, ಯಾಲಕ್ಕಿ, ಕರೀ ಜೀರಿಗೆಗಳ ಚೂರ್ಣದ ನಸ್ಯವನ್ನು ಕೊಡಬೇಕು. ॥೧೨೯॥

**ಸ್ರೋತಃಶೃಂಗಾಟನಾಸಾಕ್ಷಿಶೋಷೇ ತೈಲಂ ಚ ನಾವನಮ್ ॥ ೧೨೯॥ ॥**

**ಅರ್ಥ—** ವಾತಪ್ರತಿಶ್ಯಾಯದಲ್ಲಿ ಸ್ರೋತಸ್ಸು, ಶೃಂಗಾಟ, ಮರ್ಮ, ಮೂಗು, ಕಣ್ಣುಗಳ ಶೋಷವಿದ್ದರೆ, ತೈಲದ ನಸ್ಯವನ್ನು ಕೊಡಬೇಕು.॥೧೨೯॥

ಅಣು ತೈಲವನ್ನು ಹೇಳುತ್ತಾರೆ—

**ಪ್ರಪೌಂಡರೀಕಮಂಜಿಷ್ಠಾ** 

**ಪ್ರಬಾವ್ಯಾಜೇ ತಿಲಾನ್‌ಕ್ಷೀರೇ ತೇನ ಪಿಷ್ಟ್ವಾನ್ ತದುಷ್ಮಣಾ ॥ ೧೩೦ ॥**

**ಮಂದಸ್ವಿನ್ನಾನ್ ಸಯುಷ್ಯಾತ್ಯಹ್ನಾನ್ ಚೂರ್ಣಾಂಸ್ತೈನ್ಯೈವಪೀಡಯೇತ್ ॥**
**ದಶಮೂಲಸ್ಯನಿಕ್ವಾಥೇರಾಸ್ನಾಮಧುಕಕಲ್ಕವತ್ ॥ ೧೩೧ ॥**
**ಸಿದ್ಧಂ ಸಸೈಂಧವಮ್ ತೈಲಂ ದಶಕೃತ್ವೋಽಣು ತತ್ ಸ್ಮೃತಮ್ ॥ ೧೩೧॥ ॥**

**ಅರ್ಥ—** ಕರೀ ಎಳ್ಳುಗಳನ್ನು ಆಡಿಸ ಹಾಲಿನಲ್ಲಿ ನೆನಿಸಿ ಅದರಲ್ಲಿಯೇ ಅರಿದು ಆಡಿನ ಹಾಲು ಹಾಕಿದ ಕೊಡದ ಬಾಯಿಗೆ ಅರಿವೆಯನ್ನು ಕಟ್ಟಿ, ಅದ ರಲ್ಲಿ ಈ ಕಲ್ಕವನ್ನು ಹಾಕಿ ಮೇಲೆ ಪರಿವಾಣದಿಂದ ಮುಚ್ಚಿ, ಹಾಲಿನ ಉಗಿ ಯಿಂದ ಬೇಯಿಸಿ ಜ್ಯೇಷ್ಠಮಧು ಕೂಡಿಸಿ, ಆ ಹಾಲನ್ನೇ ಹಾಕಿ ಹಿಂಡಬೇಕು ಆದರಲ್ಲಿ ನಾಲ್ಕುಪಾಲು ದಶಮೂಲದ ಕಷಾಯ, ೪ನೇ ಪಾಲು ರಾಸ್ನೆ, ಜೇಷ್ಠ ಮಧುಗಳ ಕಲ್ಕ ಮತ್ತು ಸೈಂಧವಗಳನ್ನು ಹಾಕಿ ॥೧೩೧॥ ತೈಲವನ್ನು ಸಿದ್ಧ ಮಾಡಬೇಕು. ಹೀಗೆ ಹತ್ತು ಸಾರಿ ಮಾಡಿದರೆ, ಅಣುತೈಲವಾಗುತ್ತದೆ. ೧೩೧॥

**ಸ್ನಿಗ್ಧಸ್ಯಾಸ್ಥಾಪನೈರ್ದೋಷಂ ನಿರ್ಹರೇದ್ವಾತಪೀನಸೇ ॥ ೧೩೨ ॥**
**ಸ್ನಿಗ್ಧಾಮ್ಲೋಷ್ಣೈಶ್ಚ ಲಘ್ವನ್ನಂ ಗ್ರಾಮ್ಯಾದೀನಾಂ ರಸೈರ್ಹಿತಮ್ ॥**
**ಉಷ್ಣಾಂಬುನಾ ಸ್ನಾನಪಾನಂ ನಿವಾತೋಷ್ಣಪ್ರತಿಶ್ರಯಃ ॥ ೧೩೩ ॥**

**ಅರ್ಥ—** ವಾತಪೀನಸದಲ್ಲಿ ರೋಗಿಯನ್ನು ಸ್ನಿಗ್ಧಮಾಡಿ, ಆಸ್ಥಾಪನ ಬಸ್ತಿಗಳನ್ನು ಕೊಟ್ಟು, ದೋಷಗಳನ್ನು ತೆಗೆಯಬೇಕು. ಆಮೇಲೆ ಸ್ನಿಗ್ಧ, ಹುಳಿ, ಉಷ್ಣವಾಗಿದ್ದ ಗ್ರಾಮ್ಯ ಮುಂತಾದ ಪ್ರಾಣಿಗಳ ಮಾಂಸರಸದೊಡನೆ ಹಗುರು ಆಹಾರವನ್ನು ಕೊಡಬೇಕು. ಬಿಸಿನೀರಿನಿಂದ ಸ್ನಾನ-ಪಾನಗಳನ್ನು ಮಾಡಬೇಕು. ಗಾಳಿಯಿಲ್ಲದ ಬೆಚ್ಚಗಿನ ಸ್ಥಳದಲ್ಲಿ ಇರಬೇಕು. ॥೧೩೩॥

**ಚಿಂತಾವ್ಯವಾಯ ವ್ಯಾಯಾಮ ವಾಕ್‌ಚೇಷ್ಟಾವಿರತೋಭವೇತ್ ।**
**ವಾತಜೇ ಪೀನಸೇ ಧೀಮಾನಿಚ್ಛನ್ನೇವಾತ್ಮನೋಹಿತಮ್ ॥೧೩೪॥**

**ಅರ್ಥ—** ತನ್ನ ಹಿತವನ್ನು ಇಚ್ಛಿಸುವಂಥ ವಾತಪೀನಸರೋಗಿಯು ಚಿಂತೆ, ಮೈಥುನ, ವ್ಯಾಯಾಮ, ಮಾತಾಡೋಣ, ನಡಿಯೋಣಗಳನ್ನು ಮಾಡಬಾರದು. ॥೧೩೪॥

ಪಿತ್ತಪ್ರತಿಶ್ಯಾಯದ ಚಿಕಿತ್ಸೆಯನ್ನು ಹೇಳುತ್ತಾರೆ.

**ಪಿತ್ತೇ ಸರ್ಪಿಃ ಪಿಬೇತ್ ಸಿದ್ಧಂ ಶೃಂಗವೇರಶೃತಂ ಪಯಃ ।**
**ಪಾಚನಾರ್ಥೇ ಪಿಬೇತ್ ಪಕ್ವೇ ಕಾರ್ಯಂ ಮೂರ್ಧವಿರೇಚನಂ ॥೧೩೫॥**

**ಅರ್ಥ—** ಪಿತ್ತದ ಪೀನಸದಲ್ಲಿ ಆಮದ ಪಚನಕ್ಕಾಗಿ ಸುಂಠಿಯಿಂದ ಸಿದ್ಧಮಾಡಿದ ಘೃತವನ್ನು ಅಥವಾ ಸುಂಠಿಹಾಕಿ ಕುದಿಸಿದ ಹಾಲನ್ನು ಕುಡಿಯಬೇಕು. ಪ್ರತಿಶ್ಯಾಯವು ಪಕ್ವವಾಗಲು (ಮುಂದೆ ಹೇಳಿದ) ಶಿರೋವಿರೇಚನವನ್ನು ಮಾಡಬೇಕು. ||೧೩೫||

**ಪಾಠಾದ್ವಿರಜನೀಮೂರ್ವಾ ಪಿಪ್ಪಲೀಜಾತಿಪಲ್ಲವೈಃ ||**
**ದಂತ್ಯಾ ಚ ಸಿದ್ಧಂ ತತ್ ತೋಯಂ ನಸ್ಯಂ ಸ್ಯಾತ್ ಪಕ್ವಪೀನಸೇ || ೧೩೬ ||**

**ಅರ್ಥ—** ಅಗಳಶುಂಠಿ, ಅರಿಷಣ, ಮರಅರಿಷಣ, ಹೆಗ್ಗೂರಟಿಗೆ, ಹಿಪ್ಪಲಿ, ಮಲ್ಲಿಗೆ ಬಳ್ಳಿಯ ಎಲೆ, ದಂತೀಮೂಲ, ಇವುಗಳಿಂದ ಸಿದ್ಧಮಾಡಿದ ಕಷಾಯವು ಪಕ್ವಪೀನಸದಲ್ಲಿ ವಿರೇಚನ ನಸ್ಯವಾಗಿದೆ. ||೧೩೬||

**ಪೂಯಾಸ್ರರಕ್ತಪಿತ್ತಘ್ನಾಃ ಕಷಾಯಾ ನಾವನಾನಿ ಚ ||**
**ಪಾಕದಾಹಾಢ್ಯರೂಕ್ಷೇಷು ಶೀತಾಃ ಸೇಕಾಃ ಪ್ರಲೇಪನಾಃ || ೧೩೭ ||**

**ಅರ್ಥ—** ನಾಸಾಪಾಕ, ದಾಹ, ರುಕ್ಷತೆಗಳಿದ್ದರೆ, ಕೀವು, ರಕ್ತ, ಪಿತ್ತ ಮತ್ತು ರಕ್ತದೋಷನಾಶಕವಾದ ಕಷಾಯ, ನಸ್ಯ, ಸೇಚನ, ಲೇಪನಗಳನ್ನು ತಣ್ಣಗೆ ಮಾಡಿ ಉಪಯೋಗಿಸಬೇಕು. ||೧೩೭||

**ಸ್ನೇಹನಸ್ಯೋಪಚಾರಾಶ್ಚ ಕಷಾಯಾಃ ಸ್ವಾದುಶೀತಲಾಃ ||**
**ಮಂದಪಿತ್ತೇ ಪ್ರತಿಶ್ಯಾಯೇ ಸ್ನಿಗ್ಧೈಃ ಕುರ್ಯಾದ್ವಿರೇಚನಮ್ || ೧೩೮ ||**

**ಅರ್ಥ—** ಮಧುರ, ಶೀತಲವಾದ ಸ್ನೇಹದ ನಸ್ಯ ಕಷಾಯಗಳನ್ನು ಉಪಯೋಗಿಸಬೇಕು. ಸ್ವಲ್ಪ ಪಿತ್ತವಿದ್ದ ಪ್ರತಿಶ್ಯಾಯದಲ್ಲಿ ಸ್ನೇಹ ವಿರೇಚನವನ್ನು ಕೊಡಬೇಕು. ||೧೩೮||

ಕಫಪ್ರತಿಶ್ಯಾಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಗೌರವಾರೋಚಕೇಷ್ವಾದೌ ಲಂಘನಂ ಕಫಪೀನಸೇ ||**
**ಸ್ವೇದಾಃ ಸೇಕಾಶ್ಚ ಪಾಕಾರ್ಥಂ ಲಿಪ್ತೇ ಶಿರಸಿ ಸರ್ಪಿಷಾ || ೧೩೯ ||**

**ಅರ್ಥ—** ಕಫಪೀನಸದಲ್ಲಿ ಜಡತ್ವ ಅರುಚಿಗಳು ಇದ್ದರೆ, ಮೊದಲು ಲಂಘನವನ್ನು ಮಾಡಿಸಿ, ಆಮ ಪಾಚನಕ್ಕಾಗಿ ತಲೆಗೆ ತುಪ್ಪವನ್ನು ತೊಡೆದು ಸ್ವೇದ ಸೇಕಗಳನ್ನು ಮಾಡಬೇಕು. ||೧೩೯||

**ಲಶುನಂ ಮುದ್ಗಚೂರ್ಣೇನ ವ್ಯೋಷಕ್ಷಾರಘೃತೈರ್ಯುತಮ್ ॥**
**ದೇಯಂ ಕಫಘ್ನಂವಮನಮುತ್‌ಕ್ಲಿಷ್ಟಶ್ಲೇಷ್ಮಣೇಹಿತಮ್ ॥ ೧೪೦ ॥**

**ಅರ್ಥ—** ಹೆಸರಹಿಟ್ಟು, ತ್ರಿಕಟು, ಜವಖಾರ, ಘೃತಗಳನ್ನು ಹಾಕಿ, ಬಳ್ಳೊಳ್ಳಿಯ ಕಲ್ಕವನ್ನು ಕೊಡಬೇಕು. ಕಫವು ಕೆದಳಿದ್ದರೆ ಕಫನಾಶಕ ವಮನವನ್ನು ಕೊಡಬೇಕು. ॥೧೪೦॥

**ಅಪೀನಸೇ ಪೂತಿನಸ್ಯೇ ಘ್ರಾಣಾಸ್ರಾವೇ ಸಕಂಡುಕೇ ॥**
**ಧೂಮಃ ಶಸ್ತೋಽವಪೀಡಸ್ಯ ಕಟುಭಿಃ ಕಫಪೀನಸೇ ॥ ೧೪೧ ॥**

**ಅರ್ಥ—** ಅಪೀನಸ, ಪೂತಿನಸ್ಯ, ಘ್ರಾಣಸ್ರಾವ, ಕಂಡುಗಳು ಇದ್ದರೆ ಧೂಮ ಮತ್ತು ಅವಪೀಡ (ಕಲ್ಕಮಾಡಿ ಮೂಗಿನಲ್ಲಿ ಹಿಂಡುವ ಔಷಧ)ಗಳನ್ನು ಕೊಡಬೇಕು. ಕಫ ಪೀನಸದಲ್ಲಿ ಕಾರ ಔಷಧಗಳಿಂದ ಮಾಡಿದ ಅವಪೀಡಕವು ಹಿತಕರವಾಗಿದೆ. ॥೧೪೧॥

**ಮನಃಶಿಲಾವಚಾವ್ಯೋಷವಿಡಂಗಂ ಹಿಂಗುಗುಗ್ಗುಲುಃ।**
**ಚೂರ್ಣೈಃ ಪ್ರಾಯಃ ಪ್ರಧಮನಃ ಕಟುಭಿಸ್ತ್ರಿಫಲೈಃ ಸಹ ॥೧೪೨॥**

**ಅರ್ಥ—** ಮನಶಿಲಾ, ಬಜಿ, ತ್ರಿಕಟು, ವಾವಡಿಂಗ, ಇಂಗು, ಗುಗ್ಗುಳಗಳ ಚೂರ್ಣಗಳಿಂದ ಅಥವಾ ತ್ರಿಫಳಾ ಮತ್ತು (ಮೆಣಸು ಮುಂತಾದ) ಕಾರ ಔಷಧಗಳಿಂದ ಪ್ರಧಮನನಸ್ಯವನ್ನು ಕೊಡಬೇಕು. ॥೧೪೨॥

**ಭಾರ್ಗೀಮದನತರ್ಕಾರೀ ಸುರಸಾದಿವಿಪಾಚಿತಮ್ ।**
**ತೈಲಂ ಸರ್ಷಪಜಂ ಬಲ್ಯಂ ಕಫಪೀನಸಶಾಂತಯೇ ॥೧೪೩॥**

**ಅರ್ಥ—** ಗಂಟಿಭಾರಂಗಿ, ಮದನಫಲ, ಹೂಸಲಕ್ಕಿ ಮತ್ತು ಸುರಸಾದಿ ಗಣಗಳಿಂದ ಸಿದ್ಧಮಾಡಿದ ಸಾಸಿವೆ ತೈಲವು ಬಲವರ್ಧಕವೂ ಕಫಪೀನಸನಾಶಕವೂ ಆಗಿದೆ. ॥೧೪೩॥

**ಆರ್ತಕಾಲಾವಚಾಲಂ ಚ ವಿಡಂಗಂ ಕುಷ್ಠಪಿಪ್ಪಲೀ ।**
**ಕೃತ್ವಾ ಕಲ್ಕಂ ಕರಂಜಂ ಚ ತೈಲಂ ತೈಃ ಸಾರ್ಷಪಂ ಪಚೇತ್ ॥೧೪೪॥**
**ಪಾಕಾನ್ಮುಕ್ತೇ ಘನೇನಸ್ಯಮೇತನ್ಮೇದೋಽನ್ವಿತೇ ಕಫೇ ।**
**ಸ್ನಿಗ್ಧಸ್ಯ ವ್ಯಾಹತೇ ವೇಗೇ ಛರ್ದನಂ ಕಫಪೀನಸೇ ॥೧೪೫॥**

**ಅರ್ಥ—**ಕೋಷ್ಟ, ಅಗುರು, ಬಜಿ, ಹರಿತಾಳ, ವಾವಡಿಂಗ ಕೋಷ್ಟ, ಪಿಪ್ಪಲಿ, ಹುಲಗಲಿ ಬೀಜ ಇವುಗಳ ಕಲ್ಕದಿಂದ ಸಿದ್ಧಮಾಡಿದ ಸಾಸಿವೆ

ಎಣ್ಣೆಯು. ||೧೪೪|| ಪಾಕದಿಂದ ಗಟ್ಟಿಯಾಗಿ ಮೇದಯುಕ್ತ ಕಫವು ಬೀಳು ತ್ತಿದ್ದರೆ ಇದು ಉತ್ತಮ ಸಸ್ಯವಾಗಿದೆ. ಕಫಪೀನಸದಲ್ಲಿ ವೇಗದ ಪ್ರತಿ ಬಂಧವಿರಲು ಸ್ನಿಗ್ಧಮಾಡಿ (ಮುಂದೆ ಹೇಳಿದ) ವಮನಕೊಡಬೇಕು. ||೧೪೫||

**ವಮನೀಯ ಶೃತಕ್ಷೀರ ತಿಲಮಾಷಯವಾಗುನಾ ।**
**ಯವಾಗ್ವಾಮದನಕ್ಷೀರ ತಿಲಮಾಷೋಪಸಿದ್ಧಯಾ ||೧೪೬||**

**ಅರ್ಥ—** ವಾಮಕ ಔಷಧಗಳನ್ನು ಹಾಕಿ ಕುದಿಸಿದ ಹಾಲು ಮತ್ತು ಎಳ್ಳು, ಉದ್ದುಗಳ ಪೇಯದಿಂದ ಅಥವಾ ಮದನಫಲ, ಹಾಲು ಎಳ್ಳು, ಉದ್ದು ಹಾಕಿ ಸಿದ್ಧಮಾಡಿದ ಪೇಯದಿಂದ ವಾಂತಿಮಾಡಿಸಬೇಕು. ||೧೪೬||

**ಕಫಘ್ನಮನ್ನಂ ವಾರ್ತಾಕ ಕುಲತ್ಥಾಢಕಿಮುದ್ಗಜಾಃ ।**
**ಯೂಷಾಃ ಸಕುಲಕವ್ಯೋಷಾಃ ಶಸ್ತಾಸ್ತ್ರೋಯೋಷ್ಣ ಸೇವಿನಃ ||೧೪೭||**

**ಅರ್ಥ—** ಕಫನಾಶಕ ಅನ್ನ, ಬದನಿ, ಹುರಳಿ, ತೊಗರಿ, ಹೆಸರು, ಪಡುವಲ, ತ್ರಿಕಟುಗಳಿಂದ ಮಾಡಿದ ಕಟ್ಟು ಮತ್ತು ಬಿಸಿನೀರು ಇವು ಅವನಿಗೆ ಹಿತಕರವಾಗಿವೆ. ||೧೪೭||

ತ್ರಿದೋಷಜ ಪೀನಸ ಚಿಕಿತ್ಸೆಯನ್ನು ಹೇಳುತ್ತಾರೆ.

**ಸರ್ವಜಿತ್ ಪೀನಸೇ ದುಷ್ಟೇ ಕಾರ್ಯಂ ಶೋಫೇ ತು ಶೋಫನುತ್ ।**
**ಕ್ಷಾರೋಽರ್ಬುದಾದಿಮಾಂಸೇಷು ಕ್ರಿಯಾ ಸರ್ವೇಷ್ವವೇಕ್ಷ್ಯ ಚ ||೧೪೮||**

**ಅರ್ಥ—** ದುಷ್ಟ ಪೀನಸದಲ್ಲಿ ತ್ರಿದೋಷನಾಶಕ ಚಿಕಿತ್ಸೆಯನ್ನು ಮಾಡ ಬೇಕು. ಅದರಲ್ಲಿ ಬಾವು ಇದ್ದರೆ ಬಾವುನಾಶಕ ಚಿಕಿತ್ಸೆಯನ್ನು ಮಾಡಬೇಕು. ಅರ್ಬುದ, ಅಧಿಮಾಂಸಗಳಲ್ಲಿ ಕ್ಷಾರವನ್ನು ಹಚ್ಚಬೇಕು. ಅಪೀನಸ ಮುಂತಾದ ನಾನಾರೋಗಗಳಲ್ಲಿ ರೋಗ ವಿಶೇಷವನ್ನು ವಿಚಾರಿಸಿ ಚಿಕಿತ್ಸೆ ಮಾಡಬೇಕು. ||೧೪೮||

ನಾಸಾರೋಗ ಚಿಕಿತ್ಸೆಯನ್ನು ಹೇಳಿ, ಶಿರೋರೋಗ, ಮುಖರೋಗ, ಕರ್ಣ ರೋಗ, ಕಣ್ಣುಗಳ ಚಿಕಿತ್ಸೆಯನ್ನು ಹೇಳಹೊರಟು, ಮೊದಲು ಶಿರೋರೋಗ ಚಿಕಿತ್ಸೆಯನ್ನು ಹೇಳುತ್ತಾರೆ.

**ವಾತಿಕೇ ಶಿರಸೋ ರೋಗೇಸ್ನೇಹಸ್ವೇದಾನ್ ಸನಾವನಾನ್ ।**
**ಪಾನಾನ್ನಮುಪನಾಹಾಂಶ್ಚ ಕುರ್ಯಾದ್ ವಾತಾಮಯಾಪಹಾನ್ ||೧೪೯||**

ಅರ್ಥ—ವಾತಜ ಶಿರೋರೋಗದಲ್ಲಿ ಸ್ನೇಹ, ಸ್ವೇದ, ನಸ್ಯಗಳನ್ನೂ ವಾತನಾಶಕ ಪಾನ, ಆಹಾರ, ಉಪನಾಹಗಳನ್ನೂ ಮಾಡಬೇಕು. ||೧೪೯||

**ತೈಲಭೃಷ್ಟೈರಗುರ್ವಾದ್ಯೈಃ ಸುಖೋಷ್ಣೈಶ್ಚೋಪನಾಹನಮ್ ||**
**ಜೀವನ್ಯೈಃ ಸುಮನಸಾ ಮತ್ಸ್ಯಮಾಂಸೈಶ್ಚ ಶಸ್ಯತೇ ||೧೫೦||**

ಅರ್ಥ– (ಜ್ವರಚಿಕಿತ್ಸೆಯಲ್ಲಿ ಅಗುರ್ವಾದಿ ತೈಲಮಾಡುವಾಗ ಹೇಳಿದ) ಅಗುರ್ವಾದಿ ಗುಣವನ್ನು ತೈಲದಲ್ಲಿ ಕರಿದು, ತಾಳುವಷ್ಟು ಬಿಸಿಯಿರುವಾಗಲೇ ಅದನ್ನು ಕಟ್ಟಬೇಕು. ಅಪರಂತೆ ಜೀವನೀಯ ಗಣಗಳಿಂದ ಹೂವುಗಳಿಂದ ಅಥವಾ ಮೀನಮಾಂಸಗಳಿಂದ ಮಾಡಿದ ಉಪನಾಹಗಳನ್ನು ಕಟ್ಟಬೇಕು. ||೧೫೦||

ರಾಸ್ನಾದಿ ತೈಲಗಳನ್ನು ಹೇಳುತ್ತಾರೆ.

**ರಾಸ್ನಾಸ್ಥಿರಾದಿಭಿಃ ಸಿದ್ಧಂ ಸಕ್ಷೀರಂ ನಸ್ಯಮಾರ್ತಿನುತ್ ||**
**ತೈಲಂ ರಾಸ್ನಾದ್ವಿಕಾಕೋಲಿ ಶರ್ಕರಾಭಿರಥಾಪಿ ವಾ ||೧೫೧||**

ಅರ್ಥ— ರಾಸ್ನಾ, ಲಘುಪಂಚಮೂಲ ಕಲ್ಕಗಳಿಂದ ಹಾಲಿನಲ್ಲಿ ಸಿದ್ಧ ಮಾಡಿದ ಅಥವಾ ರಾಸ್ನಾ, ಕಾಕೋಲಿ, ಕ್ಷೀರಕಾಕೋಲಿ, ಸಕ್ಕರೆಗಳ ಕಲ್ಕದಿಂದ ಹಾಲಿನಲ್ಲಿ ಸಿದ್ಧಮಾಡಿದ ತೈಲದ ನಸ್ಯವು ವಾತಜಶಿರೋವ್ಯಥೆಯನ್ನು ಕಳೆಯುವದು. ||೧೫೧||

ಬಲಾದಿ ತೈಲವನ್ನು ಹೇಳುತ್ತಾರೆ.

**ಬಲಾಮಧುಕಯಷ್ಟ್ಯಾಹ್ವ ವಿದಾರೀ ಚಂದನೋತ್ಪಲೈಃ ||**
**ಜೀವಕರ್ಷಭಕದ್ರಾಕ್ಷಾ ಶರ್ಕರಾಭಿಶ್ಚ ಸಾಧಿತಃ ||೧೫೨||**

**ಪ್ರಸ್ಥಸ್ತೈಲಸ್ಯ ಸಕ್ಷೀರೋ ಜಾಂಗಲಾರ್ಧತುಲಾರಸೇ ||**
**ನಸ್ಯಂ ಸರ್ವೋರ್ಧ್ವಜತ್ರೂತ್ಥವಾತಪಿತ್ತಾಮಯಾಪಹಮ್ ||೧೫೩||**

ಅರ್ಥ—ಬಲಾಮೂಲ, ಇಪ್ಪೇ ಹೂವು, ಜೇಷ್ಠಮಧು, ನೆಲಗುಂಬಳ, ಚಂದನ, ನೀಲಕಮಲ, ಜೀವಕ, ಋಷಭಕ, ದ್ರಾಕ್ಷೆ, ಸಕ್ಕರೆಗಳ ಕಲ್ಕದಿಂದ ||೧೫೨|| ೧೨೮ ತೊಲಿ ಹಾಲು, ೨೦೦ ತೊಲಿ ಜಾಂಗಲ ಮಾಂಸಗಳಲ್ಲಿ ಸಿದ್ಧಮಾಡಿದ ೧೨೮ ತೊಲಿ ತೈಲವು ಕುತ್ತಿಗೆ ಮೇಲಿನ ಎಲ್ಲ ವಾತ ಪಿತ್ತರೋಗ ನಾಶಕ ನಸ್ಯವಾಗಿರುವದು. ||೧೫೩||

ಲಘು ಮಯೂರ ಘೃತವನ್ನು ಹೇಳುತ್ತಾರೆ.

**ದಶಮೂಲಬಲಾರಾಸ್ನಾ ತ್ರಿಫಲಾ ಮಧುಕೈಃ ಸಹ ||**
**ಮಾಯೂರಂ ಪಕ್ಷಪಿತ್ತಾಂತ್ರಶಕೃತ್ಪಾದಾಸ್ಯವರ್ಜಿತಮ್ ||೧೫೪||**

**ಜಲೇ ಪಕ್ತ್ವಾ ಘೃತಪ್ರಸ್ಥಂ ತಸ್ಮಿನ್ ಕ್ಷೀರಸಮಂ ಪಚೇತ್ ||**
**ಮಧುರೈಃ ಕಾರ್ಷಿಕೈಃ ಕಲ್ಕೈಃ ಶಿರೋರೋಗಾರ್ದಿತಾಪಹಮ್||೧೫೫||**

**ಕರ್ಣನಾಸಾಕ್ಷಿಜಿಹ್ವಾಸ್ಯಗಲರೋಗವಿನಾಶನಮ್ ||**
**ಮಾಯೂರಮಿತಿ ವಿಖ್ಯಾತಮೂರ್ಧ್ವಜತ್ರುಗದಾಪಹಮ್ ||೧೫೬||**

**ಅರ್ಥ—** ದಶಮೂಲ, ಬಲಾಮೂಲ, ರಾಸ್ನೆ, ತ್ರಿಫಳಾ, ಜೇಷ್ಠ ಮಧು ಈ ಹದಿನಾರು ಔಷಧಗಳನ್ನು ಆರಾರು ತೊಲೆಗಳಂತೆ ಒಟ್ಟು ೯೬ ತೊಲೆ, ಪಕ್ಷಪಿತ್ತ ಅಂತ್ರಮಲ, ಕಾಲುಮೋರೆಗಳನ್ನು ತೆಗೆದು ಹಾಕಿದ ನವಿಲಿನ ( ಮಾಂಸ ಅಸ್ಥಿ ) ದೇಹವನ್ನು ೯೬ ತೊಲೆತೆಗೆದುಕೊಂಡು ||೧೫೪|| ಎಂಟು ಪಾಲು ನೀರು ಹಾಕಿ ಕುದಿಸಿ, ¼ ಉಳಿಯಲು ಅದರಲ್ಲಿ ಒಂದೊಂದು ತೊಲೆ ಜೀವನೀಯ ಮತ್ತು ಕಾಕೋಲಿ ಗಣದ ಔಷಧಗಳ ಕಲ್ಕವನ್ನು ಹಾಕಿ ಕುದಿಸಿ ಘೃತವನ್ನು ಸಿದ್ಧಮಾಡಬೇಕು. ಇದು ಮಾಯೂರವೆಂಬ ವಿಖ್ಯಾತ ಘೃತವು. ಇದರ ನಸ್ಯವು ತಲೆಶೂಲಿ, ಅರ್ದಿತಗಳನ್ನು ನಾಶಮಾಡುವದು. ||೧೫೫|| ಕಿವಿ, ಮೂಗು, ಕಣ್ಣು, ನಾಲಿಗೆ, ಮುಖ, ಕಂಠಗಳ ರೋಗಗಳನ್ನು ಕುತ್ತಿಗೆಯ ಮೇಲಿನ ಎಲ್ಲ ರೋಗಗಳನ್ನೂ ಕಳೆಯುವದು. ||೧೫೬||

ಮಹಾಮಾಯೂರ ಘೃತವನ್ನು ಹೇಳುತ್ತಾರೆ—

**ಏತೇನೈವ ಕಷಾಯೇಣ ಘೃತಪ್ರಸ್ಥಂ ವಿಪಾಚಯೇತ್ ||**
**ಚತುರ್ಗುಣೇನ ಪಯಸಾ ಕಲ್ಕೈರೇಭಿಶ್ಚ ಕಾರ್ಷಿಕೈಃ || ೧೫೭ ||**

**ಜೀವಂತೀ ತ್ರಿಫಲಾ ಮೇದಾ ಮೃದ್ವೀಕರ್ದ್ಧಿಪರೂಷಕೈಃ ||**
**ಸಮಾಂಗಾಚವಿಕಾಭಾರ್ಗೀ ಕಾಶ್ಮರೀಕರ್ಕಟಾಹ್ವಯೈಃ ||೧೫೮||**

**ಆತ್ಮಗುಪ್ತಾಮಹಾಮೇದಾತಾಲಖರ್ಜೂರಮಸ್ತಕೈಃ ||**
**ಮೃಣಾಲಬಿಸಖರ್ಜೂರಮಧುಕೈಶ್ಚ ಸಜೀರಕೈಃ ||೧೫೯||**

**ಶತಾವರೀ ವಿದಾರೀಕ್ಷು ಬೃಹತೀಸಾರಿವಾಯುಗ್ಮೈಃ ||**
**ಮೂರ್ವಾಶ್ಚ ದಂಷ್ಟ್ರರ್ಷಭಕಶೃಂಗಾಟಕಕಶೇರುಕೈಃ ||೧೬೦||**

ರಾಸ್ನಾಸ್ಥಿರಾ ತಾಮಲಕೀ ಸೂಕ್ಷ್ಮೈಲಾಶಠಿಪೌಷ್ಕರೈಃ ॥
ಪುನರ್ನವಾ ತು ಗಾಕ್ಷೀರೀ ಕಾಕೋಲೀ ಧನ್ವಯಾಸಕೈಃ ॥೧೬೧॥

ಮಧುಕಾಕ್ಷೋಡಬಾದಾಮ ಮುಂಜಾತಾಭಿಷುಕೈರಪಿ ॥
ದ್ರವ್ಯೈರೇಭಿರ್ಯಥಾಲಾಭಂ ಪೂರ್ವಕಲ್ಪೇನ ಸಾಧಿತಮ್ ॥೧೬೨॥

ಪಾನೇ ನಸ್ಯೇ ತಥಾಭ್ಯಂಗೇ ಬಸ್ತೌ ಚೈತತ್ಪ್ರದಾಪಯೇತ್ ॥
ಶಿರೋರೋಗೇಷು ಸರ್ವೇಷು ಕಾಸೇ ಶ್ವಾಸೇ ಚ ದಾರುಣೇ ॥೧೬೩॥

ಮನ್ಯಾಪೃಷ್ಠಗ್ರಹೇ ಶೋಷೇ ಸ್ವರಭೇದೇ ತಥಾರ್ದಿತೇ ॥
ಯೋನ್ಯಸೃಕ್‌ಶುಕ್ರದೋಷೇಷು ಶಸ್ತಂ ವಂಧ್ಯಾಸುತಪ್ರದಮ್॥೧೬೪॥

ಋತುಸ್ನಾತಾ ತಥಾ ನಾರೀ ಪೀತ್ವಾ ಪುತ್ರಂ ಪ್ರಸೂಯತೇ ॥
ಮಹಾಮಾಯೂರಮಿತ್ಯೇತತ್ ಘೃತಮಾತ್ರೇಯಪೂಜಿತಮ್ ॥೧೬೫॥

ಆಖುಭಿಃ ಕುಕ್ಕುಟೈರ್ಹಂಸೈಃ ಶಶೈಶ್ಚಾಪಿ ಹಿ ಬುದ್ಧಿಮಾನ್ ॥
ಕಲ್ಪೇನಾನೇನ ವಿಪಚೇತ್ ಸರ್ಪಿರೂರ್ಧ್ವಗದಾಪಹಮ್ ॥೧೬೬॥

**ಅರ್ಥ—** ಇದೇ ಮೇಲೆ ಹೇಳಿದ ದಶಮೂಲಾದಿ ಕಷಾಯ ಮತ್ತು ಹಾಲು ೫೧೨-೫೧೨ ತೊಲಿ ಕೂಡಿಸಿ, ಅದರಲ್ಲಿ ॥೧೫೭॥ ಜೀವಂತಿ, ತ್ರಿಫಳೆ, ಮೇದಾ, ದ್ರಾಕ್ಷೆ , ಋದ್ಧಿ, ಪರೂಷಕ, ಮಂಜಿಷ್ಠಾ, ಚವಿಕಾ, ಗಂಟಭಾರಂಗಿ, ಕಾಶ್ಮರಿ (ಶಿವನ್ನಿ), ಕಾಕಡಶಿಂಗಿ ॥೧೫೮॥ ನಸುಗುನ್ನಿ ಬೀಜ, ಮಹಾ ಮೇದಾ, ತಾಡವೃಕ್ಷದ ತುದಿ, ಖರ್ಜೂರ ವೃಕ್ಷದ ತುದಿ, ಕಮಲದದೇಟು. ಬಿಸ, (ಕಮಲದ ದೊಡ್ಡ ದೇಟು), ಉತ್ತತ್ತಿ, ಜೇಷ್ಠಮಧು, ಜೀರಿಗೆ ॥೧೫೯॥ ಶತಾವರಿ, ನೆಲಗುಂಬಳ, ಕಬ್ಬು, ನೆಲಗುಳ್ಳ, ಹೆಬ್ಬಗುಳ್ಳ, ಕಪ್ಪು ಕೆಂಪು ಅನಂತಮೂಲ, ಹೆಗ್ಗೊರಟಿಗಿ, ನೆಗ್ಗಿಲು, ಶಿಂಗಾಡೆ, ಕಶೇರುಕ (ಕೋತಿಗಡ್ಡೆ) ॥೧೬೦॥ ರಾಸ್ನಾ, ಒಂದೆಲೆ ಹೊನ್ನೆ, ನೆಲನೆಲ್ಲಿ, ಸಣ್ಣಯಾಲಕ್ಕಿ, ಕಚೋರಾ, ಪುಷ್ಕರ ಮೂಲ, ಬಿಳೇ ಗಣಜಲಬೇರು, ವಂಶಲೋಚನ, ಕಾಕೋಲಿ, ನೆಲ ಇಂಗಳ, ॥೧೬೧॥ ಜೇಷ್ಠಮಧು, ಅಕ್ರೋಡ, ಬದಾಮ, ಮುಂಜಾತ (ಕಂದ ವಿಶೇಷ) ಅಭಿಷುಕ (ಪಿಸ್ತೆ) ಈ ದ್ರವ್ಯಗಳಲ್ಲಿ ಸಿಕ್ಕಷ್ಟುದ್ರವ್ಯಗಳ ೧-೧ ತೊಲೆ ಚೂರ್ಣವನ್ನು ಹಾಕಿ ಮೇಲಿನಂತೆಯೇ ೧೨೮ ತೊಲೆ ಘೃತವನ್ನು ಸಿದ್ಧ ಮಾಡಬೇಕು. ॥೧೬೨॥ ಇವನ್ನು ಪಾನ, ನಸ್ಯ, ಅಭ್ಯಂಗ, ಬಸ್ತಿಗಳಲ್ಲಿಯೂ ಉಪಯೋಗಿಸಬೇಕು. ಇದು ಎಲ್ಲ ತಲೆಶೂಲಿಗಳಲ್ಲಿ, ಭಯಂಕರವಾದ ಕೆಮ್ಮು-ದಮ್ಮುಗಳಲ್ಲಿ ॥೧೬೩॥ ಹೆಡಕು ಬೆನ್ನುಗಳ ಹಿಡಿತದಲ್ಲಿ, ಶೋ-

ಸ್ವರಭೇದ, ಅರ್ದಿತ, ಯೋನಿರೋಗ, ರಜೋದೋಷ, ಶುಕ್ರದೋಷಗಳಲ್ಲಿ ಪ್ರಶಸ್ತವಾಗಿದೆ. ಬಂಜೆಗೂ ಮಕ್ಕಳನ್ನು ಕೊಡುವದು. ||೧೬೪|| ಋತುಸ್ನಾತಳಾದ ಸ್ತ್ರೀಯು ಇದನ್ನು ಕುಡಿದರೆ ಗಂಡು ಮಗುವನ್ನು ಹೆರುವಳು. ಇದು ಮಹಾಮಾಯೂರ ಘೃತವು, ಆತ್ರೇಯ ಋಷಿಗಳಿಗೆ ಮಾನ್ಯವಾಗಿದೆ. ||೧೬೫|| ಇದರಂತೆ ಇಲಿ, ಕೋಳಿ, ಹಂಸ, ಮೊಲಗಳ ಕಷಾಯದಿಂದ ಬುದ್ಧಿವಂತನಾದ ವೈದ್ಯನು ಘೃತವನ್ನು ಸಿದ್ಧಮಾಡಬೇಕು. ಇದು ಕತ್ತಿಗೆ ಮೇಲಿನ ಎಲ್ಲ ರೋಗಗಳನ್ನು ನಾಶಮಾಡುವದು. ||೧೬೬||

ಪಿತ್ತಜ ಶಿರೋರೋಗ ಚಿಕಿತ್ಸೆಯನ್ನು ಹೇಳುತ್ತಾನೆ.

**ಪೈತ್ತೇ ಘೃತಂ ಪಯಃ ಸೇಕಾಃ ಶೀತಾ ಲೇಪಾಃ ಸನಾವನಾಃ ||**
**ಜೀವನೀಯಾನಿ ಸರ್ಪೀಂಷಿ ಪಾನಾನ್ನಂ ಚಾಪಿ ಪಿತ್ತನುತ್ ||೧೬೭||**

**ಅರ್ಥ**— ಪಿತ್ತಜ ಶಿರೋರೋಗದಲ್ಲಿ ಘೃತ, ಹಾಲು, (ಮುಂದೆ ಹೇಳಿದ) ತಣ್ಣಗಿನ ಪರಿಷೇಕ, ಲೇಪ, ನಸ್ಯ, ಜೀವನೀಯ ಘೃತ, ಪಿತ್ತನಾಶಕ ಅನ್ನಪಾನಗಳನ್ನು ಸೇವಿಸಬೇಕು. ||೧೬೭||

**ಚಂದನೋಶೀರಯಷ್ಟ್ಯಾಹ್ವ ಬಲಾವ್ಯಾಘ್ರನಖೋತ್ಪಲೈಃ |**
**ಕ್ಷೀರಪಿಷ್ಟೈಃ ಪ್ರದೇಹಃ ಸ್ಯಾತ್ ಶೃತೈರ್ವಾ ಪರಿಷೇಚನಮ್ ||೧೬೮||**

**ಅರ್ಥ**—ಚಂದನ, ಬಾಳದ ಬೇರು, ಜೇಷ್ಠಮಧು, ಬಲಾಮೂಲ, ವ್ಯಾಘ್ರನಖ, ನೀಲಕಮಲಗಳನ್ನು ಹಾಲಿನಲ್ಲಿ ಅರೆದು ಲೇಪನವನ್ನು ನೀರಿನಲ್ಲಿ ಕುದಿಸಿ ಪರಿಷೇಕವನ್ನು ಮಾಡಬೇಕು. ||೧೬೮||

**ತ್ವಕ್ಪತ್ರಶರ್ಕರಾಕಲ್ಕಃ ಸುಪಿಷ್ಟಸ್ತಂಡುಲಾಂಬುನಾ |**
**ಕಾರ್ಯೋಽವಪೀಡಃ ಸರ್ಪಿಶ್ಚ ನಸ್ಯಂ ತಸ್ಯಾನುಪೈತ್ತಿಕೇ ||೧೬೯||**

**ಅರ್ಥ**—ದಾಲಚಿನ್ನಿ, ತಮಾಲಪತ್ರ, ಸಕ್ಕರೆಗಳ ಕಲ್ಕವನ್ನು ಅಕ್ಕಿ ತೊಳೆದ ನೀರಿನಲ್ಲಿ ಅರೆದು, ಅರಿವೆಯಲ್ಲಿ ಹಾಕಿ, ಮೂಗಿನಲ್ಲಿ ಹಿಂಡಿ, ಅನಂತರ ತುಪ್ಪವನ್ನು ಹಾಕಬೇಕು. ||೧೬೯||

**ಯಷ್ಟ್ಯಾಹ್ವ ಚಂದನಾನಂತಾ ಕ್ಷೀರಸಿದ್ಧಂ ಹಿತಂ ಘೃತಮ್ ||**
**ನಾವನಂ ಶರ್ಕರಾದ್ರಾಕ್ಷಾಮಧುಕೈಶ್ಚಾಪಿ ಪಿತ್ತಜೇ ||೧೭೦||**

**ಅರ್ಥ**— ಘೃತದ ನಾಲ್ಕನೇ ಪಾಲು ಜೇಷ್ಠಮಧು, ಚಂದನ, ಅನಂತ ಮೂಲಗಳ ಕಲ್ಕ ಮತ್ತು ನಾಲ್ಕು ಪಾಲು ಹಾಲುಗಳಿಂದ ಸಿದ್ಧವಾದ

ಅಥವಾ ಸಕ್ಕರೆ, ದ್ರಾಕ್ಷೆ, ಜೇಷ್ಠಮಧುಗಳಿಂದ ಸಿದ್ಧವಾದ ಘೃತದ ನಸ್ಯ ವನ್ನು ಮಾಡಬೇಕು. (೧೭೦)

ಕಫಜ ಶಿರೋರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ಕಫಜೇ ಸ್ವೇದಿತಂ ನಸ್ಯಧೂಮ ಪ್ರಧಮನಾದಿಭಿಃ ||**
**ಶುದ್ಧಂ ಪ್ರಲೇಪಪಾನಾನ್ನೈಃ ಕಫಘ್ನೈಃ ಸಮುಪಾಚರೇತ್ ||೧೭೧||**

**ಪುರಾಣಸರ್ಪಿಷಃ ಪಾನೈಸ್ತೀಕ್ಷ್ಣೈರ್ಬಸ್ತಿಭಿರೇವ ಚ ||**
**ಕಫಾನಿಲೋದ್ಭವೇ ದಾಹಃ ಶೇಷಯೋ ರಕ್ತಮೋಕ್ಷಣಮ್ ||೧೭೨||**

**ಅರ್ಥ—** ಕಫಜ ಶಿರೋರೋಗದಲ್ಲಿ ಮೊದಲು ಸ್ವೇದಕೊಟ್ಟು ಆಮೇಲೆ ನಸ್ಯ, ಧೂಮ, ಪ್ರಧಮನ ಮುಂತಾದವುಗಳಿಂದ ರೋಗಿಯನ್ನು ಶುದ್ಧಿಮಾಡಿ ಕಫನಾಶಕ ಲೇಪ, ಅನ್ನಪಾನಗಳಿಂದಲೂ ||೧೭೧|| ಹಳೇ ಘೃತದ ಪಾನ ಗಳಿಂದಲೂ ತೀಕ್ಷ್ಣಬಸ್ತಿಗಳಿಂದಲೂ ಉಪಚರಿಸಬೇಕು. ಕಫವಾತ ದಿಂದುಂಟಾದ ಶಿರೋರೋಗದಲ್ಲಿ ದಾಹವನ್ನೂ ಉಳಿದ ಕಡೆಗೆ (ಸನ್ನಿಪಾತ ಕ್ರಿಮಿಜಗಳಲ್ಲಿ) ರಕ್ತಮೋಕ್ಷಗಳನ್ನು ಮಾಡಬೇಕು. ||೧೭೨||

**ಏರಂಡನಲದಕ್ಷೌಮಗುಗ್ಗುಲ್ವಗುರುಚಂದನೈಃ ||**
**ಧೂಮವರ್ತಿಂ ಪಿಬೇತ್ ಗಂಧೈರಕುಷ್ಠತಗರೈಸ್ತಥಾ ||೧೭೩||**

**ಅರ್ಥ—** ಔಡಲಬೇರು, ಜಟಾಮಾಂಸಿ, ನಾರಬಟ್ಟೆ, ಗುಗ್ಗುಳ, ಅಗುರುಗಳಿಂದ ಆದರಂತೆ ಕೋಷ್ಠ, ತಗರಗಳ ಹೊರ್ತಾಗಿ ಬೇರೆ ಗಂಧದ್ರವ್ಯ ಗಳಿಂದ ಧೂಮದ ಬತ್ತಿಯನ್ನು ಮಾಡಿ, ಅದನ್ನು ಸೇದಬೇಕು. (ಕೋಷ್ಠ, ತಗರಗಳು ಮಿದುಳನ್ನು ಸ್ರವಿಸುವದರಿಂದ ಅವನ್ನು ಉಪಯೋಗಿಸಬಾರದು). ||೧೭೩||

**ಸನ್ನಿಪಾತೋದ್ಭವೇ ಕಾರ್ಯಾ ಸನ್ನಿಪಾತಹರೀ ಕ್ರಿಯಾ ||**
**ಕ್ರಿಮಿಜೇ ಚಾಪಿ ಕರ್ತವ್ಯಂ ತೀಕ್ಷ್ಣಂ ಮೂರ್ಧವಿರೇಚನಮ್ ||೧೭೪||**

**ಅರ್ಥ—** ಸನ್ನಿಪಾತದಿಂದುಂಟಾದ ಶಿರೋರೋಗದಲ್ಲಿ ಸನ್ನಿಪಾತ ನಾಶಕ ಚಿಕಿತ್ಸೆಯನ್ನು ಕ್ರಿಮಿಗಳಿಂದುಂಟಾದ ಶಿರೋರೋಗದಲ್ಲಿ ತೀಕ್ಷ್ಣವಾದ ಶಿರೋವಿರೇಚನವನ್ನೂ ಕೊಡಬೇಕು. ||೧೭೪||

ತ್ವಗಾದಿ ತೈಲವನ್ನು ಹೇಳುತ್ತಾರೆ—

**ತ್ವಗ್ದಂತೀವ್ಯಾಘ್ರನಖರಜ ವಿಡಂಗನವಮಾಲಿಕಾಃ ||**
**ಅಪಾಮಾರ್ಗಫಲಂ ಬೀಜಂ ಸಕ್ತುಮಾಲಶಿರೀಷಯೋಃ ||೧೭೫||**

**ಕ್ಷವಕೋಽಶ್ಮಂತಕೋ ಬಿಲ್ವಂ ಹರಿದ್ರಾ ಹಿಂಗು ಯೂಥಿಕಾ ||**
**ಫಣಿಜ್ಝಕಶ್ಚ ತೈಸ್ತೈಲಮವಿಮೂತ್ರೇಚತುರ್ಗುಣೇ ||೧೭೬||**

**ಸಿದ್ಧಂ ಸ್ಯಾನ್ನಾವನಂ ಚೂರ್ಣಂ ಚೈಷಾಂ ಪ್ರಧಮನಂ ಭವೇತ್ ||**
**ಫಲಂ ಶಿಗ್ರುಕರಂಜಾಭ್ಯಾಂ ಸವ್ಯೋಷಂ ಚಾವಪೀಡಕಃ ||೧೭೭||**

**ಕಷಾಯಃ ಸ್ವರಸಃ ಕ್ಷಾರಶ್ಚೂರ್ಣಂ ಕಲ್ಕೋಽವಪೀಡಕಂ ||**
**ಶುಕ್ತತಿಕ್ತಕಟುಕ್ಷಾದ್ರ ಕಷಾಯೈಃ ಕವಲಗ್ರಹಃ ||೧೭೮||**

**ಅರ್ಥ—** ದಾಲಚಿನ್ನಿ, ದಂತೀಮೂಲ, ವ್ಯಾಘ್ರನಖ, ನವಮಲ್ಲಿಕಾ ಉತ್ತರಾಣಿ, ಸಕ್ತುಮೂಲ (ಹುಲಗಲಿ), ಶಿರೀಷಗಳ ಬೀಜ, ||೧೭೫|| ಕ್ಷವಕ, (ಸೀನುತರುವ ವನಸ್ಪತಿ) ಅಶ್ಮಂತಕ (ಆರೆ), ಬಿಲ್ವ, ಅರಿಷಿಣ, ಇಂಗು, ಮಲ್ಲಿಗೆ, ಫಣಿಜ್ಝಕ (ತುಳಸೀಭೇದ) ಇವುಗಳ ಕಲ್ಕದಿಂದ ೪ ಪಾಲು ಆಡಿನ ಮೂತ್ರದಲ್ಲಿ ||೧೭೬|| ಸಿದ್ಧವಾದ ತೈಲವನ್ನು ನಸ್ಯಕ್ಕಾಗಿಯೂ ಚೂರ್ಣವನ್ನು ಪ್ರಧಮನಕ್ಕಾಗಿಯೂ ಉಪಯೋಗಿಸಬೇಕು. ನುಗ್ಗಿ, ಹುಲಗಲಿ, ಇವುಗಳ ಬೀಜ ಮತ್ತು ತ್ರಿಕಟು ಇವುಗಳನ್ನು ನೀರಿನಲ್ಲಿ ಅರೆದು ಅವಪೀಡನವನ್ನು ಮಾಡಬೇಕು. ||೧೭೭|| ಅವುಗಳ ಕಷಾಯ, ಸ್ವರಸ, ಕ್ಷಾರ, ಚೂರ್ಣ, ಕಲ್ಕ ಗಳಿಂದಲೂ ಅವಪೀಡನ ನಸ್ಯವನ್ನು ಮಾಡಬೇಕು ಅವುಗಳ ಶುಕ್ತ (ಕಂದ ಮೂಲದಿಂದ ಮಾಡಿದ ಮದ್ಯ,) ಕಹಿ, ಕಾರ, ಕಷಾಯಗಳಲ್ಲಿ ಜೇನು ಹಾಕಿ ಕವಲ ಮಾಡಿಸಬೇಕು. ||೧೭೮||

ಮುಖರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ಧೂಮಃ ಪ್ರಧಮನಂ ಶುದ್ಧಿರಧಶ್ಛರ್ದನಲಂಘನೇ ||**
**ಭೋಜ್ಯಂ ಚ ಮುಖರೋಗೇಷು ಯಥಾಸ್ವಂ ದೋಷನುದ್ಧಿತಮ್ ||೧೭೯||**

**ಅರ್ಥ—** ಧೂಮ, ಪ್ರಧಮನ, ವಿರೇಚನ, ವಮನ, ಲಂಘನ, ಮತ್ತು ಆಯಾ ದೋಷಗಳ ನಾಶಕ ಆಹಾರವು ಮುಖರೋಗಗಳಲ್ಲಿ ಹಿತಕರ ವಾಗಿದೆ. ||೧೭೯||

**ಯವಕ್ಷಾರಂ ಪಿಪ್ಪಲೀಂ ಚ ಸದಾರ್ವೀತ್ವಗ್ ರಸಾಂಜನಮ್ ||**
**ಪಾಠಾಂ ತೇಜೋವತೀಂ ಪಥ್ಯಾಂ ಸಮಭಾಗಾನಿಚೂರ್ಣಯೇತ್ ||೧೮೦||**
**ಸಕ್ಷೌದ್ರಂ ಧಾರಯೇದೇತತ್ ಮುಖರೋಗೇಷು ಬುದ್ಧಿಮಾನ್ ||**
**ಸೀಧುಮಾಧವಮಾರ್ದ್ವೀಕೈಃ ಶ್ರೇಷ್ಠೋಽಯಂ ಕವಲಗ್ರಹಃ || ೧೮೧ ||**

**ಅರ್ಥ—** ಜವಖಾರ, ಹಿಪ್ಪಲಿ, ಮರದರಿಶಿಣದ ತೊಗಟೆ, ರಸಾಂಜನ, ಅಗಳಶುಂಠಿ, ತೇಜೋವತಿ, (ತೇಜಬಳ), ಅಣಲೆ ಇವುಗಳ ಸಮಭಾಗ ಚೂರ್ಣವನ್ನು || ೧೮೦ || ಜೇನುತುಪ್ಪದಲ್ಲಿ ಕಲಿಸಿ ಬುದ್ಧಿವಂತನು ಎಲ್ಲ ಮುಖರೋಗಗಳಲ್ಲಿ ಸೀಧು (ಕಬ್ಬಿನಮದ್ಯ), ಮಧುಕಪುಷ್ಪ, ದ್ರಾಕ್ಷೆಗಳ ಮದ್ಯದೊಡನೆ ಬಾಯಿಯಲ್ಲಿ ಹಿಡಿಯಬೇಕು. ಈ ಕವಲವು ಶ್ರೇಷ್ಠವಾಗಿದೆ. || ೧೮೧ ||

**ತೇಜೋಹ್ವಾಮಭಯಾಂ ಮೂರ್ವಾಂ ಸಮಂಗಾಂ ಕಟುಕೀಂ ಘನಂ ||**
**ಪಾಠಾಂ ರಸಾಂಜನಂ ಲೋಧ್ರಂ ದಾರ್ವೀಂ ಕುಷ್ಠಂ ಚ ಚೂರ್ಣಯೇತ್ || ೧೮೨ ||**
**ದಂತಾನಾಂ ಘರ್ಷಣಂ ರಕ್ತಸ್ರಾವಕಂಡೂರುಜಾಪಹಮ್ ||**
**ಪಂಚಕೋಲಕತಾಲೀಸಪತ್ರೈಲಾಮರಿಚತ್ವಚಃ || ೧೮೩ ||**
**ಪಲಾಶಮುಷ್ಕಕಕ್ಷಾರ ಯವಕ್ಷಾರಾಶ್ಚ ಚೂರ್ಣಿತಾಃ ||**
**ಗುಡೇ ಪುರಾಣೇ ದ್ವಿಗುಣೇ ಕ್ವಥಿತೇ ಗುಡಿಕಾಃ ಕೃತಾಃ || ೧೮೪ ||**
**ಕರ್ಕಂಧುಮಾತ್ರಾಃ ಸಪ್ತಾಹಂ ಸ್ಥಿತಾ ಮುಷ್ಕಕಭಸ್ಮನಿ ||**
**ಕಂಠರೋಗೇಷು ಸರ್ವೇಷು ಧಾರ್ಯಾಃ ಸ್ಯುರಮೃತೋಪಮಾಃ || ೧೮೫ ||**



**ಅರ್ಥ—** ತೇಜೋವತಿ, ಅಣಲೆ, ಹೆಗ್ಗೊರಟಿಗೆ, ಮಂಜಿಷ್ಠೆ, ಕಟುಕರೋಹಿಣಿ, ಜೇಕು, ಅಗಳಶುಂಠಿ, ರಸಾಂಜನ, ಲೋಧ್ರ, ಮರಅರಿಶಿಣ, ಕೋಷ್ಠ ಇವುಗಳ ಚೂರ್ಣವನ್ನು ಮಾಡಿ || ೧೮೨ || ಹಲ್ಲುಗಳಿಗೆ ತಿಕ್ಕಲು, ಅದು ರಕ್ತಸ್ರಾವ, ಕಂಡೂ, ನೋವುಗಳನ್ನು ಕಳೆಯುವದು. ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಶುಂಠಿ, ತಾಲೀಸಪತ್ರ, ಯಾಲಕ್ಕಿ, ಮೆಣಸು, ದಾಲಚಿನ್ನಿ || ೧೮೩ || ಮತ್ತು ಮುತ್ತಲ, ಮುಷ್ಕಕ (ಮೊಕ್ಕೆ) ಗಳ ಕ್ಷಾರ, ಜವಖಾರ ಇವುಗಳ ಚೂರ್ಣವನ್ನು ಇದರ ಇಮ್ಮಡಿ ಹಳೇಬೆಲ್ಲದ ಪಾಕಿನಲ್ಲಿ ಹಾಕಿ, ಬೋರೆ ಕಾಯಿಯಷ್ಟು ಗುಳಿಗೆಗಳನ್ನು ಮಾಡಿ, || ೧೮೪ || ಮುಷ್ಕಕ

(ಮೋಕ್ಷ) ದ ಬೂದಿಯಲ್ಲಿ ಏಳು ದಿವಸ ಇಟ್ಟು, ಎಲ್ಲ ಕಂಠರೋಗಗಳಲ್ಲಿ ಬಾಯಿಯಲ್ಲಿ ಹಿಡಿದರೆ ಅಮೃತದಂತೆ ಹಿತಕರವಾಗುವದು. ॥ ೧೮೫ ॥

ಕಾಣಕ ಚೂರ್ಣವನ್ನು ಹೇಳುತ್ತಾರೆ—

**ಗೃಹಧೂಮೋ ಯವಕ್ಷಾರಃ ಪಾಠಾ ವ್ಯೋಷಂ ರಸಾಂಜನಮ್ ॥**
**ತೇಜೋಹ್ವಾ ತ್ರಿಫಲಾ ಲೋಧ್ರಂ ಚಿತ್ರಕಂ ಚೇತಿ ಚೂರ್ಣಿತಂ ॥೧೮೬॥**
**ಸಕ್ಷೌದ್ರಂ ಧಾರಯೇದೇತತ್ ಗಲರೋಗವಿನಾಶನಮ್ ॥**
**ಕಾಣಕಂ ನಾಮ ತಚ್ಚೂರ್ಣಂ ದಂತಾಸ್ಯ ಗಲರೋಗನುತ್ ॥೧೮೭॥**

**ಅರ್ಥ—** ಇಲ್ಲಣ, ಜವಖಾರ, ಅಗಳಶುಂಠಿ, ತ್ರಿಕಟು, ರಸಾಂಜನ, ತೇಜಬಳ (ತೇಜೋವತಿ) ತ್ರಿಫಳಾ, ಲೋಧ್ರ, ಚಿತ್ರಕ, ಇವುಗಳ ಚೂರ್ಣ ವನ್ನು ॥೧೮೬॥ ಜೇನತುಪ್ಪದಲ್ಲಿ ಕಲಿಸಿ ಬಾಯಿಯಲ್ಲಿ ಹಿಡಿದರೆ, ಕಂಠರೋಗ ಗಳನ್ನು ಕಳೆಯುವದು. ಇದರ ಹೆಸರು 'ಕಾಣಕ ಚೂರ್ಣ' ಇದು ಹಲ್ಲು ಮುಖ, ಕಂಠರೋಗಗಳನ್ನು ಕಳೆಯುತ್ತದೆ. ॥೧೮೭॥

ಪೀತಕ ಚೂರ್ಣವನ್ನು ಹೇಳುತ್ತಾರೆ.

**ಮನಃಶಿಲಾ ಯವಕ್ಷಾರೋ ಹರಿತಾಲಂ ಸಸೈಂಧವಮ್ ॥**
**ದಾರ್ವೀತ್ವಕ್ ಚೇತಿ ತಚ್ಚೂರ್ಣಂ ಮಾಕ್ಷಿಕೇಣ ಸಮಾಯುತಮ್ ॥೧೮೮॥**
**ಮೂರ್ಚ್ಛಿತಂ ಘೃತಮಂಡೇನ ಕಂಠರೋಗೇಷು ಧಾರಯೇತ್ ॥**
**ಮುಖರೋಗೇಷು ಚ ಶ್ರೇಷ್ಠಂ ಪೀತಕಂ ನಾಮ ಕೀರ್ತಿತಮ್ ॥೧೮೯॥**

**ಅರ್ಥ—** ಮನಸಿಲೆ, ಜವಖಾರ, ಹರಿತಾಳ, ಸೈಂಧವ, ಮರ ಅರಿಷಣ ತೊಗಟೆ, ಇವುಗಳ ಚೂರ್ಣದಲ್ಲಿ ಜೇನುತುಪ್ಪ ಕೂಡಿಸಿ ॥೧೮೮॥ ಅದರಲ್ಲಿ ತುಪ್ಪದ ತಿಳಿಯನ್ನು ಸುರಿವಿ ಕಂಠರೋಗಗಳಲ್ಲಿಯೂ ಮುಖರೋಗಗಳ ಲ್ಲಿಯೂ ಹಿಡಿಯಬೇಕು. ಈ ಶ್ರೇಷ್ಠಚೂರ್ಣದ ಹೆಸರು 'ಪೀತಕ' ವೆಂದು ಇದೆ. ॥೧೮೯॥

ಮೃದ್ವೀಕಾದಿ ಚೂರ್ಣವನ್ನು ಹೇಳುತ್ತಾರೆ—

**ಮೃದ್ವೀಕಾ ಕಟುಕಾ ವ್ಯೋಷಂ ದಾರ್ವೀತ್ವಕ್ ತ್ರಿಫಲಾ ಘನಮ್ ॥**
**ಪಾಠಾ ರಸಾಂಜನಂ ಮೂರ್ವಾ ತೇಜೋಹ್ವಾ ಚೇತಿ ಚೂರ್ಣಿತಮ್**

**ಕ್ಷೌದ್ರಯುಕ್ತಂ ವಿಧಾತವ್ಯಂ ಗಲರೋಗೇ ಭಿಷಗ್ಜಿತಮ್ ॥**
**ಯೋಗಾಸ್ತ್ವೇತೇ ತ್ರಯಃ ಪ್ರೋಕ್ತಾ ವಾತಪಿತ್ತಕಫಾಪಹಾಃ ॥೧೯೧॥**

**ಅರ್ಥ—** ದ್ರಾಕ್ಷೆ, ಕಟುಕರೋಣಿ, ತ್ರಿಕಟು, ಮರಅರಿಷಿಣದಕೋಟೆ ತ್ರಿಫಳಾ, ಜೇಕು, ಅಗಳಶುಂಠಿ, ರಸಾಂಜನ, ಹೆಗ್ಗೊರಟಿಗಿ, ತೇಜಬಳ ಇವುಗಳ ಚೂರ್ಣವನ್ನು ॥೧೯೦॥ ಜೇನಿನಲ್ಲಿ ಕಲಿಸಿ, ಹಿಡಿಯಬೇಕು. ಇದು ಕಂಠರೋಗಕ್ಕೆ ಒಳ್ಳೇ ಔಷಧವು. ಈ ಮೂರು (ಕಾಣಕ, ಪೀತಕ, ವೃದ್ಧೀಕಾದಿ ಚೂರ್ಣ) ಔಷಧಗಳು ವಾತ-ಪಿತ್ತ-ಕಫನಾಶಕವಾಗಿವೆ. ॥೧೯೧॥

**ಕಟುಕಾತಿ ವಿಷಾಪಾಠಾ ದಾರುಮುಸ್ತಕ ಲಿಂಗಕಾಃ ॥**
**ಗೋಮೂತ್ರಕ್ವಥಿತಾಃ ಪೇಯಾಃ ಕಂಠರೋಗವಿನಾಶನಾಃ ॥೧೯೨॥**

**ಅರ್ಥ—**ಕಟುಕರೋಣಿ, ಅತಿವಿಷ, ಅಗಳಶುಂಠಿ, ದೇವದಾರು, ಜೇಕು, ಇಂದ್ರಜವೆ ಇವುಗಳನ್ನು ಗೋಮೂತ್ರದಲ್ಲಿ ಕುದಿಸಿ ಕುಡಿಯಬೇಕು. ಅಂದರೆ ಕಂಠರೋಗವು ನಾಶವಾಗುವದು. ॥ ೧೯೨ ॥

**ಸ್ವರಸಃ ಕ್ವಥಿತೋ ದಾರ್ವ್ಯಾ ಘನೀಭೂತೋ ರಸಕ್ರಿಯಾ ॥**
**ಸಕ್ಷೌದ್ರಾ ಮುಖರೋಗಾಸೃಗ್ ದೋಷನಾಡೀವ್ರಣಾಪಹಾ ॥ ೧೯೩ ॥**

**ಅರ್ಥ—**ಮರಅರಿಷಿಣದ ರಸವನ್ನು ಕುದಿಸಿ ಗಟ್ಟಿಮಾಡಬೇಕು ಹೀಗೆ ಗಟ್ಟಿಯಾದ ರಸಕ್ಕೆ 'ರಸಕ್ರಿಯೆ' ಎಂಬ ಹೆಸರು. ಇದನ್ನು ಜೇನುಹಾಕಿ ಬಾಯಿಯಲ್ಲಿ ಹಿಡಿದರೆ, ಮುಖರೋಗ, ರಕ್ತದೋಷ, ನಾಡೀವ್ರಣಗಳನ್ನು ಕಳೆಯುವದು. ॥ ೧೯೩ ॥

**ತಾಲುಶೋಷೇ ಸತೃಷ್ಣಸ್ಯ ಸರ್ಪಿರೌತ್ತರಭಕ್ತಿಕಮ್ ।**
**ಸಾವನಂ ಮಧುರಾಃ ಸ್ನಿಗ್ಧಾಃ ಶೀತಶ್ಚೈವ ರಸಾಹಿತಾಃ ॥ ೧೯೪ ॥**

**ಅರ್ಥ—** ತಾಲುಶೋಷದಲ್ಲಿ ನೀರಡಿಕೆಯಾಗುತ್ತಿದ್ದರೆ, ತುಪ್ಪವನ್ನು ಕುಡಿದು ಮೇಲೆ ಅನ್ನವನ್ನು ತಿನ್ನಬೇಕು, ನಸ್ಯವನ್ನು ಮಾಡಬೇಕು. ಮಧುರ, ಸ್ನಿಗ್ಧ, ಶೀತ ಮಾಂಸರಸಗಳನ್ನು ಕೊಡಬೇಕು. ॥೧೯೪॥

**ಮುಖಪಾಕೇ ಸಿರಾಕರ್ಮ ಶಿರಃ ಕಾಯವಿರೇಚನಮ್ ॥**
**ಮೂತ್ರತೈಲಘೃತಕ್ಷೀರಕ್ಷೌದ್ರೈಶ್ಚ ಕವಲಗ್ರಹಾಃ ॥೧೯೫॥**

**ಅರ್ಥ—** ಮುಖಪಾಕದಲ್ಲಿ (ಅಂಗಳ, ನಾಲಿಗೆಗಳಲ್ಲಿ) ಶಿರಾಭೇದ ಮಾಡಬೇಕು. ಶಿರೋವಿರೇಚನ, ಕಾಯವಿರೇಚನ, ವಮನ, ಗೋಮೂತ್ರ,

ತ್ತೈಲ, ಘೃತ ಹಾಲು, ಜೇನುಗಳನ್ನು ಒಂದೊಂದಾಗಿ ಬಾಯಿಯಲ್ಲಿ ಹಿಡಿಯ ಬೇಕು. ||೧೯೫||

ಸಕ್ಷ್ರೌದ್ರಪಾಠಾ ಮೃದ್ವೀಕಾ ತ್ರಿಫಲಾ ಜಾತಿಪಲ್ಲವಾಃ ||
ಕಷಾಯತಿಕ್ತಕ್ವಾಥಾಶ್ಚ ಶೀತಾಃ ಸ್ಯುರ್ಮುಖಧಾವನಾಃ ||೧೯೬||

ಅರ್ಥ— ಅಗಳಶುಂಠಿ, ದ್ರಾಕ್ಷೆ, ತ್ರಿಫಳಾ, ಜಾಜಿಬಳ್ಳಿಗೆಯ ಎಲೆ; ಇವುಗಳ ಕಷಾಯವನ್ನು ಮತ್ತು ಒಗರು ಕಹಿ ಕಷಾಯಗಳನ್ನು ತಣ್ಣಗೆ ಮಾಡಿ, ಜೇನುಹಾಕಿ ಬಾಯಿಮುಕ್ಕಳಿಸಬೇಕು. ||೧೯೬||

ಖದಿರಾದಿಗುಟಿಕೆ ಮತ್ತು ತೈಲವನ್ನು ಹೇಳುತ್ತಾರೆ.

ತುಲಾಂ ಖದಿರಸಾರಸ್ಯ ದ್ವಿತುಲಾಮರಿಮೇದಸಃ ||
ಪ್ರಕ್ಷಾಲ್ಯ ಜರ್ಜರೀಕೃತ್ಯ ಚತುರ್ದ್ರೋಣೇಂಭಸಃ ಪಚೇತ್ ||೧೯೭||

ದ್ರೋಣಶೇಷಂ ಕಷಾಯಂ ಚ ಪಕ್ತ್ವಾ ಭೂಯಃ ಪಚೇಚ್ಛನೈಃ ||
ತತಸ್ತಸ್ಮಿನ್ ಘನೀಭೂತೇ ಚೂರ್ಣೀಕೃತ್ಯಾಕ್ಷಭಾಗಿಕಮ್ ||೧೯೮||

ಚಂದನಂ ಪದ್ಮಕೋಶೀರಂ ಮಂಜಿಷ್ಠಾ ಧಾತಕೀ ಘನಮ್ ||
ಪ್ರಪೌಂಡರೀಕಂ ಯಷ್ಟ್ಯಾಹ್ವಂ ತ್ವಗೇಲಾಪದ್ಮಕೇಶರಮ್ ||೧೯೯||

ಲಾಕ್ಷಾರಸಾಂಜನಂ ಮಾಂಸೀ ತ್ರಿಫಲಾ ಲೋಧ್ರವಾಲಕಮ್ ||
ರಜನ್ಯೌ ಫಲಿನೀಮೇಲಾಂ ಸಮಂಗಾಂ ಕಟ್ಫಲಂ ವಚಾಮ್ ||೨೦೦||

ಯವಾಸಾಗುರುಪತ್ತ್ರಂಗಗೈರಿಕಾಂಜನಮಾವಪೇತ್ ||
ಲವಂಗಜಾತೀಕಕ್ಕೋಲಜಾತೀಕೋಷಾನ್ ಪಲೋನ್ಮಿತಾನ್ ||೨೦೧||

ಕರ್ಪೂರ ಕುಡವಂ ಚಾಪಿ ಕ್ಷಿಪೇತ್ ಶೀತೇsವತಾರಿತೇ ||
ತತಸ್ತು ಗುಡಿಕಾಃ ಕಾರ್ಯಾಃ ಶುಷ್ಕಾಶ್ಚಾಸ್ಯೇನ ಧಾರಯೇತ್||೨೦೨||

ತೈಲಂ ಚಾನೇನ ಕಲ್ಕೇನ ಕಷಾಯೇಣ ಚ ಸಾಧಯೇತ್ ||
ದಂತಾನಾಂ ಚಾಲನಧ್ವಂಸ ಸೌಷಿರ್ಯ ಕ್ರಿಮಿರೋಗನುತ್ ||೨೦೩||

ಮುಖಪಾಕಾಸ್ಯದೌರ್ಗಂಧ್ಯಂ ಜಾಡ್ಯಾರೋಚಕನಾಶನಮ್ ||
ಸ್ರಾವೋಪಲೇಪಪೈಚ್ಛಿಲ್ಯ ವೈಸ್ವರ್ಯಗಲಶೋಷನುತ್ ||೨೦೪||

ದಂತಾಸ್ಯಗಲರೋಗೇಷು ಸರ್ವೇಷ್ವೇತತ್ಪರಾಯಣಮ್ ||
ಖದಿರಾದಿಗುಡಿಕೇಯಂ ತೈಲಂ ಚ ಖದಿರಾದಿಕಮ್ ||೨೦೫||

**ಅರ್ಥ—** ಬಿಳೀ ಖದಿರ ಸಾರ ೪೦೦ ತೊಲೆ, ವಿಟ್ ಖದಿರ ( ಬಿಳೀ ಜಾತ್ರಿ ) ಸಾರ ೮೦೦ ತೊಲೆ ಇವುಗಳನ್ನು ಚನ್ನಾಗಿ ತೊಳೆದು, ಜಜ್ಜಿ, ೮೧೯೬ ತೊಲಿ ನೀರಿನಲ್ಲಿ ಕುದಿಸಬೇಕು. ||೧೯೭|| ಅದು ⅛ ಭಾಗ ಉಳಿಯಲು ಸೋಸಿ ತಕ್ಕೊಂಡು ಪುನಃ ಸಾವಕಾಶ ಕುದಿಸಬೇಕು. ಗಟ್ಟಿ ಯಾಗಲು ಅದರಲ್ಲಿ, ||೧೯೮|| ಚಂದನ, ಪದ್ಮಕಾಷ್ಟ, ಬಾಳದ ಬೇರು, ಮಂಜಿಷ್ಠ, ಧಾತಕೀಪುಷ್ಪ, ಜೇನು, ಪುಂಡರೀಕಕಾಷ್ಟ, ಜೇಷ್ಠಮಧು, ದಾಲಚಿನ್ನಿ, ಯಾಲಕ್ಕಿ, ಕಮಲ ಕೇಶರ ||೧೯೯|| ಅರಗು, ರಸಾಂಜನ, ಜಟಾಮಾಂಸಿ, ತ್ರಿಫಳಾ, ಲೋಧ್ರ, ಬಾಳದ ಬೇರು, ಮರ ಅರಿಷಿಣ, ಗವಲಾ, (ಪ್ರಿಯಂಗು) ದೊಡ್ಡ ಯಾಲಕ್ಕಿ, ಮಂಜಿಷ್ಠೆ, ಕಟ್ ಫಲ ( ಕಿರಿಶಿವನ್ನಿ ) ಬಜಿ ||೨೦೦|| ನೆಲ ಇಂಗಳ, ಅಗುರು, ಪತಂಗ, ಚಕ್ಕಿ, ಕಾವಿ, ಅಂಜನ (ಸುರಮಾ) ಇವುಗಳ ೧–೧ ತೊಲೆ ಚೂರ್ಣವನ್ನು ಹಾಕಬೇಕು. ಅದನ್ನು ಇಳಿಸಿ ತಣ್ಣಗಾಗಲು, ಲವಂಗ, ಜಾಜೀಕಾಯಿ, ಕಕ್ಕೋಲಿ, (ಕಂಕೋಳ) ಪತ್ರಿಗಳ ಚೂರ್ಣವನ್ನು ೪–೪ ತೊಲೆ ||೨೦೧|| ಕರ್ಪೂರ ೧೬ ತೊಲೆ ಹಾಕಿ, ಗುಳಿಗೆಗಳನ್ನು ಮಾಡಬೇಕು. ಒಣಗಿದ ಮೇಲೆ ಬಾಯಿಯಲ್ಲಿ ಹಿಡಿಯ ಬೇಕು. ||೨೦೨|| ಇದೇ ಕಲ್ಕ ಕಷಾಯಗಳಿಂದ (ಇವೇ ಪದಾರ್ಥಗಳನ್ನು ಇಷ್ಟೇ ನೀರಿನಲ್ಲಿ ಕುದಿಸಿ, ಇವೇ ಚೂರ್ಣಗಳನ್ನು ಇಷ್ಟೇ ಪ್ರಮಾಣದಲ್ಲಿ ಹಾಕಿ, ಲವಂಗಾದಿಗಳ ಆವಾಪವನ್ನು ಅಷ್ಟೇ ಹಾಕಿ ೫೫೬) ತೈಲವನ್ನು ಸಿದ್ಧಮಾ ಡಬೇಕು. ಇದು ಹಲ್ಲುಅಗಳಾಡೋಣ ಹಲ್ಲುಬೀಳೋಣ, ಹಲ್ಲುಪೊಳ್ಳಾಗೋಣ, ಹುಳಹತ್ತೋಣ, ಈ ರೋಗಗಳನ್ನು ಕಳೆಯುತ್ತದೆ. ||೨೦೩|| ಮುಖಪಾಕ, ಬಾಯಿ ನಾರೋಣ, ಜಡತ್ವ, ಅರುಚಿ, ಮುಖಸ್ರಾವ, ಬಾಯಿಯಲ್ಲಿ ಜಿಗಟು, ಲೋಳೆ, ಸ್ವರಭಂಗ, ಗಂಟಲು ಒಣಗೋಣ ಇವುಗಳನ್ನು ಕಳೆಯುತ್ತದೆ. ||೨೦೪|| ಎಲ್ಲ ದಂತರೋಗ, ಮುಖರೋಗ, ಕಂಠರೋಗಗಳಲ್ಲಿ ಈ ಖದಿರಾದಿ ಗುಟಿಕಾ, ಖದಿರಾದಿತೈಲ, ಇವು ಶ್ರೇಷ್ಠ ಔಷಧವಾಗಿವೆ. ||೨೦೫||

ಅರುಚಿ ಚಿಕಿತ್ಸೆಯನ್ನು ಹೇಳುತ್ತಾರೆ.

**ಅರುಚೌ ಕವಲಗ್ರಹಾಃ ಧೂಮಾಃ ಸಮುಖಧಾವನಾಃ ||**
**ಮನೋಜ್ಞಮನ್ನಪಾನಂ ಚ ಹರ್ಷಣಾಶ್ವಾಸನಾನಿ ಚ ||೨೦೬||**

**ಕುಷ್ಠ ಸೌವರ್ಚಲಾಜಾಜೀಶರ್ಕರಾಮರಿಚಂ ಬಿಡಮ್ ||**
**ಧಾತ್ರ್ಯೇಲಾ ಪದ್ಮಕೋಶೀರ ಪಿಪ್ಪಲೀ ಚಂದನೋತ್ಪಲಮ್ ||೨೦೭||**

**ಲೋಧ್ರಂ ತೇಜೋವತೀ ಪಥ್ಯಾ ತ್ರ್ಯೂಷಣಂ ಸಯುವಾಗ್ರಜಮ್ ॥**
**ಆರ್ದ್ರದಾಡಿಮನಿರ್ಯಾಸಶ್ಚಾಜಾಜೀಶರ್ಕರಾಯುತಃ ॥೨೦೮॥**

**ಸತೈಲಮಾಕ್ಷಿಕಾ ಏತೇ ಚತ್ವಾರಃ ಕವಲಗ್ರಹಾಃ ॥**
**ಚತುರೋಽರೋಚಕಾನ್ ಹನ್ಯುರ್ವಾತಾದ್ಯೇಕಜಸರ್ವಜಾನ್ ॥೨೦೯॥**

**ಕಾರವ್ಯಜಾಜೀಮರಿಚಂ ದ್ರಾಕ್ಷಾವೃಕ್ಷಾಮ್ಲದಾಡಿಮಮ್ ॥**
**ಸೌವರ್ಚಲಂ ಗುಡಃ ಕ್ಷೌದ್ರಂ ಸರ್ವಾರೋಚಕನಾಶನಮ್ ॥೨೧೦॥**

**ಬಸ್ತಿಃ ಸಮೀರಣೇ ಪಿತ್ತೇ ವಿರೇಕೋ ವಮನಂ ಕಫೇ ॥**
**ಕುರ್ಯಾದ್ ಹೃದ್ಯಾನುಕೂಲಾನಿ ಹರ್ಷಣಂ ಚ ಮನೋಘ್ನಜೇ ॥೨೧೧॥**

**ಅರ್ಥ—** ಅರುಚಿಯಲ್ಲಿ ಮುಂದೆ ಹೇಳಿದ ಕವಲ, ಹಿಡಿಸೋಣ, ಧೂಮ, ಮುಖಧಾವನ, ಮನೋಹರವಾದ ಅನ್ನಪಾನ, ಆನಂದ ಬಡಿಸೋಣ, ಸಮಾಧಾನ ಹೇಳೋಣ, ಈ ಉಪಚಾರಗಳನ್ನು ಮಾಡಬೇಕು. ॥೨೦೬॥ ವಾತಜ, ಪಿತ್ತಜ, ಕಫಜನುತ್ತ ಸನ್ನಿಪಾತಜ, ಅರೋಚಕಗಳಲ್ಲಿ ಕ್ರಮವಾಗಿ ೧ ಕೋಷ್ಠ, ಕಾಚಲವಣ, ಜೀರಿಗೆ, ಸಕ್ಕರೆ, ಮೆಣಸು, ಬಿಡಲವಣಗಳ ೨ ನೆಲ್ಲಿ, ಯಾಲಕ್ಕಿ, ಪದ್ಮಕಾಷ್ಠ, ಬಾಳದಬೇರು, ಹಿಪ್ಪಲಿ, ಚಂದನ, ನೀಲ ಕಮಲಗಳ ॥೨೦೭॥ ೩ ಲೋಧ್ರ, ತೇಜಬಳ, ಅಣಲೆ, ತ್ರಿಕಟು, ಜವಖಾರ ಗಳ ೪ ಹಸಿ ಶುಂಠಿ ದಾಳಿಂಬರಸ, ಜೀರಿಗೆ ಸಕ್ಕರೆಗಳ ಕಷಾಯದಲ್ಲಿ ಎಣ್ಣೆ ಜೇನುಗಳನ್ನು ಹಾಕಿ ಈ ನಾಲ್ಕೂ ಕವಲಗ್ರಹಗಳನ್ನು ಮಾಡಬೇಕು. ॥೨೦೯॥ ಕರೇಜೀರಿಗೆ, ಜೀರಿಗೆ, ಮೆಣಸು, ದ್ರಾಕ್ಷೆ, ವೃಕ್ಷಾಮ್ಲ, (ಅಮಸೂಲ) ದಾಳಿಂಬ, ಕಾಚಲವಣ, ಬೆಲ್ಲ, ಜೇನು, ಇವುಗಳ ಗುಳಿಗೆಯು ಎಲ್ಲ ಅರುಚಿ ಯನ್ನು ನಾಶಮಾಡುವದು. ॥೨೧೦॥ ವಾತವು ಹೆಚ್ಚಿದ್ದರೆ, ಬಸ್ತಿಯನ್ನು ಪಿತ್ತವು ಹೆಚ್ಚಿದ್ದರೆ, ವಿರೇಚನವನ್ನು, ಕಫವು ಹೆಚ್ಚಿದ್ದರೆ ವಮನವನ್ನು ಕೊಡ ಬೇಕು. ಮನೋವ್ಯಾಘಾತದಿಂದಾದ ಅರುಚಿಯಲ್ಲಿ ಮನೋಹರ, ಅನು ಕೂಲ, ಆನಂದಕೊಡುವ ಕಾರ್ಯಗಳನ್ನು ಮಾಡಬೇಕು. ॥೨೧೧॥

ಸ್ವರಭೇದ ರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ಸರ್ಪಿಂಷ್ಯುಪರಿಭಕ್ತಾನಿ ಸ್ವರಭೇದೇಽನಿಲಾತ್ಮಕೇ ॥**
**ಚತುಷ್ಪ್ರಯೋಗೈಸ್ತೈಶ್ಚ ಬಲಾರಾಸ್ನಾಮೃತಾಹ್ವಯೈಃ ॥೨೧೨॥**

**ಅರ್ಥ—** ವಾತದ ಸ್ವರಭೇದದಲ್ಲಿ ಘೃತಗಳನ್ನು ಕುಡಿದು ಊಟ ಮಾಡಬೇಕು. ಮತ್ತು ಬಲಾಮೂಲ, ರಾಸ್ನೆ, ಅಮೃತ ಬಳ್ಳಿಗಳ ಕಷಾಯ, ಚೂರ್ಣ, ಲೇಹ, ಕವಲಗಳನ್ನು ಕೊಡಬೇಕು. ||೨೧೨||

**ಬರ್ಹಿತ್ತಿತ್ತಿರಿದಕ್ಷಾಣಾಂ ಪಂಚಮೂಲೀಶೃತಾನ್ ರಸಾನ್ ||**
**ಮಾಯೂರಕ್ಷೀರಸರ್ಪಿರ್ವಾ ಪಿಬೇತ್ ತ್ರ್ಯೂಷಣಮೇವ ವಾ ||೨೧೩||**

**ಅರ್ಥ—** ಲಘುಪಂಚಮೂಲ ಕಷಾಯದಲ್ಲಿ ಕುದಿಸಿದ ನವಿಲು, ವೇದ ಪಕ್ಷಿ, ಕೋಳಿಗಳ ಮಾಂಸರಸಗಳನ್ನು ಅಥವಾ ಮಯೂರಘೃತ, ಕ್ಷೀರಘೃತ, ತ್ರ್ಯೂಷಣ ಘೃತಗಳನ್ನು ಕುಡಿಯಬೇಕು. ||೨೧೩||

**ಪೈತ್ತಿಕೇ ತು ವಿರೇಕಃ ಸ್ಯಾತ್ ಪಯಶ್ಚ ಮಧುರೈಃ ಶೃತಮ್ ||**
**ಸರ್ಪಿರ್ಗುಡೋ ಘೃತಂ ತಿಕ್ತಂ ಜೀವನೀಯಂ ವೃಷಸ್ಯ ವಾ ||೨೧೪||**

**ಅರ್ಥ—** ಪಿತ್ತಜ ಸ್ವರಭೇದದಲ್ಲಿ ವಿರೇಚನ ಕೊಡಬೇಕು. ಮಧುರ ವರ್ಗಗಳಿಂದ ಸಿದ್ಧವಾದ ಹಾಲನ್ನು (ಕ್ಷತರೋಗ ಚಿಕಿತ್ಸೆಯಲ್ಲಿ ಹೇಳಿದ) ಸರ್ಪಿರ್ಗುಡವನ್ನು (ಕುಷ್ಠ ಚಿಕಿತ್ಸೆಯಲ್ಲಿ ಹೇಳಿದ) ತಿಕ್ತ ಘೃತವನ್ನೂ ವಾತ ರಕ್ತ ಚಿಕಿತ್ಸೆಯಲ್ಲಿ ಮುಂದೆ ಹೇಳುವ ಜೀವನೀಯ ಘೃತವನ್ನು (ರಕ್ತಪಿತ್ತ ಚಿಕಿತ್ಸೆಯಲ್ಲಿ ಹೇಳಿದ) ವೃಷಘೃತವನ್ನು ಕೊಡಬೇಕು. ||೨೧೪||

**ಕಫಜೇ ಸ್ವರಭೇದೇ ತು ತೀಕ್ಷ್ಣಂ ಮೂರ್ಧವಿರೇಚನಮ್ ||**
**ವಿರೇಕೋ ವಮನಂ ಧೂಮೋ ಯವಾನ್ನಕಟುಸೇವನಮ್ ||೨೧೫||**

**ಅರ್ಥ—** ಕಫಜ ಸ್ವರಭೇದದಲ್ಲಿ ತೀಕ್ಷ್ಣಶಿರೋವಿರೇಚನ, ಕಾಯ ವಿರೇಚನ, ವಮನ, ಧೂಮಪಾನ, ಜವೆಯ ಅನ್ನ, ಕಾರಪದಾರ್ಥಗಳನ್ನು ಸೇವನವಾಡಬೇಕು. ||೨೧೫||

**ಭಾರ್ಗೀವಚಾಭಯಾವ್ಯೋಷಕ್ಷಾರಮೂಕ್ಷಿಕಚಿತ್ರಕಾನ್ ||**
**ಲಿಹ್ಯಾತ್ ಪಿಪ್ಪಲೀ ಪಥ್ಯೇ ವಾ ತೀಕ್ಷ್ಣಂ ಮದ್ಯಂ ಪಿಬೇಚ್ಚ ಸಃ ||೨೧೬||**

**ಅರ್ಥ—** ಭಾರಂಗಮೂಳ, ಬಜಿ, ಅಣಲೆ, ತ್ರಿಕಟು, ಜವಖಾರ, ಚಿತ್ರಕಗಳ ಚೂರ್ಣದಲ್ಲಿ ಜೇನುಹಾಕಿ ನೆಕ್ಕಿಸಬೇಕು, ಅಥವಾ ತೀಕ್ಷ್ಣವಾದ ಮದ್ಯವನ್ನು ಕುಡಿಯಬೇಕು. ||೨೧೬||

**ರಕ್ತಜೇ ಸ್ವರಭೇದೇ ತು ಸಂಸ್ಕೃತಾ ಜಾಂಗಲಾ ರಸಾಃ ||**
**ದ್ರಾಕ್ಷಾವಿದಾರೀಕ್ಷುರಸಾಃ ಸಕ್ಷೌದ್ರಘೃತಶರ್ಕರಾಃ ||೨೧೭||**

**ಅರ್ಥ—** ರಕ್ತಜ ಸ್ವರಭೇದದಲ್ಲಿ [ತುಪ್ಪದಲ್ಲಿ ಕರಿದ] ಜಾಂಗಲ ಮಾಂಸರಸಗಳನ್ನು ಅಥವಾ ದ್ರಾಕ್ಷಾರಸವನ್ನು, ನೆಲಗುಂಬಳ ರಸವನ್ನು ಅಥವಾ ಕಬ್ಬಿನ ರಸವನ್ನು ತುಪ್ಪ, ಜೇನು, ಸಕ್ಕರೆಗಳನ್ನು ಕೂಡಿಸಿ ಕೊಡ ಬೇಕು. ‖ ೨೧೭ ‖

**ಯಚ್ಚೋಕ್ತಂ ಕ್ಷಯಕಾಸಘ್ನಂ ತಚ್ಚ ಸರ್ವಂ ಚಿಕಿತ್ಸಿತಮ್ ‖**
**ರಕ್ತಜಸ್ವರಭೇದಘ್ನಂ ಸಿರಾವ್ಯಧನಮೇವ ಚ ‖ ೨೧೮ ‖**

**ಅರ್ಥ—** ಕ್ಷಯಕಾಸನಾಶಕ್ಕಾಗಿ ಹೇಳಿದ ಎಲ್ಲ ಚಿಕಿತ್ಸೆಯು ರಕ್ತಜ ಸ್ವರಭೇದನಾಶಕವಾಗಿದೆ. ಇದರಲ್ಲಿ ಸಿರಾವ್ಯಧವನ್ನು ಮಾಡಬೇಕು. ‖೨೧೮‖

**ಸನ್ನಿಪಾತೇ ಹಿತಾಃ ಸರ್ವಾಃ ಕ್ರಿಯಾ ನ ತು ಸಿರಾವ್ಯಧಃ ‖**
**ಇತ್ಯುಕ್ತಂ ಸ್ವರಭೇದಸ್ಯ ಸಮಾಸೇನ ಚಿಕಿತ್ಸಿತಮ್ ‖ ೨೧೯ ‖**

**ಅರ್ಥ—** ಸನ್ನಿಪಾತಜ ಸ್ವರಭೇದದಲ್ಲಿ ಸಿರಾವ್ಯಧದ ಹೊರತಾಗಿ ಎಲ್ಲ ಚಿಕಿತ್ಸೆಯನ್ನು ಮಾಡಬೇಕು. ಈ ಪ್ರಕಾರ ಸ್ವರಭೇದ ಚಿಕಿತ್ಸೆಯು ಸಂಕ್ಷೇಪವಾಗಿ ಹೇಳಲ್ಪಟ್ಟಿತು. ‖ ೨೧೯ ‖

ಕರ್ಣರೋಗ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥ ವಕ್ಷ್ಯೇ ಸಮಾಸೇನ ಕರ್ಣರೋಗಚಿಕಿತ್ಸಿತಮ್ ‖**
**ಕರ್ಣಶೂಲೇ ತು ವಾತಘ್ನೀ ಹಿತಾ ಪೀನಸವತ್ ಕ್ರಿಯಾ ‖ ೨೨೦ ‖**

**ಅರ್ಥ—** ಇನ್ನುಮೇಲೆ ಕರ್ಣರೋಗ ಚಿಕಿತ್ಸೆಯನ್ನು ಸಂಕ್ಷೇಪವಾಗಿ ಹೇಳುವೆವು. ಕರ್ಣಶೂಲಕ್ಕೆ ವಾತಪೀನಸದಲ್ಲಿ ಹೇಳಿದ ವಾತನಾಶಕ ಚಿಕಿತ್ಸೆಯನ್ನು ಮಾಡಬೇಕು. ‖ ೨೨೦ ‖

**ಪ್ರದೇಹಾಃ ಪೂರಣಂ ನಸ್ಯಂ ಪಾಕೇ ಸ್ರಾವೇ ವ್ರಣಕ್ರಿಯಾ ‖**
**ಭೋಜ್ಯಾನಿ ಚ ಯಥಾದೋಷಂ ದದ್ಯಾತ್ ಸ್ನೇಹಾಂಶ್ಚ ಪೂರಣಾನ್ ‖೨೨೧‖**

**ಅರ್ಥ—** ವಾತನಾಶಕ ಲೇಪ, ತೈಲಪೂರಣ ನಸ್ಯಗಳನ್ನು ಮಾಡ ಬೇಕು. ಕರ್ಣಪಾಕ, ಕರ್ಣಸ್ರಾವಗಳಲ್ಲಿ ವ್ರಣಚಿಕಿತ್ಸೆಯನ್ನು ಮಾಡಬೇಕು. ದೋಷಾನುಸಾರವಾಗಿ ಆಹಾರವನ್ನು ಕೊಡಬೇಕು. ಕಿವಿಯಲ್ಲಿ (ಮುಂದೆ ಹೇಳಿದ) ಸ್ನೇಹಗಳನ್ನು ತುಂಬಬೇಕು. ‖೨೨೧‖

ಕ್ಷಾರ ತೈಲವನ್ನು ಹೇಳುತ್ತಾರೆ—

**ಬಾಲಮೂಲಕಶುಂಠೀನಾಂ ಕ್ಷಾರೋ ಹಿಂಗು ಸನಾಗರಮ್ ||**
**ಶತಪುಷ್ಪಾ ವಚಾ ಕುಷ್ಠಂ ದಾರು ಶಿಗ್ರು ರಸಾಂಜನಮ್ ||೨೨||**

**ಸೌವರ್ಚಲಂ ಯುವಕ್ಷಾರಃ ಸ್ವರ್ಜಿಕೋದ್ಭಿದ ಸೈಂಧವಮ್ ||**
**ಭೂರ್ಜಗ್ರಂಥಿರ್ಬಿಡಂ ಮುಸ್ತಂ ಮಧುಶುಕ್ತಂ ಚತುರ್ಗುಣಮ್ ||೨೩||**

**ಮಾತುಲುಂಗರಸಶ್ಚೈವ ಕದಲ್ಯಾ ರಸ ಏವ ಚ ||**
**ತೈಲಮೇಭಿರ್ವಿಪಕ್ತವ್ಯಂ ಕರ್ಣಶೂಲಹರಂ ಪರಮ್ ||೨೪||**

**ಬಾಧಿರ್ಯಂ ಕರ್ಣನಾದಶ್ಚ ಪೂಯಸ್ರಾವಶ್ಚ ದಾರುಣಃ ||**
**ಪೂರಣಾದಸ್ಯ ತೈಲಸ್ಯ ಕ್ರಿಮಯಃ ಕರ್ಣಮಾಶ್ರಿತಾಃ ||೨೫||**

**ಕ್ಷಿಪ್ರಂ ಪ್ರಣಾಶಂ ಗಚ್ಛಂತಿ ಕೃಷ್ಣಾತ್ರೇಯಸ್ಯ ಶಾಸನಾತ್ ||**
**ಕ್ಷಾರತೈಲಮಿದಂ ಶ್ರೇಷ್ಠ ಮುಖದಂತಾಮಯಾಪಹಮ್ ||೨೬||**

**ಅರ್ಥ—** ಎಳೇ ಮೂಲಂಗಿ ಶುಂಠಿಗಳ ಕ್ಷಾರ, ಇಂಗು, ಶುಂಠಿ, ಬಡೇ ಸೋಪು, ಬಜೆ, ಕೋಷ್ಠ, ದೇವದಾರು, ನುಗ್ಗಿ, ರಸಾಂಜನ, ಕಾಚಲವಣ, ಜವಖಾರ, ಸಜ್ಜಿಖಾರ ಔದ್ಭಿದಲವಣ, ಸೈಂಧವ, ಭೂರ್ಜಗ್ರಂಥಿ, ಬಿಡಲವಣ, ಚೇಕು ಇವುಗಳ ಕಲ್ಕದಲ್ಲಿ ತೈಲದ ನಾಲ್ಕುಪಟ್ಟು ಮಧುಸುಕ್ತ(ನೆಲ್ಲೀರಸ,ಜೇನು, ಹಿಪ್ಪಲಿ ಕೂಡಿದ ಮದ್ಯ) ||೨೩|| ೪ ಪಾಲು ಮಾದಾಳರಸ, ೪ ಪಾಲು ಬಾಳೇ ಗಡ್ಡಿಯ ರಸ, ಹಾಕಿ ತೈಲವನ್ನು ಸಿದ್ಧಮಾಡಬೇಕು. ಇದು ಕರ್ಣ ಶೂಲವನ್ನು ಕಳೆಯುವದು. ||೨೪|| ಈ ತೈಲವನ್ನು ಕಿವಿಯಲ್ಲಿ ತುಂಬು ವದರಿಂದ ಬಾಧಿರ್ಯ, ಕರ್ಣನಾದ, ಭಯಂಕರವಾದ ಕೀವು ಸೋರೋಣ, ಕಿವಿಯಲ್ಲಿಯಲ್ಲಿರುವ ಕ್ರಿಮಿಗಳು ||೨೫|| ಇವು ಶೀಘ್ರವಾಗಿ ನಾಶಹೊಂದು ವವು, ಎಂದು ಕೃಷ್ಣಾತ್ರೇಯರು ಹೇಳಿದ್ದಾರೆ. ಈ ಕ್ಷಾರತೈಲವು ಮುಖ ರೋಗ, ದಂತರೋಗಗಳನ್ನು ನಾಶಮಾಡುವ ಶ್ರೇಷ್ಠ ಔಷಧವಾಗಿದೆ. ||೨೬||

ಹಿಂಗ್ವಾದಿ ತೈಲವನ್ನು ಹೇಳುತ್ತಾರೆ.

**ಹಿಂಗುತುಂಬುರುಶುಂಠೀಭಿಃ ಸಾಧ್ಯಂ ತೈಲಂ ತು ಸಾರ್ಷಪಮ್ ||**
**ಕರ್ಣಶೂಲೇ ಪ್ರಧಾನಂ ತು ಪೂರಣಂ ಹಿತಮುಚ್ಯತೇ ||೨೭||**

**ಅರ್ಥ—** ಇಂಗು, ಸಬೀಜ, ಶುಂಠಿಗಳ ಕಲ್ಕದಿಂದ ಸಿದ್ಧಮಾಡಿದ ಸಾಸಿವೆ ಎಂಣೆಯು ಕರ್ಣ ಶೂಲದಲ್ಲಿ ಬಹಳ ಹಿತಕಾರಿಯಾದ ಪೂರಣವೆಂದು ಹೇಳಲ್ಪಡುತ್ತದೆ. ||೨೨೭||

ದೇವ ದಾರ್ವಾದಿ ತೈಲವನ್ನು ಹೇಳುತ್ತಾರೆ.

**ದೇವದಾರುವಚಾಶುಂಠೀ ಶತಾಹ್ವಾಕುಷ್ಠ ಸೈಂಧವೈಃ ||**
**ತೈಲಂ ಸಿದ್ಧಂ ಬಸ್ತಮೂತ್ರೇ ಕರ್ಣ ಶೂಲನಿವಾರಣಮ್ ||೨೨೮||**

**ಅರ್ಥ—** ದೇವದಾರು, ಬಜೆ, ಶುಂಠಿ, ಬಡೀಸೋಪು, ಕೋಷ್ಠ, ಸೈಂಧವಗಳ ಕಲ್ಕಹಾಕಿ ನಾಲ್ಕು ಪಾಲು ಆಡಿನ ಮೂತ್ರದಲ್ಲಿ ಸಿದ್ಧಮಾಡಿದ ತೈಲವು ಕರ್ಣಶೂಲವನ್ನು ಕಳೆಯುವದು. ||೨೨೮||

ಗಂಧ ತೈಲವನ್ನು ಹೇಳುತ್ತಾರೆ.

**ವರಾಟಿಕಾನ್ ಸಮಾಹೃತ್ಯ ದಗ್ಧ್ವಾ ಮೃದ್ ಭಾಜನೇ ಶುಭೇ ||**
**ತದ್ಭಸ್ಮ ಸ್ರಾವಯಿತ್ವಾ ತು ಗಂಧತೈಲಂವಿಪಾಚಯೇತ್ ||೨೨೯||**
**ತತ್ತೈಲಂ ಭಿಷಜಾ ಯೋಜ್ಯಂ ವಿಧಿನಾ ಕರ್ಣಪೂರಣೇ ||**
**ರಸಾಂಜನಸ್ಯ ಶುಂಠ್ಯಾಶ್ಚ ಕಲ್ಕಾಭ್ಯಾಂ ಕರ್ಣಶೂಲನುತ್ ||೨೩೦||**

**ಅರ್ಥ—** ಕವಡಿಗಳನ್ನು ಕೂಡಿಸಿ, ಒಳ್ಳೆಯ ಮಣ್ಣಿನ ಪಾತ್ರೆಯಲ್ಲಿ ಹಾಕಿ, ಸುಟ್ಟು, ಅವುಗಳ ಭಸ್ಮವನ್ನು ೨೧ ಸಾರೆ ಕ್ಷಾರ ವಿಧಿಯಿಂದ ಸ್ರಾವಮಾಡಿ, ಆ ಕ್ಷಾರ ಜಲವನ್ನು ೪ ಪಾಲು ತಕ್ಕೊಂಡು ||೨೨೯|| ಅದರಲ್ಲಿ ರಸಾಂಜನ ಮತ್ತು ಶುಂಠಿಯ ಕಲ್ಕವನ್ನು ಹಾಕಿ ಗಂಧ ತೈಲವನ್ನು ಸಿದ್ಧಮಾಡಬೇಕು. ವೈದ್ಯನು ಆ ತೈಲವನ್ನು ವಿಧಿಯಂತೆ ಕಿವಿಯಲ್ಲಿ ತುಂಬಬೇಕು. ||೨೩೦||

**ಮುಖಕರ್ಣಾಕ್ಷಿರೋಗೇಷು ಯಥೋಕ್ತಂ ಪೀನಸೇ ವಿಧಿಮ್ ||**
**ಕುರ್ಯಾದ್ ಭಿಷಕ್ ಸಮೀಕ್ಷ್ಯಾದೌ ದೋಷಕಾಲಬಲಾಬಲಮ್||೨೩೧||**

**ಅರ್ಥ—** ಪೀನಸದಲ್ಲಿ ಹೇಳಿದ ವಿಧಿಯನ್ನೇ ವೈದ್ಯನು ಮುಖರೋಗ, ಕರ್ಣರೋಗ, ಕಣ್ಣು ರೋಗಗಳಲ್ಲಿ ಮೊದಲು ದೋಷಗಳ ಬಲಾಬಲಗಳನ್ನು ವಿಚಾರಿಸಿ ಮಾಡಬೇಕು. ||೨೩೧||

ನೇತ್ರರೋಗ ಚಿಕಿತ್ಸೆಯನ್ನು ಹೇಳುತ್ತಾರೆ.

**ಉತ್ಪನ್ನಮಾತ್ರೇ ತರುಣೇ ನೇತ್ರರೋಗೇ ಬಿಡಾಲಕಃ ||**
**ಕಾರ್ಯೋ ದಾಹೋಪದೇಹಾಶ್ರುಶೋಥರಾಗ ನಿವಾರಣಃ ||೨೩೨||**

**ಅರ್ಥ—** ಹೊಸದಾಗಿ ನೇತ್ರರೋಗವು ಉತ್ಪನ್ನವಾದ ಕೂಡಲೇ (ಮುಂದೆ ಹೇಳಿದ) ಬಿಡಾಲಕ (ಕಣ್ಣುಗಳ ಮೇಲ್ಭಾಗಕ್ಕೆ ಮಾಡುವ ಲೇಪ) ಲೇಪಗಳನ್ನು ಮಾಡಬೇಕು. ಅವು ದಾಹ, ಪಿಚ್ಚು, ನೀರು, ಬಾವು, ಕೆಂಪು ಬಣ್ಣಗಳನ್ನು ಕಳೆಯುವವು. ||೨೩೨||

**ನಾಗರಂ ಸೈಂಧವಂ ಸರ್ಪಿರ್ಮಂಡೇನ ಚ ರಸಕ್ರಿಯಾ ||**
**ನಿರ್ಘೃಷ್ಟಂ ವಾತಜೇ ತದ್ವನ್ಮಧುಸೈಂಧವಗೈರಿಕಮ್ ||೨೩೩||**

**ಅರ್ಥ—** ವಾತಜ ನೇತ್ರರೋಗದಲ್ಲಿ ತುಪ್ಪದ ತಿಳಿಯಲ್ಲಿ ಶುಂಠಿ ಸೈಂಧವಗಳ ಚೂರ್ಣವನ್ನು ಹಾಕಿ, ಅಥವಾ ಜೇನು, ಸೈಂಧವ, ಕಾವಿಗಳ ಚೂರ್ಣವನ್ನು ಹಾಕಿ, ತಿಕ್ಕಿ ಮಾಡಿದ ರಸಕ್ರಿಯೆಯು ಬಿಡಾಲಕಲೇಪವಾಗುವದು. ||೨೩೩||

**ತಥಾ ಸಾವರಕಂ ಲೋಧ್ರಂ ಘೃತಭೃಷ್ಟಂ ಬಿಡಾಲಕಮ್ ||**
**ಕಾರ್ಯಾ ಹರೀತಿಕೀ ತದ್ವತ್ ಘೃತಭೃಷ್ಟಾ ರುಜಾಪಹಾ ||೨೩೪||**

**ಅರ್ಥ—** ಅದರಂತೆ ಬಿಳೀ ಲೋಧ್ರ ಚೂರ್ಣವನ್ನು ತುಪ್ಪದಲ್ಲಿ ಹುರಿದರೆ ಅಥವಾ ಅಳ್ಳೀಕಾಯಿ ಚೂರ್ಣವನ್ನು ತುಪ್ಪದಲ್ಲಿ ಹುರಿದರೆ ಬಿಡಾಲಕವಾಗುವದು, ಅದು ಕಣ್ಣುನೋವನ್ನು ಕಳೆಯುವದು. ||೨೩೪||

**ಪೈತ್ತಿಕೇ ಚಂದನಾನಂತಾ ಮಂಜಿಷ್ಠಾಭಿರ್ಬಿಡಾಲಕಃ ||**
**ಕಾರ್ಯಃ ಪದ್ಮಕಯಷ್ಟ್ಯಾಹ್ವಮಾಂಸೀಕಾಲೀಯಕೈಸ್ತಥಾ ||೨೩೫||**

**ಅರ್ಥ—** ಪಿತ್ತಜ ನೇತ್ರರೋಗದಲ್ಲಿ ಚಂದನ, ಅನಂತ ಮೂಲ, ಮಂಜಿಷ್ಠೆಗಳನ್ನು ಅಥವಾ ಪದ್ಮಕಾಷ್ಠ, ಜೇಷ್ಠಮಧು, ಜಟಾಮಾಂಸೀ, ಕಾಲೀಯ ಕಾಷ್ಠಗಳನ್ನು ನೀರಿನಲ್ಲಿ ಅರೆದು ಬಿಡಾಲಕ ಲೇಪವನ್ನು ಮಾಡಬೇಕು. ||೨೩೫||

**ರೋಚನಾಮುಸ್ತಲವಣಾಗೈರಿಕೈಶ್ಚ ರಸಕ್ರಿಯಾ ||**
**ಕಫೇ ಕಾರ್ಯಾಸ್ತಥಾ ಕ್ಷೌದ್ರಂ ಪ್ರಿಯಂಗುಃ ಸಮನಃಶಿಲಾ ||೨೩೬||**

**ಅರ್ಥ—** ಗೋರೋಚನ, ಜೇಕು, ಸೈಂಧವ, ಕಾವಿಗಳ (ನೀರಿನಲ್ಲಿ ಅರೆದು ಕುದಿಸಿ ಗಟ್ಟಿಯಾದ) ರಸಕ್ರಿಯೆಯು ಬಿಡಾಲಕ ಲೇಪವಾಗಿದೆ, ಕಫಜ ನೇತ್ರರೋಗದಲ್ಲಿ ಪ್ರಿಯಂಗು ಮನಶಿಲೆಗಳ ಚೂರ್ಣವನ್ನು ಜೇನಿನಲ್ಲಿ ಕಲೆಸಿ ಬಿಡಾಲಕ ಲೇಪಮಾಡಬೇಕು. ||೨೩೬||

**ಸನ್ನಿಪಾತೇ ತು ಸರ್ವೈಃ ಸ್ಯಾದ್ ಬಹಿರಕ್ಷ್ಣೋಃ ಪ್ರಲೇಪನಮ್ ||**
**ಪಕ್ಷ್ಮಾಣ್ಯಸ್ಪೃಶತಾ ಕಾರ್ಯಂ ಸಮ್ಯಕ್ ನೇತ್ರಾಂಜನಂ ತ್ರ್ಯಹಾತ್ ||೨೩೭||**

**ಅರ್ಥ—** ಸನ್ನಿಪಾತಜ ನೇತ್ರರೋಗದಲ್ಲಿ ಕಣ್ಣಿನ ಹೊರಗೆ ಈ ಎಲ್ಲ ಔಷಧಗಳಿಂದ ಮಾಡಿದ ಲೇಪವನ್ನು ಮಾಡಬೇಕು. ಮೂರು ದಿನಗಳ ನಂತರ ರೆಪ್ಪೆಗಳನ್ನು ಮುಟ್ಟದೆ ಚೆನ್ನಾಗಿ ನೇತ್ರಾಂಜನವನ್ನು ಮಾಡಬೇಕು. ||೨೩೭||

ಆಶ್ಚ್ಯೋತನವನ್ನು ಹೇಳುತ್ತಾರೆ.

**ಆಶ್ಚ್ಯೋತನಂ ಮಾರುತಜೇ ಕ್ವಾಥೋ ಬಿಲ್ವಾದಿಭಿರ್ಹಿತಮ್ ||**
**ಕೋಷ್ಣಃ ಸೈರಂಡಬೃಹತೀತರ್ಕಾರೀಮಧುಶಿಗ್ರುಭಿಃ ||೨೩೮||**

**ಅರ್ಥ—** ವಾತಜ ನೇತ್ರರೋಗದಲ್ಲಿ ಔಡಲಬೇರು, ನೆಲಗುಳ್ಳದ ಬೇರು, ತರ್ಕಾರೀ (ಹೊಸಲಕ್ಕಿ) ಬಿಳೀನುಗ್ಗೆ, ಮತ್ತು ಬಿಲ್ವಾದಿ ಪಂಚಮೂಲ ಇವುಗಳ ಬಿಸಿ ಕಷಾಯದ ಪರಿಷೇಕವು ಹಿತಕರವು. ||೨೩೮||

**ದ್ರಾಕ್ಷಾದಾರ್ವೀಸಮಂಜಿಷ್ಠಾಃ ಲಾಕ್ಷಾದ್ವಿಮಧುಕೋತ್ಪಲೈಃ ||**
**ಕ್ವಾಥಃ ಸಶರ್ಕರಃ ಶೀತಃ ಪೂರಣಂ ರಕ್ತಪಿತ್ತನುತ್ ||೨೩೯||**

**ಅರ್ಥ—** ದ್ರಾಕ್ಷೆ, ಮರ ಅರಿಶಿಣ, ಮಂಜಿಷ್ಟೆ, ಅರಗು, (ಸ್ಥಲಜ, ಜಲಜವೆಂಬ) ಎರಡು ತರದ ಜೇಷ್ಠಮಧು, ನೀಲಕಮಲ, ಇವುಗಳ ಕಷಾಯದಲ್ಲಿ ಸಕ್ಕರೆಹಾಕಿ ಆರಿಸಿ ಕಣ್ಣಲ್ಲಿ ಹಾಕಿದರೆ ರಕ್ತಪಿತ್ತವು ಹೋಗುವವು ||೨೩೯||

**ನಾಗರ ತ್ರಿಫಲಾನಿಂಬವಾಸಾಲೋಧ್ರರಸಃ ಕಫೇ ||**
**ಕೋಷ್ಣಮಾಶ್ಚ್ಯೋತನಂ ಮಿಶ್ರೈರ್ಭೇಷಜೈಃ ಸನ್ನಿಪಾತಿಕೇ ||೨೪೦||**

**ಅರ್ಥ—** ಕಫಜ ನೇತ್ರರೋಗದಲ್ಲಿ ಶುಂಠಿ, ತ್ರಿಫಳೆ, ಬೇವು ಆಡಸಲಿ, ಲೋಧ್ರಗಳ ಬೆಚ್ಚಗಿನ ಕಷಾಯವನ್ನು ಹಾಕಬೇಕು. ಸನ್ನಿಪಾತಜ ನೇತ್ರರೋಗದಲ್ಲಿ ಈ ಎಲ್ಲ ಔಷಧಗಳನ್ನು ಮಿಶ್ರಮಾಡಿ ಅವುಗಳ ಕಷಾಯವನ್ನು ಹಾಕಬೇಕು. ||೨೪೦||

ಅಂಜನಗಳನ್ನು ಹೇಳುತ್ತಾರೆ.

**ಬೃಹತ್ಯೇರಂಡಮೂಲತ್ವಕ್ ಶಿಗ್ರೋರ್ಮೂಲಂ ಸಸೈಂಧವಮ್ ||**
**ಅಜಾಕ್ಷೀರೇಣ ಪಿಷ್ಟಾ ಸ್ಯಾದ್ ವರ್ತಿರ್ವಾತಾಕ್ಷಿರೋಗನುತ್ ||೨೪೦||**

**ಅರ್ಥ—** ನೆಲಗುಳ್ಳಬೇರು, ಔಡಲಬೇರುಗಳ ತೊಗಟೆ, ನುಗ್ಗಿಯ ಬೇರು ತೊಗಟೆ, ಸೈಂಧವ ಇವುಗಳನ್ನು ಆಡಿನ ಹಾಲಿನಲ್ಲಿ ಅರೆದು, ಬತ್ತಿಯನ್ನು ಮಾಡಿ, ಕಣ್ಣಲ್ಲಿ ತೇದು ಹಾಕಿದರೆ, ವಾತದ ಕಣ್ಣುರೋಗ ಹೋಗುವದು. ||೨೪೧||

**ಸುಮನಃ ಕೋರಕಂ ಶಂಖಂ ತ್ರಿಫಲಾಂ ಮಧುಕಂ ಬಲಾಂ ||**
**ಪಿತ್ತರಕ್ತಾಪಹಾ ವರ್ತಿಃ ಪಿಷ್ಟ್ವಾ ದಿವ್ಯೇನ ವಾರಿಣಾ ||೨೪೨||**

**ಅರ್ಥ—** ಮಲ್ಲಿಗೆಯ ಮೊಗ್ಗೆ, ಶಂಖನಾಭಿ, ತ್ರಿಫಳೆ, ಜೇಷ್ಠಮಧು, ಬಲಾಮೂಲ, ಇವುಗಳನ್ನು ಮಳೆ ನೀರಿನಲ್ಲಿ ಮಾಡಿದ ಬತ್ತಿಯು ಪಿತ್ತರಕ್ತಗಳನ್ನು ಕಳೆಯುವದು. ||೨೪೨||

**ಸೈಂಧವಂ ತ್ರಿಫಲಾ ವ್ಯೋಷಂ ಶಂಖನಾಭಿಃ ಸಮುದ್ರಜಃ ||**
**ಫೇನಃ ಶೈಲೇಯಕಂ ಸರ್ಜೋ ವರ್ತಿಃ ಶ್ಲೇಷ್ಮಾಕ್ಷಿರೋಗನುತ್ ||೨೪೩||**

**ಅರ್ಥ—** ಸೈಂಧವ, ತ್ರಿಫಲೆ, ತ್ರಿಕಟು, ಶಂಖನಾಭಿ, ಸಮುದ್ರಫೇನ, ಶಿಲಾಜಿತು, ರಾಳ ಇವುಗಳಿಂದ ಮಾಡಿದ ಬತ್ತಿಯು ಕಫಜ ಕಣ್ಣು ರೋಗವನ್ನು ಕಳೆಯುವದು. ||೨೪೩||

**ಅಮೃತಾಹ್ವಾ ಬಿಸಂ ಬಿಲ್ವಂ ಪಟೋಲಂ ಛಾಗಲಂ ಶಕೃತ್ ||**
**ಪ್ರಪೌಂಡರೀಕಂ ಯಷ್ಟ್ಯಾಹ್ವಂ ದಾರ್ವೀಕಾಲಾನುಸಾರಿವಾ ||೨೪೪||**
**ಸುಧೌತಂ ಜರ್ಜರೀಕೃತ್ಯ ಹೃತ್ವಾ ಚಾರ್ಧಪಲಾಂಶಿಕಾನ್ ||**
**ಕರ್ಷಂ ಚ ಶುಕ್ಲಮರಿಚಾ ಜಾತೀಪುಷ್ಪಾತ್ ನವಾತ್ ಪಲಮ್||೨೪೫||**
**ಚೂರ್ಣಂ ಕೃತ್ವಾ ತ್ರಿದೋಷಘ್ನೀ ವರ್ತಿರ್ದೃಷ್ಟಿಪ್ರಸಾದನೀ ||**
**ಶಂಖ ವಿದ್ರುಮ ವೈಡೂರ್ಯ ಲೋಹತಾಮ್ರಪ್ಲವಾಸ್ಥಿಭಿಃ ||೨೪೬||**
**ಸ್ರೋತೋಜಶ್ವೇತಮರಿಚೈರ್ವರ್ತಿಃ ಸರ್ವಾಕ್ಷಿರೋಗನುತ್ ||**
**ಶಾಣಾರ್ಧಂ ಮರಿಚಾದ್ ದ್ವೌ ಚ ಪಿಪ್ಪಲ್ಯರ್ಣವಫೇನಯೋಃ ||೨೪೭||**
**ಶಾಣಾರ್ಧಂ ಸೈಂಧವಚ್ಛಾಣಂ ಕೃತ್ವಾ ಸೌವೀರಕಾಂಜನಾತ್ ||**
**ಪಿಷ್ಟಂ ಸುಸೂಕ್ಷ್ಮಂ ಚಿತ್ರಾಯಾಂ ಚೂರ್ಣಾಂಜನಮಿದಂಶುಭಮ್**
**||೨೪೮||**
**ಕಾಚಕಂಡೂಕಫಾರ್ತಾನಾಂ ಮಲಾನಾಂ ಚ ವಿಶೋಧನಮ್ ||**
**ಬಸ್ತಮೂತ್ರೇ ತ್ರ್ಯಹಂ ಸ್ಥಾಪ್ಯ ಬಡಚೂರ್ಣಂ ಸುಭಾವಿತಮ್||೨೪೯||**

**ಚೂರ್ಣಾಂಜನಂ ಹಿ ತ್ರೈಮಿರ್ಯಕ್ರಿಮಿಪಿಲ್ಲಮಲಾಪಹಂ ||**
**ಸೌವೀರಮಂಜನಂ ತುಲ್ಯ ತಾಪ್ಯೋ ಧಾತುರ್ಮನಃಶಿಲಾ ||೨೫೦||**
**ಚಕ್ಷುಷ್ಯಾ ಮಧುಕಂ ಲೋಹಮಣಯಃ ಪೌಷ್ಪಮಂಜನಮ್ ||**
**ಸೈಂಧವಂ ಶೌಕರೀ ದಂಷ್ಟ್ರಾ ಕಂಟಕಂ ಚಾಂಜನಂ ಶುಭಮ್ ||೨೫೧||**
**ತಿಮಿರಾದಿಷು ಚೂರ್ಣಂ ವಾ ವರ್ತಿರ್ವೇಯಮನುತ್ತಮಾ ||೨೫೧|| ||**

**ಅರ್ಥ—** ಅಮೃತಬಳ್ಳಿ, ಕಮಲದೇಟು, ಬಿಲ್ವಮೂಲ, ಕಪಿಪಡುವಲ, ಆಡಿನಪಿಕ್ಕೆ, ಪುಂಡರೀಕಕಾಷ್ಠ, ಜೇಷ್ಠಮಧು, ಮರ ಅರಿಷಿಣದ ತೊಗಟೆ, ಕರೀ ಅನಂತ ಮೂಲ ಇವುಗಳನ್ನು ಸ್ವಚ್ಛವಾಗಿ ತೊಳೆದು ಕುಟ್ಟಿ ಅವನ್ನು ೨ ತೊಲೆ, ನುಗ್ಗಿಬೀಜ ೧ ತೊಲೆ, ಅದೇ ಅರಳಿದ ಮಲ್ಲಿಗೆಹೂವು ೪ ತೊಲೆ ||೨೪೫|| ತಕ್ಕೊಂಡು ಚೂರ್ಣಮಾಡಿ ಅದರಿಂದ ಮಾಡಿದ ಬತ್ತಿಯು ತ್ರಿದೋಷ ನಾಶಕ ಮತ್ತು ದೃಷ್ಟಿ ಪ್ರಸಾದಕವಾಗಿದೆ. ಶಂಖ, ಹವಳ, ವೈಢೂರ್ಯ, ಲೋಹಭಸ್ಮ, ತಾಮ್ರಭಸ್ಮ, ಕಪ್ಪೆ ಎಲಬು ||೨೪೬|| ರಸಾಂಜನ, ನುಗ್ಗೀಬೀಜ ಇವುಗಳಿಂದ ಮಾಡಿದ ಬತ್ತಿಯು ಎಲ್ಲ ಕಣ್ಣುರೋಗಗಳನ್ನು ಕಳೆಯುವದು. ಮೆಣಸು ೨ ಮಾಸಿ, ಹಿಪ್ಪಲಿ ೪ ಮಾಸಿ, ಸಮುದ್ರಫೇನ ೪ ಮಾಸಿ, ||೨೪೭|| ಸೈಂಧವ ೨ ಮಾಸಿ, ಸೌವೀರಾಂಜನ ೪ ಮಾಸಿ, ಇವನ್ನು ಚಿತ್ರಾ ನಕ್ಷತ್ರದ ಮೇಲೆ ಅತಿ ಸಣ್ಣಾಗಿ ಪುಡಿಮಾಡಿ ಆ ಚೂರ್ಣವನ್ನು ಕಣ್ಣಲ್ಲಿ ಹಾಕಬೇಕು. ||೨೪೮|| ಈ ಚೂರ್ಣಾಂಜನವು ಕಾಚರೋಗ, ಕಂಡೂ, ಕಫಗಳಿಂದ ಪೀಡಿತವಾದ ಕಣ್ಣುಗಳ ಮಲವನ್ನು ಶೋಧನಮಾಡುವದು. ಬಿಡಲವಣ ಚೂರ್ಣವನ್ನು ಆಡಿನ ಮೂತ್ರದಲ್ಲಿ ೩ ದಿನಸ ಇಟ್ಟು, ಚೆನ್ನಾಗಿ ಭಾವನೆ ಹೊಂದಿದ ನಂತರ ||೨೪೯|| ಒಣಗಿಸಿ ಸಣ್ಣಾಗಿ ಅರೆದು, ಪುಡಿಮಾಡಿ ಆ ಚೂರ್ಣವನ್ನೇ ಕಣ್ಣಲ್ಲಿ ಹಾಕಬೇಕು. ಇದು ತಿಮಿರ, ಕ್ರಿಮಿ, ಪಿಲ್ಲ ರೋಗಗಳನ್ನು ಕಳೆಯುವದು. ಸೌವೀರಾಂಜನ, ಸುವರ್ಣಮಾಕ್ಷಿಕ ಧಾತು, ಮನಶಿಲೆ||೨೫೦|| ಜೇಷ್ಠಮಧು, ಅಯಸ್ಕಾಂತಮಣಿ ಪುಷ್ಪಕಾಸೀಸ, ಸೈಂಧವ, ಹಂದಿಯ ಹಲ್ಲು, ಬೂರಲದ ಮುಳ್ಳು ಇವುಗಳಿಂದ ಮಾಡಿದ ||೨೫೧|| ಬತ್ತಿಯು ಅಥವಾ ಚೂರ್ಣವು ತಿಮಿರ ಮುಂತಾದ ರೋಗಗಳಲ್ಲಿ ಅತ್ಯುತ್ತಮ ಅಂಜನವಾಗಿದೆ. ||೧೫೧|| ||

ಸುಖಾವತೀ ವರ್ತಿಯನ್ನು ಹೇಳುತ್ತಾರೆ.

**ಕತಕಸ್ಯ ಫಲಂ ಶಂಖಃ ಸೈಂಧವಂ ತ್ರ್ಯೂಷಣಂ ಸಿತಾ ||೨೫೨||**

**ಫೇನೋ ರಸಾಂಜನಂ ಕ್ಷೌದ್ರಂ ವಿಡಂಗಾನಿ ಮನಃಶಿಲಾ ||**
**ಕುಕ್ಕುಟಾಂಡಕಪಾಲಾನಿ ವರ್ತಿರೇಷಾ ವ್ಯಪೋಹತಿ ||೨೫೩||**
**ತಿಮಿರಂ ಪಟಲಂ ಕಾಚಂ ಮಲಂಚಾಶು ಸುಖಾವತೀ ||**

ಅರ್ಥ— ತ್ರಿಫಳಿಬೀಜ, ಶಂಖನಾಭಿ, ಸೈಂಧವ, ತ್ರಿಕಟು, ಸಕ್ಕರೆ, ||೨೫೨|| ಸಮುದ್ರದ ನೊರೆ, ರಸಾಂಜನ, ಜೇನು, ವಾಯವಿಡಂಗ, ಮನಶಿಳೆ, ಕೋಳೀ ತತ್ತಿಯ ಮೇಲಿನ ಕವಚ, ಇವುಗಳಿಂದ ಮಾಡಿದ ಸುಖಾವತೀ ಎಂಬ ಬತ್ತಿಯು ||೨೫೩|| ತಿಮಿರ, ಪಟಲ, ಕಾಚ, ಮಲಗಳನ್ನು ತೀವ್ರವಾಗಿ ಕಳೆಯುವದು. ||೨೫೪|| ||

ದೃಷ್ಟಿಪ್ರದಾವರ್ತಿಯನ್ನು ಹೇಳುತ್ತಾರೆ—

**ತ್ರಿಫಲಾಕುಕ್ಕುಟಾಂಡತ್ವಕ್‌ಕಾಸೀಸಮಯಸೋ ರಜಃ ||೨೫೫||**
**ನೀಲೋತ್ಪಲಂ ವಿಡಂಗಾನಿ ಫೇನಶ್ಚ ಸರಿತಾಂ ಪತೇಃ ||**
**ಆಜೇನ ಪಯಸಾ ಪಿಷ್ಟ್ವಾ ಭಾವಯೇತ್ ತಾಮ್ರಭಾಜನೇ ||೨೫೬||**
**ಸಪ್ತರಾತ್ರಂ ಸ್ಥಿತಂ ಭೂಯಃ ಪಿಷ್ಟ್ವಾ ಕ್ಷೀರೇಣ ವರ್ತಯೇತ್ ||**
**ಏಷಾ ದೃಷ್ಟಿಪ್ರದಾ ವರ್ತಿರಂಧಸ್ಯಾಭಿನ್ನಚಕ್ಷುಷಃ ||೨೫೭||**
**ನೇತ್ರಾಂಜನೇನ ವಿಧಿನಾ ಭಿಷಜಾ ಸಂಪ್ರಯೋಜಿತಾ ||**

ಅರ್ಥ— ತ್ರಿಫಳಿ, ಕೋಳೀತತ್ತಿಯ ಕವಚ, ಹಿರಾಕಸ, ಲೋಹ ಚೂರ್ಣ, ||೨೫೫|| ನೀಲಕಮಲ, ವಾಯವಿಡಂಗ, ಕಡಲನೊರೆ, ಇವುಗಳನ್ನು ಆಡಿನ ಹಾಲು ಹಾಕಿ ೭ ದಿವಸ ಅರೆಯಬೇಕು. ತಾಮ್ರಪಾತ್ರೆಯಲ್ಲಿ ಹಾಕಿ ||೨೫೬|| ೭ ದಿವಸ ಅದರ ಭಾವನೆಯನ್ನು ಕೊಟ್ಟು, ಪುನಃ ಅದೇ ಹಾಲಿನಲ್ಲಿ ಅರೆದು ಬತ್ತಿಯನ್ನು ಮಾಡಬೇಕು. ಈ ದೃಷ್ಟಿಪ್ರದಾ ಎಂಬ ಬತ್ತಿಯನ್ನು ವೈದ್ಯನು ಅಂಜನ ವಿಧಿಯಿಂದ ಉಪಯೋಗಿಸಿದರೆ, ಕುರುಡನಿಗೂ ದೃಷ್ಟಿಯನ್ನು ಕೊಡುವದು. ಕಣ್ಣು ಮಾತ್ರ ಒಡೆದಿರಬಾರದು. ||೨೫೭|| ||

ನೇತ್ರರೋಗ ಚಿಕಿತ್ಸೆಯನ್ನು ಹೇಳುತ್ತಾರೆ—

**ವದನೇ ಕೃಷ್ಣಸರ್ಪಸ್ಯ ನಿಹಿತಂ ಮಾಸಮಂಜನಮ್ ||೨೫೮||**
**ತತಸ್ತಸ್ಮಾತ್ಸಮುದ್ಧೃತ್ಯ ಸುಶುಷ್ಕಂ ಚೂರ್ಣಯೇದ್ಬುಧಃ ||**
**ಸುಮನಃ ಕೌರಕೈಃ ಕುಷ್ಟೈರರ್ಧಾಂಶೈಃ ಸೈಂಧವೇನ ಚ ||೨೫೯||**

ಏತನ್ನೇತ್ರಾಂಜನಂ ಕಾರ್ಯಂ ತಿಮಿರಘ್ನಮನುತ್ತಮಮ್ ||
ಪಿಪ್ಪಲ್ಯಃ ಕಿಂಶುಕರಸೋ ವಸಾ ಸರ್ಪಸ್ಯ ಸೈಂಧವಮ್ ||೨೫೯||
ಘೃತಂ ಚ ಜೀರ್ಣಂ ಸರ್ವಾಕ್ಷಿರೋಗಘ್ನೀ ಸ್ಯಾದ್ರಸಕ್ರಿಯಾ ||
ಶಸ್ತಾ ಸರ್ವಾಕ್ಷಿರೋಗೇಷು ಕಾಚಾರ್ಬುದಮಲೇಷು ಚ ||೨೬೦||

ಧಾತ್ರೀರಸಾಂಜನ ಕ್ಷೌದ್ರಸರ್ಪಿರ್ಭಿಸ್ತು ರಸಕ್ರಿಯಾ ||
ಪಿತ್ತರಕ್ತಾಕ್ಷಿರೋಗಘ್ನೀ ತೈಮಿರ್ಯಪಟಲಾಪಹಾ ||೨೬೧||

**ಅರ್ಥ**— ಕರೇ ಹಾವಿನ ಬಾಯಿಯಲ್ಲಿ ರಸಾಂಜನವನ್ನು ೧ ತಿಂಗಳು ಇಡಬೇಕು. ||೨೫೭|| ಆಮೇಲೆ ವೈದ್ಯನು ಅದನ್ನು ತಕ್ಕೊಂಡು ಚನ್ನಾಗಿ ಒಣಗಿಸಿ ಚೂರ್ಣ ಮಾಡಬೇಕು. ಅವರಲ್ಲಿ ಒಣಗಿದ ಮಲ್ಲಿಗೆ ಮೊಗ್ಗೆಗಳ ಮತ್ತು ಸೈಂಧವದ ಚೂರ್ಣವನ್ನು ಕೂಡಿಸಿ ||೨೫೮|| ನೇತ್ರಾಂಜನವನ್ನು ಮಾಡಬೇಕು ಇದು ತಿಮಿರನಾಶಕ ಅತ್ಯುತ್ತಮ ಅಂಜನವಾಗಿದೆ. ಹಿಪ್ಪಲಿ, ಮುತ್ತುಲಬೊಡ್ಡೆಯರಸ, ಸರ್ಪದ ನೆಣ, ಸೈಂಧವಗಳ ಚೂರ್ಣವನ್ನು || ೨೫೯ || ಹಳೇ ತುಪ್ಪದಲ್ಲಿ ಅರೆಯಬೇಕು. ಇದು ಎಲ್ಲ ಕಣ್ಣುರೋಗನಾಶಕವಾದ ರಸಕ್ರಿಯೆಯಾಗಿದೆ ಇದು ಎಲ್ಲ ಕಣ್ಣುರೋಗಗಳಲ್ಲಿ ಮತ್ತು ಕಾಚ ಬಿಂದು ಅರ್ಬುದಮಲಗಳಲ್ಲಿ ಪ್ರಶಸ್ತವಾಗಿದೆ. || ೨೬೦ || ನೆಲ್ಲೀಚಟ್ಟು, ರಸಾಂಜನಗಳ ಚೂರ್ಣ, ಜೇನು ಮತ್ತು ತುಪ್ಪ ಕೂಡಿಸಿ ಮಾಡಿದ ರಸಕ್ರಿಯೆಯು ಪಿತ್ತರಕ್ತದಿಂದುಂಟಾದ ಕಣ್ಣುರೋಗವನ್ನು, ತಿಮಿರಪಟಲಗಳನ್ನು ಕಳೆಯುವದು. || ೨೬೧ ||

ಖಾಲಿತ್ಯ ಮುಂತಾದ ರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ—

ಖಾಲಿತ್ಯೇ ಪಲಿತೇ ವಲ್ಯಾಂ ಹರಿಲ್ಲೋಮ್ನಿ ಚ ಸಾಧಿತುಮ್ ||
ತೈಲೈರ್ನಸ್ಯೈಃ ಶಿರೋವಕ್ತ್ರ ಪ್ರದೇಹೈಶ್ಚಾಪ್ಯುಪಾಚರೇತ್ || ೨೬೨ ||

**ಅರ್ಥ** — ಖಾಲಿತ್ಯ [ಕೂದಲು ಹಾರೋಣ] ಪಲಿತ [ಕೂದಲು ಬೆಳ್ಳಗಾಗೋಣ ವಲೀ [ತೊಗಲು ಮುದುಡೋಣ ] ಮತ್ತು ಕೂದಲು ಹಸರು ಆಗೋಣ ಈ ರೋಗಗಳನ್ನು ನೆಟ್ಟಗೆ ಮಾಡುವದಕ್ಕಾಗಿ ತೈಲ, ನಸ್ಯ, ತಲೆಗೆ ಮತ್ತು ಮೋರೆಗೆ ಲೇಪನಗಳನ್ನು ಮಾಡಬೇಕು. ||೨೬೨||

ಸಿದ್ಧಂ ವಿದಾರಿಗಂಧಾದ್ಯೈರ್ಜೀವನೀಯೈರಥಾಪಿ ವಾ ||
ನಸ್ಯಂ ಸ್ಯಾದಣುತೈಲಂ ವಾ ಖಾಲಿತ್ಯಪಲಿತಾಪಹಮ್ ||೨೬೩||

**ಅರ್ಥ—** ಲಘುಪಂಚಮೂಲಗಳಿಂದ, ಅಥವಾ ದಿಂದ ಸಿದ್ಧಮಾಡಿದ ತೈಲವು ಅಥವಾ ಅಣುತೈಲವು ಈ ಪಲಿತ್ಯಾದಿರೋಗಗಳನ್ನು ನಾಶಮಾಡುವ ನಸ್ಯವಾಗಿದೆ.

**ಲಾಕ್ಷಾಕಾಲಾರಸಾಲೋಹವರಾ ಭೃಂಗರಜೋರಸಾತ್ ||**
**ಪ್ರಸ್ಥೈಸ್ತು ಕುಡವಸ್ತೈಲಾತ್ ಯಷ್ಟ್ಯಾಹ್ವ ಪಲಕಲ್ಕಿತಃ ||೨೬೪||**
**ಸಿದ್ಧಂ ಶಿಲಾಸಮೇ ಪಾತ್ರೇ ಮೇಷಶೃಂಗಾದಿಷು ಸ್ಥಿತಃ ||**
**ನಸ್ಯಂ ಸ್ಯಾದ್ ಭಿಷಜಾ ಸಮ್ಯಕ್ ಯೋಜಿತಂ ಪಲಿತಾಪಹಮ್ ||೨೬೫||**

**ಅರ್ಥ—** ಅರಗು, ಕಾಲಾರಸ, ಲೋಹ, ತ್ರಿಫಳೆ, ಕಾಡಿಗ್ಗರಗರಸ, ಇವುಗಳ ರಸವನ್ನು ೧೨೮-೧೨೮ ತೊಲಿ ತಕ್ಕೊಂಡು ಜೇಷ್ಠಮಧುವಿನ ೪ ತೊಲಿ ಕಲ್ಕವನ್ನು ಹಾಕಿ ೩೨ ತೊಲಿ ತೈಲವನ್ನು ಸಿದ್ಧಮಾಡಬೇಕು ||೨೬೪|| ಅದನ್ನು ಕಲ್ಲಿನಂತೆ ಗಟ್ಟಿಯಾದ ಪಾತ್ರೆಯಲ್ಲಿ ಅಥವಾ ಆಡಿನ ಕೊಂಬಿನಲ್ಲಿ ಇಟ್ಟು ವೈದ್ಯನು ಅದನ್ನು ನಸ್ಯವಾಗಿ ಉಪಯೋಗಿಸಿದರೆ ಪಲಿತವನ್ನು ಕಳೆಯುವದು. ||೨೬೫||

**ಭಿಷಜಾ ಕ್ಷೀರಪಿಷ್ಟೌ ವಾ ದುಗ್ಧಿಕಾ ಕರವೀರಕೌ ||**
**ಉತ್ಪಾಟ್ಯ ಪಲಿತೇ ದೇಯೌ ತಾವುಭೌ ಪಲಿತಾಪಹೌ ||೨೬೬||**

**ಅರ್ಥ—** ವೈದ್ಯನು ಬಿಳೀ ಕೂದಲುಗಳನ್ನು ಕಿತ್ತಿ ತೆಗೆದು ಅದರಮೇಲೆ ದುಗ್ಧಿಕೆ (ಸಣ್ಣ ಕ್ಕಿಯ ಸೊಪ್ಪು) ಅಥವಾ ಕಣಗಿಲ ಬೇರು ಇವುಗಳನ್ನು ಇವೆರಡು ಪಲಿತನಾಶಕವಾಗಿವೆ. ೨೬೬

**ಕ್ಷೀರಾತ್ ಸಮಾರ್ಕವರಸಾತ್ ದ್ವಿಪ್ರಸ್ಥಂ ಮಧುಕೋತ್ಪಲೇ**
**ವಿಪಚೇತ್ ತೈಲಕುಡವಂ ತನ್ನಸ್ಯಂ ಪಲಿತಾಪಹಮ್ ||೨೬೭||**

**ಅರ್ಥ—** ಹಾಲು ೧೨೮ ತೊಲಿ, ಗರಗದ ರಸ ೧೨೮ ತೊಲಿ ತಕ್ಕೊಂಡು ಅದರಲ್ಲಿ ಜೇಷ್ಠ್ಯದ ಮ. ಚೂರ್ಣ ೨ ತೊಲಿ, ನೀಲಕಮಲ ಚೂರ್ಣ ೨ ತೊಲಿ ಹಾಕಿ, ೩೨ ತೊಲಿ ತೈಲವನ್ನು ಸಿದ್ಧಮಾಡಬೇಕು. ಇದರ ನಸ್ಯವು ಪಲಿತವನ್ನು ಕಳೆಯುವದು. ೨೬೭

ಮಹಾನೀಲ ತೈಲವನ್ನು ಹೇಳುತ್ತಾರೆ-

**ಆದಿತ್ಯವಂದ್ಯಮೂಲಾನಿ ಕೃಷ್ಣಸೈರೀಯಕಸ್ಯ ಚ ||**
**ಸುರಸಸ್ಯ ಚ ಪತ್ರಾಣಿ ಪತ್ರಂ ಕೃಷ್ಣಶಣಸ್ಯ ಚ ||೨೬೮||**

ಮಾರ್ಕವಃ ಕಾಕಮಾಚೀ ಚ ಮಧುಕಂ ದೇವದಾರು ಚ ॥
ಪೃಥಗ್ದಶಪಲಾಂಶಾನಿ ಪಿಪ್ಪಲೀ ತ್ರಿಫಲಾಂಜನಮ್ ॥೨೧೯॥
ಪ್ರಪೌಂಡರೀಕಂ ಮಂಜಿಷ್ಠಾ ಲೋಧ್ರಂ ಕೃಷ್ಣಾಗುರೂತ್ಪಲಮ್ ॥
ಆಮ್ರಾಸ್ಥಿ ಕರ್ದಮಃ ಕೃಷ್ಣೋ ಮೃಣಾಲಂ ರಕ್ತಚಂದನಮ್ ॥೨೨೦॥
ನೀಲೀ ಭಲ್ಲಾತಕಾಸ್ಥೀನಿ ಕಾಸೀಸಂ ಮದಯಂತಿಕಾ ॥
ಸೋಮರಾಜ್ಯಸನಃ ಶಸ್ತ್ರಂ ಕೃಷ್ಣಾ ಪಿಂಡೀತಚಿತ್ರಕಾ ॥೨೨೧॥
ಪುಷ್ಕರಾರ್ಜುನಕಾಶ್ಮರ್ಯಾಣ್ಯಾಮ್ರಜಂಬೂಫಲಾನಿ ಚ ॥
ಪೃಥಕ್ ಪಂಚಪಲೈರ್ಭಾಗೈಃ ಸುಪಿಷ್ಟೈರಾಢಕಂ ಪಚೇತ್ ॥೨೨೨॥
ವೈಭೀತಕಸ್ಯ ತೈಲಸ್ಯ ಧಾತ್ರೀರಸಚತುರ್ಗುಣಮ್ ॥
ಕುರ್ಯಾದಾದಿತ್ಯಪಾಕಂ ವಾ ಯಾವಚ್ಛುಷ್ಕೋ ಭವೇದ್ರಸಃ ॥೨೨೩॥
ಲೌಹಪಾತ್ರೇ ತತಃ ಪೂತಂ ಸಂಶುದ್ಧಮುಪಯೋಜಯೇತ್ ॥
ಪಾನೇ ನಸ್ತಃ ಕ್ರಿಯಾಯಾಂ ಚ ಶಿರೋಽಭ್ಯಂಗೇ ತಥೈವ ಚ ॥೨೨೪॥
ಏತಚ್ಚಕ್ಷುಷ್ಯಮಾಯುಷ್ಯಂ ಶಿರಸಃ ಸರ್ವರೋಗನುತ್ ॥
ಮಹಾನೀಲಮಿತಿ ಖ್ಯಾತಂ ಪಲಿತಘ್ನಮನುತ್ತಮಮ್ ॥೨೨೫॥

ಅರ್ಥ— ಸೂರ್ಯಭಕ್ತೆಯೆಂಬ ಬಳ್ಳಿಯ ಬೇರು ೪೦ ತೊಲೆ, ಕರೆ ಮುಳ್ಳುಜಾಜಿಯ ಬೇರು ೪೦ ತೊಲೆ, ಕರೆತುಳಸಿಯ ಎಲೆ ೪೦ ತೊಲೆ, ಕರೆ ಶಣದ (ಸಣಬು) ಎಲೆ ೪೦ ತೊಲೆ ॥ ೨೧೮ ॥ ಕಾಡಿಗ್ಗರಗ ೪೦ ತೊಲೆ, ಕಾಕೀ ಎಲೆ ಜೇಷ್ಠಮಧು ೪೦ ತೊಲೆ, ದೇವದಾರು ೪೦ ತೊಲೆ, ಹಿಪ್ಪಲಿ ೨೦ ತೊಲೆ, ತ್ರಿಫಳೆ ೨೦ ತೊಲೆ, ರಸಾಂಜನ ೨೦ ತೊಲೆ, ॥೨೧೯॥ ಪುಂಡರೀಕ ಕಾಷ್ಠ ೨೦ ತೊಲೆ, ಮಂಜಿಷ್ಠ ೨೦ ತೊಲೆ, ಲೋಧ್ರ ೨೦ ತೊಲೆ, ಕೃಷ್ಣಾಗುರು ೨೦ ತೊಲೆ, ನೀಲಕಮಲ ೨೦ ತೊಲೆ, ಮಾವಿನಮಜ್ಜೆ ೨೦ ತೊಲೆ ಕರೇಮಣ್ಣಿನ ಕೆಸರು ೨೦ ತೊಲೆ, ಕಮಲದ ದೇಟು ೨೦ ತೊಲೆ, ರಕ್ತಚಂದನ ೨೦ ತೊಲೆ, ॥೨೨೦॥ ನೀಲಿಯ ಎಲೆ ೨೦ ತೊಲೆ, ಕೇರು ೨೦ ತೊಲೆ, ಹಿರಾಕಸ ೨೦ ತೊಲೆ, ಮಲ್ಲಿಗೆ ೨೦ ತೊಲೆ, ಬಾವಂಚಿ ೨೦ ತೊಲೆ, ಆಸನ, (ಹೊನ್ನೆಮರ) ೨೦ ತೊಲೆ, ಉಕ್ಕಿನ ಚೂರ್ಣ ೨೦ ತೊಲೆ, ಕರೇಮದನ ಫಲ ೨೦ ತೊಲೆ, ಕರೇಚಿತ್ರಕ ೨೦ ತೊಲೆ, ॥೨೨೧॥ ಕಮಲದ ಹೂವು ೨೦ ತೊಲೆ, ಮತ್ತಿಯ ತೊಗಟೆ ೨೦ ತೊಲೆ, ಶಿವನ್ನಿಫಲ ೨೦ ತೊಲೆ, ಹಸರು ಮಾವಿನಕಾಯಿ ೨೦ ತೊಲೆ, ಹಸರು ನೇರಿಲಕಾಯಿ, ೨೦ ತೊಲೆ ತಕ್ಕೊಂಡು

ಇವುಗಳ ಕಲ್ಕವನ್ನು ಮಾಡಿ ||೨೭೨|| ಅವದಲ್ಲಿ ತಾರೀಕಾಯಿ ತೈಲವನ್ನು ೫೧೨ ತೊಲಿ, ನೆಲ್ಲೀರಸ ೨೦೪೮ ತೊಲಿ, ಹಾಕಿ ತೈಲವನ್ನು ಸಿದ್ಧಪಡಿಸ ಬೇಕು. ಅಥವಾ ರಸವು ಒಣಗುವವರೆಗೆ ಲೋಹಪಾತ್ರದಲ್ಲಿ ಹಾಕಿ ಬಿಸಿ ಲಲ್ಲಿ ಇಡಬೇಕು. ||೨೭೩|| ಆ ಮೇಲೆ ಸೋಸಿ ಸ್ವಚ್ಛವಾದ ಅದನ್ನು ಪಾನ, ನಸ್ಯ, ಶಿರೋಭ್ಯಂಗ ಕ್ರಿಯೆಗಳಲ್ಲಿ ಉಪಯೋಗಿಸಬೇಕು ||೨೭೪|| ಇದು ಕಣ್ಣಿಗೆ ಹಿತಕರ, ಆಯುಷ್ಯವರ್ಧಕ ಆಗಿದ್ದು, ತಲೆಯ ಎಲ್ಲ ರೋಗಗಳನ್ನು, ವಿಶೇಷವಾಗಿ, ಪಲಿತವನ್ನು, ನಾಶಮಾಡುವದು. ಇದು ಮಹಾನೀಲ ತೈಲ ವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ||೨೭೫||

**ಪ್ರಪೌಂಡರೀಕಮಧುಕಪಿಪ್ಪಲೀಚಂದನೋತ್ಪಲೈಃ ||**
**ಕಾರ್ಷಿಕೈಸ್ತೈಲಕುಡವೋ ದ್ವಿಗುಣಾಮಲಕೀರಸಃ || ೨೭೬ ||**

**ಸಿದ್ಧಃ ಪ್ರತಿಮರ್ಷಃ ಸ್ಯಾತ್ ಸರ್ವಶೀರ್ಷಗದಾಪಹಃ ||**
**ಪಲಿತಘ್ನೋ ವಿಶೇಷೇಣ ಕೃಷ್ಣಾತ್ರೇಯೇಣಭಾಷಿತಃ || ೨೭೭ ||**

**ಅರ್ಥ—** ಪುಂಡರೀಕ ಕಾಷ್ಟ, ಜೇಷ್ಟಮಧು, ಹಿಪ್ಪಲಿ ಚಂದನ, ನೀಲಕಮಲ ಇವುಗಳ ಕಲ್ಕ ೧—೧ ತೊಲಿ, ಎಳ್ಳೆಣ್ಣೆ ೩೨ ತೊಲಿ, ನೆಲ್ಲೀರಸ ೬೪ ತೊಲಿ, || ೨೭೬ || ತಕ್ಕೊಂಡು ತೈಲವನ್ನು ಸಿದ್ಧಮಾಡಬೇಕು. ಈ ಪ್ರತಿಮರ್ಶ ನಸ್ಯವು ಎಲ್ಲ ತಲೆಯ ರೋಗಗಳನ್ನು ವಿಶೇಷವಾಗಿ, ಪಲಿತವನ್ನು ಕಳೆಯುವದೆಂದು ಕೃಷ್ಣಾತ್ರೇಯರು ಹೇಳಿದ್ದಾರೆ. || ೨೭೭ ||

**ಕ್ಷೀರಂ ಪಿಯಾಲಂ ಯಷ್ಟ್ಯಾಹ್ವಂ ಜೀವಕಾದ್ಯೋಗಣಸ್ತಿಲಾಃ |**
**ಕೃಷ್ಣಾವಕ್ತ್ರಪ್ರಲೇಪಃ ಸ್ಯಾದ್ಧರಿಲೋಮನಿವಾರಣಃ || ೨೭೮ ||**

**ಅರ್ಥ—** ಹಾಲು, ಪಿಯಾಲ, ಜೇಷ್ಠಮಧು, ಜೀವನೀಯಗಣ, ಎಳ್ಳು, ಹಿಪ್ಪಲಿ ಇವುಗಳ ಕಲ್ಕವನ್ನು ಮೋರೆಗೆ ಲೇಪಮಾಡಬೇಕು. ಅದು ಹಸುರು ಕೂದಲುಗಳನ್ನು ಕಳೆಯುವದು.

**ತಿಲಾಃ ಸಾಮಲಕಾಶ್ಚೈವ ಕಿಂಜಲ್ಕೋ ಮಧುಕಂ ಮಧು ||**
**ರಂಜಯೇದ್ ಬೃಂಹಯೇಚ್ಚೈತತ್ ಕೇಶಾನ್ ಮೂರ್ಧಪ್ರಲೇಪ ನಾತ್ || ೨೭೯ ||**

**ಅರ್ಥ—** ಕರೇ ಎಳ್ಳು, ನೆಲ್ಲೀ ಚಿಟ್ಟು, ಕಮಲದ ಕೇಸರ, ಜೇಷ್ಠಮಧು ಇವುಗಳ ಚೂರ್ಣವನ್ನು ಜೇನಿನೊಡನೆ ತಲೆಗೆ ತೊಡೆದರೆ ಕೂದಲುಗಳು ಕಪ್ಪಾಗುವವು. ಮತ್ತು ಬೆಳೆಯುವವು. || ೨೭೯ ||

**ಪಚೇತ್ ಸೈಂಧವಯುಕ್ತಾನ್ಲ್ಯೈರಯಶ್ಚೂರ್ಣಂ ಸತಂಡುಲಮ್ ||**
**ತೇನಾಲಿಪ್ತಂ ಶಿರಃ ಶುದ್ಧಮಸ್ನಿಗ್ಧಮುಷಿತಂ ನಿಶಿ || ೨೮೦ ||**

**ತತ್ರಾತಸ್ತ್ರಿಫಲಾಧೌತಂ ಸ್ಯಾತ್ ಕೃಷ್ಣಸ್ನಿಗ್ಧಮೂರ್ಧಜಮ್ ||**
**ಅಯಶ್ಚೂರ್ಣೋಽಮ್ಲಪಿಷ್ಟಶ್ಚ ರಾಗಃ ಸತ್ರಿಫಲೋ ವರಃ ||೨೮೧||**

**ಅರ್ಥ—** ಸೈಂಧವ, ಹುಳಿ (ಗಂಜಿ ಮುಂತಾದ) ಪದಾರ್ಥ, ಲೋಹ ಚೂರ್ಣ, ಅಕ್ಕಿಯ ಹಿಟ್ಟು ಇವುಗಳನ್ನು ಕುದಿಸಿ, ಅದರಿಂದ ಚನ್ನಾಗಿತೊಳೆದು ರುಕ್ಷವಾಡಿದ ತಲೆಗೆ ರಾತ್ರಿಯಲ್ಲಿ ಲೇಪಮಾಡಬೇಕು. ||೨೮೦|| ಬೆಳತನಕ ಹಾಗೇ ಇಟ್ಟು, ಮುಂಜಾನೆ ತ್ರಿಫಲಾ ಕಷಾಯದಿಂದ ತೊಳೆದರೆ ಕೂದಲು ಗಳು ಕಪ್ಪಾಗಿ ಹೊಳೆಯುವವು. ಲೋಹಚೂರ್ಣವನ್ನು ಹುಳಿ ದ್ರವ್ಯಗಳಲ್ಲಿ ಅರೆದು ತ್ರಿಫಲಾ ಚೂರ್ಣವನ್ನು ಕೂಡಿಸಿದರೆ ಉತ್ತಮವಾದ ಕೇಶರಂಜನ ಕಲ್ಪವಾಗುವದು. ||೨೮೧||

**ಕುರ್ಯಾಚ್ಛೇಷೇಷು ರೋಗೇಷು ಕ್ರಿಯಾಂ ಸ್ವಾಂಸ್ವಾಚ್ಚಿಕಿತ್ಸಿತಾತ್ |**
**ಶೇಷೇಷ್ವಾದೌ ಚ ನಿರ್ದಿಷ್ಟಾ ಸಿದ್ಧೌ ಚಾನ್ಯಾ ಪ್ರವಕ್ಷ್ಯತೆ ||೨೮೨||**

**ಅರ್ಥ—** ಉಳಿದ ರೋಗಗಳಲ್ಲಿ ಆಯಾ ಸ್ಥಾನದಲ್ಲಿ ಹೇಳಿದ ಚಿಕಿತ್ಸೆಯನ್ನು ಮಾಡಬೇಕು. ಹಿಂದೆ ಅವುಗಳ ಚಿಕಿತ್ಸೆಯನ್ನು ಹೇಳಲಾಗಿದೆ. ಮುಂದೆ ಸಿದ್ಧಿ ಸ್ಥಾನದಲ್ಲಿಯೂ ಕೆಲವುಗಳ ಚಿಕಿತ್ಸೆಯು ಹೇಳಲ್ಪಡುತ್ತದೆ ||೨೮೨||

### ತತ್ರ ಶ್ಲೋಕಾಃ

**ವಾತಪಿತ್ತಕಫಾ ನೃಣಾಂ ಬಸ್ತಿಹೃನ್ಮೂರ್ಧಸಂಶ್ರಯಾಃ ||**
**ತಸ್ಮಾತ್ ತತ್‌ಸ್ಥಾನಸಾಮೀಪ್ಯಾತ್ ಹರ್ತವ್ಯಾ ವಮನಾದಿಭಿಃ ||೨೮೩||**

**ಅರ್ಥ—** ವಾತ-ಪಿತ್ತ-ಕಫಗಳು ಕ್ರಮವಾಗಿ ಮನುಷ್ಯರ ಬಸ್ತಿ, ಹೃದಯ, ತಲೆಗಳಲ್ಲಿರುತ್ತವೆ. ಆದ್ದರಿಂದ ಅವುಗಳ ಸ್ಥಾನದ ಸಮೀಪವಾದ ಮಾರ್ಗದಿಂದ ಬಸ್ತಿ, ವಿರೇಚನ, ವಮನಗಳನ್ನೇ ಕೊಟ್ಟು ಅವನ್ನು ಹೊರಗೆ ತೆಗೆಯಬೇಕು. ||೨೮೩||

**ಅಧ್ಯಾತ್ಮಲೋಕೋ ವಾತಾದ್ಯೈರ್ಲೋಕೋ ವಾತರವೀಂದುಭಿಃ ||**
**ಪೀಡ್ಯತೇ ಧಾರ್ಯತೇ ಚಾಪಿ ವಿಕೃತಾವಿಕೃತೈಸ್ತಥಾ ||೨೮೪||**

**ಅರ್ಥ—** ಗಾಳಿ, ಸೂರ್ಯ ಚಂದ್ರ ಇವು ವಿಕೃತವಾಗಲು ಜಗತ್ತಿಗೆ ಪೀಡೆಯಾಗುವದು. ಅವಿಕೃತವಿದ್ದರೆ ಹಿತವಾಗುವದು. ಅದರಂತೆ ವಾತ ಪಿತ್ತ, ಕಫಗಳು ವಿಕೃತವಾಗಲು ದೇಹಕ್ಕೆ ಪೀಡೆಯಾಗುವದು. ಅವಿಕೃತವಿರಲು ಹಿತವಾಗುವದು. ||೨೮೪||

**ವಿರುದ್ಧೈರಪಿ ನ ತ್ವೇತೇ ಗುಣೈರ್ಘ್ನಂತಿ ಪರಸ್ಪರಂ ||**
**ದೋಷಾಃ ಸಹಜಸಾತ್ಮ್ಯತ್ವಾದ್ ಘೋರಂ ವಿಷಮಹೀನಿವ ||೨೮೫||**

**ರ್ಥ—** ಭಯಂಕರ ಸರ್ಪವಿಷವು (ಎರಡನೇ ಪ್ರಾಣಿಗಳನ್ನು ಕೊಲ್ಲುತ್ತಿದ್ದರೂ) ಕೂಡಿಯೇ ಹುಟ್ಟಿ ಸಾತ್ಮ್ಯವಾದುದರಿಂದ ಆ ಹಾವನ್ನು ಹೇಗೆ ಕೊಲ್ಲುವದಿಲ್ಲವೋ, ಅದರಂತೆ ವಾತ, ಪಿತ್ತ, ಕಫಗಳು ಕೂಡಿಯೇ ಹುಟ್ಟಿ ಸಾತ್ಮ್ಯವಿರುವದರಿಂದ ಪರಸ್ಪರ ವಿರುದ್ಧ ಗುಣಗಳಿದ್ದರೂ ಒಂದ ಂದು ಕೊಲ್ಲುವದಿಲ್ಲ. ||೨೮೫||

### ಭವತಿ ಚಾತ್ರ

**ತ್ರಿಮರ್ಮಜಾನಾಂ ರೋಗಾಣಾಂ ನಿದಾನಾಕೃತಿಭೇಷಜಮ್ ||**
**ವಿಸ್ತರೇಣ ಪೃಥಗ್ ದಿಷ್ಟಂ ತ್ರಿಮರ್ಮೀಯೇ ಚಿಕಿತ್ಸಿತೇ ||೨೮೬||**

**ಅರ್ಥ—** ಬಸ್ತಿ, ಹೃದಯ, ತಲೆ ಎಂಬ ಮೂರು ಮರ್ಮಗಳಲ್ಲಿ ಉಂಟಾಗುವ ರೋಗಗಳ ನಿದಾನ, ಲಕ್ಷಣ, ಚಿಕಿತ್ಸೆಗಳು ಈ 'ತ್ರಿಮರ್ಮೀಯ ಚಿಕಿತ್ಸಿತ' ಅಧ್ಯಾಯದಲ್ಲಿ ಬೇರೆಬೇರೆಯಾಗಿ ವಿಸ್ತಾರದಿಂದ ಹೇಳಲ್ಪಟ್ಟಿವೆ || ೨೮೬ ||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ**
**ತ್ರಿಮರ್ಮೀಯ ಚಿಕಿತ್ಸಿತಂ ನಾಮ ಷಡ್ವಿಂಶೋಽಧ್ಯಾಯಃ ||**

ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕಸಂಹಿತೆಯ ಚಿಕಿತ್ಸಾ ಸ್ಥಾನದಲ್ಲಿ **'ತ್ರಿಮರ್ಮೀಯ ಚಿಕಿತ್ಸೆ'** ಎಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ ಚರಕ 'ಚಿಕಿತ್ಸಾ-ಬೋಧಿನಿ' ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ ತ್ರಿಮರ್ಮೀಯ ಚಿಕಿತ್ಸೆ ಎಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

# ಇಪ್ಪತ್ತೇಳನೆಯ ಅಧ್ಯಾಯ

## ಊರುಸ್ತಂಭ ಚಿಕಿತ್ಸೆ

ತ್ರಿಮರ್ಮೀಯ ಚಿಕಿತ್ಸೆಯಲ್ಲಿ ಪಂಚಕರ್ಮ ಮಾಡಬೇಕಾಗುವದರಿಂದ ಅಸಾಧ್ಯವಾದ ಊರುಸ್ತಂಭ ಚಿಕಿತ್ಸೆಯನ್ನು ಹೇಳುತ್ತಾರೆ.

**ಅಥಾತ ಊರುಸ್ತಂಭಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ**

ಅರ್ಥ— ಇನ್ನುಮೇಲೆ ಊರುಸ್ತಂಭ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ ||೧||**

ಪೂಜ್ಯರಾದ ಆತ್ರೇಯರು ಹೀಗೆ ಹೇಳಿದರು.

**ಶ್ರಿಯಾ ಪರಮಯಾ ಬ್ರಾಹ್ಮ್ಯಾ ಪರಯಾ ಚ ತಪಃಶ್ರಿಯಾ ||**
**ಅಹೀನವರ್ಣಂ ಚಂದ್ರಾರ್ಕಾದಿಭ್ಯೋ ಮೇರುಮಿವಾಚಲಮ್ ||೨||**

**ಧೀಧೃತಿಸ್ಮೃತಿವಿಜ್ಞಾನ-ಜ್ಞಾನಕೀರ್ತಿಕ್ಷಮಾಲಯಮ್ ||**
**ಅಗ್ನಿವೇಶೋ ಗುರುಂ ಕಾಲೇ ಸಂಶಯಂ ಪರಿಪೃಷ್ಟವಾನ್ ||೩||**

**ಭಗವಾನ್ ಪಂಚಕರ್ಮಾಣಿ ನಿರ್ದಿಷ್ಟಾನಿ ಪೃಥಕ್ ತ್ವಯಾ ||**
**ನಿರ್ದಿಷ್ಟಾನ್ಯಾಮಯಾನಾಂ ಹಿ ಸರ್ವೇಷಾಮೇವ ಭೇಷಜಮ್ ||೪||**

**ದೋಷಜೋಽಸ್ತ್ಯಾಮಯಃ ಕಶ್ಚಿದ್ ಯಸ್ಯೈತಾನಿ ಭಿಷಗ್ವರ ||**
**ನ ಸ್ಯುಃ ಶಕ್ತಾನಿ ಶಮನೇ ಸಾಧ್ಯಸ್ಯ ಕ್ರಿಯಯಾಸತಃ ||೫||**

**ಅಸ್ತ್ಯೂರುಸ್ತಂಭ ಇತ್ಯುಕ್ತೋ ಗುರುಣಾ ತಸ್ಯ ಕಾರಣಮ್ ||**
**ಸಲಿಂಗಭೇಷಜಂ ಭೂಯಃ ಪೃಷ್ಟಸ್ತೇನಾಬ್ರವೀದ್ಗುರುಃ ||೬||**

ಅರ್ಥ— ಶ್ರೇಷ್ಠವಾದ ಬ್ರಹ್ಮತೇಜದಿಂದಲೂ ಉತ್ತಮವಾದ ತಪಸ್ಸಿನ ಕಾಂತಿಯಿಂದಲೂ ಕೂಡಿದ, ಚಂದ್ರಸೂರ್ಯರಂತಿರುವ, ಮೇರುವಿನಂತೆ ಸ್ಥಿರರಾದ || ೨ || ಬುದ್ಧಿನಿಗ್ರಹ, ಸ್ಮೃತಿ, ಜ್ಞಾನ, ವಿಜ್ಞಾನ, ಕೀರ್ತಿ, ಕ್ಷಮಾ ಗುಣಗಳಿಗೆ ಮನೆಯಂತಿರುವ ಆತ್ರೇಯ ಋಷಿಗಳಿಗೆ ಅಗ್ನಿವೇಶರು ಯೋಗ್ಯ ಕಾಲದಲ್ಲಿ ತಮ್ಮ ಸಂಶಯವನ್ನು ಕೇಳಿದರು. || ೩ || "ಪೂಜ್ಯರೇ, ನೀವು ಪಂಚಕರ್ಮಗಳನ್ನೆಲ್ಲ ಬೇರೆಬೇರೆಯಾಗಿ ಹೇಳಿದಿರಿ. ಎಲ್ಲ ರೋಗಗಳಿಗೆ ಔಷಧಗಳನ್ನೂ ಹೇಳಿದಿರಿ. || ೪ || ವೈದ್ಯಶ್ರೇಷ್ಠರೇ, ಸಾಧ್ಯವಾಗಿದ್ದರೂ

ಕೂಡ, ಇವುಗಳಿಂದ ಚಿಕಿತ್ಸಿಸಲ್ಪಟ್ಟರೂ ಕೂಡ ಶಮನವಾಗದ ಯಾವವಾದರೂ ರೋಗಗಳುಂಟೇ ? " || ೫ || ಎಂದು ಕೇಳಲು ' ಊರುಸ್ತಂಭ ' ಎಂಬ ರೋಗವುಂಟು; ಎಂದು ಗುರುಗಳು ಹೇಳಲು, ಪುನಃ ಅದರ ಕಾರಣ, ಲಕ್ಷಣ, ಔಷಧಗಳನ್ನು ಅವನು ಕೇಳಿದನು. ಆಗ್ಗೆ ಗುರುಗಳು ಹೀಗೆ ಹೇಳಿದರು. || ೬ ||

ಕಾರಣವನ್ನು ಹೇಳುತ್ತಾರೆ—

**ಸ್ನಿಗ್ಧೋಷ್ಣಗುರುಶೀತಾನಿ ಜೀರ್ಣಾಜೀರ್ಣೇ ಸಮಶ್ನತಃ ||**
**ದ್ರವಶುಷ್ಕದಧಿಕ್ಷೀರ ಗ್ರಾಮ್ಯಾನೂಪೌದಕಾಮಿಷೈಃ ||೭||**

**ಪಿಷ್ಟಾನ್ನಪಕ್ವಮದ್ಯಾತಿ ದಿವಾಸ್ವಪ್ನಪ್ರಜಾಗರೈಃ ||**
**ಲಂಘನಾಧ್ಯಶನಾಯಾಸ ಭಯವೇಗವಿಧಾರಣೈಃ ||೮||**

**ಸ್ನೇಹಾಚ್ಚಾಮಂ ಚಿತಂ ಕೋಷ್ಠೇ ವಾತಾದೀನ್ ಮೇದಸಾ ಸಹ ||**
**ರುದ್ಧ್ವಾ ಸುಗೌರವಾದೂರೂ ಯಾತ್ಯಧೋಗೈಃ ಸಿರಾದಿಭಿಃ ||೯||**

**ಪೂರಯೇತ್ ಸಕ್ಥಿಜಂಘೋರು ದೋಷೋ ಮೇದೋಬಲೋತ್ಕಟಃ ||**
**ಅವಿಧೇಯಪರಿಸ್ಪಂದಂ ಜನಯತ್ಯಲ್ಪವಿಕ್ರಮಮ್ ||೧೦||**

**ಅರ್ಥ—** ಅನ್ನದ ಕೆಲವು ಭಾಗ ಪಚನವಾಗಿ, ಕೆಲವು ಭಾಗ ಪಚನವಾಗದಿರಲು, ಸ್ನಿಗ್ಧ, ಉಷ್ಣ, ಜಡ, ಶೀತ, ಪದಾರ್ಥ ತಿನ್ನುವದರಿಂದಲೂ, ದ್ರವ, ಶುಷ್ಕ, ಮೊಸರು, ಹಾಲು, ಗ್ರಾಮ್ಯ, ಮಲೆನಾಡು ಮತ್ತು ನೀರಲ್ಲಿರುವ ಪ್ರಾಣಿಗಳ ಮಾಂಸ, ||೭|| ಹಿಟ್ಟಿನ ಪದಾರ್ಥ, ಅಪಕ್ವ ಮದ್ಯಸೇವನೆಯಿಂದ ಹಗಲು ಬಹಳ ಮಲಗೋಣ, ಜಾಗರಣೆ, ಲಂಘನ, ಅಧ್ಯಶನ, ಆಯಾಸ, ಭಯ, ವೇಗಧಾರಣಗಳಿಂದಲೂ ||೮|| ಸ್ನೇಹಪಾನದಿಂದಲೂ ಕೋಷ್ಠದಲ್ಲಿ ಸಂಚಿತವಾದ ಆಮವು ಮೇದಮೊಡನೆ ಕೂಡಿ ವಾತಾದಿಗಳನ್ನು ಪ್ರತಿಬಂಧಿಸಿ ಜಡವಾಗುವದರಿಂದ ಕೆಳಗೆ ಹೋಗುವ ಶಿರಾದಿಗಳಿಂದ ತೊಡೆಯನ್ನು ಸೇರುತ್ತದೆ. ||೯|| ಮೇದೋ ಬಲಾಧಿಕವಾದ ದೋಷವು ತೊಡೆಯ ಮೇಲ್ಭಾಗ ಕಾಲು ಪಿಂಡರಿಗಳನ್ನು ಸೇರಿ, ಅದರ ಚಲನವಲನವಾಗವಂತೆ ಮಾಡುತ್ತದೆ. ಅವುಗಳ ಶಕ್ತಿಯನ್ನು ಕಡಿಮೆ ಮಾಡುವದು. ||೧೦||

**ಮಹಾಸರಸಿ ಗಂಭೀರೇ ಪೂರ್ಣೇಂಬು ಸ್ತಿಮಿತಂ ಯಥಾ ||**
**ತಿಷ್ಠತಿ ಸ್ಥಿರಮಕ್ಷೋಭ್ಯಂ ತದ್ವದೂರುಗತಃ ಕಫಃ ||೧೧||**

**ಅರ್ಥ—** ತುಂಬಿದ ಗುಂಬಾದ ಮಹಾ ಸರೋವರದಲ್ಲಿಯ ನೀರು ಹೇಗೆ ಸ್ಥಿರವಾಗಿ ಅಗಳಾಡದೆ ನಿಂತಿರುತ್ತದೋ, ಅದರಂತೆ ತೊಡೆಯಲ್ಲಿದ್ದ ಕಫವು ಅಚಲವಾಗಿರುವದು. ||೧೧||

**ಗೌರವಾಯಾಸಸಂಕೋಚ ದಾಹರುಕ್ಸುಪ್ತಿಕಂಪನೈಃ ||**
**ಸತೋದಭೇದಸ್ಫುರಣೈರ್ಯುಕ್ತ್ವಾ ದೇಹಂ ನಿಹಂತ್ಯಸೂನ್ ||೧೨||**

**ಅರ್ಥ—** ಜಡತ್ವ, ಆಯಾಸ, ಜಗ್ಗೋಣ, ದಾಹ, ನೋವು, ಸ್ಪರ್ಶಜ್ಞಾನಶೂನ್ಯತೆ, ನಡುಗೋಣ, ಚುಚ್ಚಿದಂತೆ, ಒಡೆದಂತೆ ಆಗೋಣ, ಸ್ಫುರಣ ಇವುಗಳಿಂದ ಕೂಡಿಕೊಂಡು ಅದು ದೇಹವನ್ನು ಪ್ರಾಣಗಳನ್ನೂ ನಾಶಮಾಡುವದು. ||೧೨||

ಊರುಸ್ತಂಭದ ನಿರುಕ್ತಿಯನ್ನು ಹೇಳುತ್ತಾರೆ—

**ಗುರುಃ ಶ್ಲೇಷ್ಮಾ ಸಮೇದಸ್ಕೋ ವಾತಪಿತ್ತೇಽಭಿಭೂಯ ತು ||**
**ಸ್ತಂಭಯೇತ್ ಸ್ಥೈರ್ಯಶೈತ್ಯಾಭ್ಯಾಮೂರುಸ್ತಂಭಸ್ತತೋ ಮತಃ || ೧೩ ||**

**ಅರ್ಥ—** ಜಡವಾದ ಕಫವು ಮೇದದೊಡನೆ ಕೂಡಿಕೊಂಡು ವಾತ ಪಿತ್ತಗಳನ್ನು ಗೆದ್ದು ತನ್ನ ಸ್ಥಿರತ್ವ-ಶೈತ್ಯ ಗುಣಗಳಿಂದ ತೊಡೆಯ ಸ್ತಂಭನವನ್ನು ಮಾಡುವದು. ಆದಕಾರಣ ಇದಕ್ಕೆ ಊರುಸ್ತಂಭವೆಂಬ ಹೆಸರು. || ೧೩ ||

ಪೂರ್ವರೂಪವನ್ನು ಹೇಳುತ್ತಾರೆ—

**ಪ್ರಾಗ್ರೂಪಂ ತಸ್ಯ ನಿದ್ರಾತಿ ಧ್ಯಾನಂ ಸ್ತಿಮಿತತಾ ಜ್ವರಃ ||**
**ಲೋಮಹರ್ಷೋಽರುಚಿಶ್ಛರ್ದಿರ್ಜಂಘೋರ್ವೋಃ ಸದನಂ ತಥಾ || ೧೪ ||**

**ಅರ್ಥ—** ನಿದ್ರೆ, ಬಹಳ ಆಲೋಚನೆ, ಜಡತ್ವ, ಜ್ವರ, ರೋಮಾಂಚ ಅರುಚಿ, ವಾಂತಿ, ಮೊಳಕಾಲು ತೊಡೆಗಳು ದಣಿಯೋಣ ಇವು ಇದರ ಪೂರ್ವ ರೂಪವಾಗಿವೆ. || ೧೪ ||

**ವಾತಶಂಕಿಭಿರಜ್ಞಾನಾತ್ ತಸ್ಯ ಸ್ಯಾತ್ ಸ್ನೇಹನಾತ್ ಪುನಃ ||**
**ಪಾದಯೋಃ ಸದನಂ ಸುಪ್ತಿಃ ಕೃಚ್ಛ್ರಾದುದ್ಧರಣಂ ತಥಾ || ೧೫ ||**

**ಅರ್ಥ—** ವಾತದಿಂದುಂಟಾಗಿದೆಯೆಂಬ ಶಂಕೆಯಿಂದ ಅಜ್ಞಾನದಿಂದ ಅದಕ್ಕೆ ಸ್ನೇಹ ಚಿಕಿತ್ಸೆ ಮಾಡಿದರೆ ಕಾಲುಗಳು ನಿಷ್ಪ್ರಾಣವಾಗುವವು. ಅವುಗಳ ಸ್ಪರ್ಶಜ್ಞಾನವು ಅಳಿಯುವದು. ಎತ್ತಲು ತ್ರಾಸವಾಗುವದು. || ೧೫ ||

**ಜಂಘೋರುಗ್ಲಾನಿರತ್ಯರ್ಥಂ ಶಶ್ವಚ್ಚಾನಾಹವೇದನಾ ||**
**ಪದಂ ಚ ವ್ಯಥತೇ ನ್ಯಸ್ತಂ ಶೀತಸ್ಪರ್ಶಂ ನ ವೇತ್ತಿ ಚ || ೧೬ ||**

**ಅರ್ಥ—** ತೊಡೆ ಮೊಣಕಾಲುಗಳು ಬಹಳ ಅಶಕ್ತವಾಗುವವು. ಯಾವಾಗಲೂ ಬಾವು ವೇದನೆಗಳಿರುವವು. ಕಾಲು ಇಟ್ಟಕೂಡಲೆ ನೋಯುವದು. ತಣ್ಣನ್ನ ಪದಾರ್ಥಗಳ ಸ್ಪರ್ಶಜ್ಞಾನವಾಗುವದಿಲ್ಲ. || ೧೬ ||

**ಸಂಸ್ಥಾನೇ ಪೀಡನೇ ಗತ್ಯಾಂ ಚಾಲನೇ ಚಾಪ್ಯನೀಶ್ವರಃ ||**
**ಅನ್ಯನೇಯೌ ಹಿ ಸಂಭಗ್ನಾವೂರು ಪಾದೌ ಚ ಮನ್ಯತೇ || ೧೭ ||**

**ಅರ್ಥ—** ಕಾಲನ್ನು ಊರಲು, ಹಿಡಿಯಲು, ನಡೆಯಲು, ಅಗಳಾಡಿಸಲು ಕೂಡ ಅವನಿಗೆ ಆಗದು. ತೊಡೆ ಪಾದಗಳು ಬೇರೆಯವರವಂತೆ ಅನಿಸುತ್ತವೆ. ||೧೭||

ಅಸಾಧ್ಯಲಕ್ಷಣವನ್ನು ಹೇಳುತ್ತಾರೆ.

**ಯದಾ ದಾಹಾರ್ತಿತೋದಾರ್ತೋ ವೇಪನಃ ಪುರುಷೋ ಭವೇತ್ ||**
**ಊರುಸ್ತಂಭಸ್ತದಾ ಹನ್ಯಾತ್ ಸಾಧಯೇದನ್ಯಥಾ ನವಮ್ ||೧೮||**

**ಅರ್ಥ—** ದಾಹ, ನೋವು, ಚುಚ್ಚುವಿಕೆ, ನಡುಗು ಈ ಲಕ್ಷಣಗಳಿದ್ದರೆ ಊರುಸ್ತಂಭವು ಅಸಾಧ್ಯವೆಂದು ತಿಳಿಯಬೇಕು. ಈ ಲಕ್ಷಣಗಳಿಲ್ಲದಿದ್ದರೆ, ಅಥವಾ ಹೊಸದು ಇದ್ದರೆ ಅದು ಸಾಧ್ಯವು. ಅದನ್ನು ಚಿಕಿತ್ಸಿಸಬೇಕು. ||೧೮||

ಚಿಕಿತ್ಸೆಯನ್ನು ಹೇಳಹೊರಟು ಸ್ನೇಹ ಮುಂತಾದವುಗಳನ್ನು ಮಾದನ್ನಿಕರು ಹೇಳುತ್ತಾರೆ.

**ತಸ್ಯ ನ ಸ್ನೇಹನಂ ಕಾರ್ಯಂ ನ ಬಸ್ತಿರ್ನ ವಿರೇಚನಮ್ ||**
**ನ ಚೈವ ವಮನಂ ಯಸ್ಮಾತ್ ತನ್ನಿಬೋಧತ ಕಾರಣಮ್ ||೧೯||**

**ಅರ್ಥ—** ಅದಕ್ಕೆ ಸ್ನೇಹೋಪಚಾರ, ಬಸ್ತಿ, ವಿರೇಚನ, ವಮನಗಳನ್ನು ಕೊಡಬಾರದು ಅದರ ಕಾರಣ ಹೇಳುತ್ತೇನೆ ಕೇಳಿರಿ ||೧೯||

**ವೃದ್ಧಯೇ ಶ್ಲೇಷ್ಮಣೋ ನಿತ್ಯಂ ಸ್ನೇಹನಂ ಬಸ್ತಿಕರ್ಮ ಚ ||**
**ತತ್‌ಸ್ಥಸ್ಯೋದ್ಧರಣೇ ಚೈವ ನ ಸಮರ್ಥಂ ವಿರೇಚನಮ್ ||೨೦||**

**ಅರ್ಥ—** ಸ್ನೇಹಬಸ್ತಿಗಳೆರಡೂ ಯಾವಾಗಲೂ ಕಫವನ್ನು ಹೆಚ್ಚಿಸು ವವು. ವಿರೇಚನವು ಕೂಡ ತೊಡೆಯಲ್ಲಿದ್ದ ಕಫವನ್ನು ಕಳೆಯ.ಲು ಸಮರ್ಥ ವಾಗದು ||೨೦||

**ಶ್ಲೇಷ್ಮಸ್ಥಾನಗತಃ ಶ್ಲೇಷ್ಮಾ ಪಿತ್ತಂ ಚ ವಮನಾತ್ ಸುಖಮ್ ||**
**ಹರ್ತುಮಾಮಾಶಯಸ್ಥೌ ಚ ಸ್ರಂಸಯೇತ್. ತಾವುಭಾವಪಿ ||೨೧||**

**ಅರ್ಥ—** ಕಫಸ್ಥಾನದಲ್ಲಿದ್ದ ಕಫವು, ಮತ್ತು ಪಿತ್ತವು, ಅಥವಾ ಆಮಾ ಶಯದಲ್ಲಿದ್ದ ಇವೆರಡೂ ವಮನದಿಂದ ಸುಲಭವಾಗಿ ಹೊರಬೀಳುವವು ||೨೧||

**ಪಕ್ವಾಶಯಸ್ಥಾಃ ಸರ್ವೇಽಪಿ ಬಸ್ತಿಭಿರ್ಮೂಲನಿರ್ಜಯಾತ್ ||**
**ಶಕ್ಯಾ ನ ತ್ವಾಮಮೇದೋಭ್ಯಾಂ ಸ್ತಬ್ಧಾ ಜಂಘೋರುಸಂಸ್ಥಿತಾಃ||೨೨||**

**ಅರ್ಥ—** ಪಕ್ವಾಶಯದಲ್ಲಿದ್ದ ಎಲ್ಲ ದೋಷಗಳು ಬಸ್ತಿಕೊಡುವದರಿಂದ ಅವುಗಳ ಮೂಲವನ್ನೇ ಕಿತ್ತಿದಂತಾಗುವದರಿಂದ—ಹೊರಗೆ ತೆಗೆಯಲು ಶಕ್ಯ ವಿದೆ. ಆದರೆ ಆಮಮೇದಗಳಿಂದ ಕೂಡಿದ್ದುದರಿಂದ ಸ್ತಬ್ಧವಾದ ತೊಡೆ ಮೊಳಕಾಲುಗಳಲ್ಲಿದ್ದ ದೋಷವನ್ನು ಕಳೆಯಲು ಶಕ್ಯವಿಲ್ಲ. ||೨೨||

**ವಾತಸ್ಥಾನೇ ಹಿ ತಚ್ಛೈತ್ಯಾತ್ ತಯೋಃಸ್ತಂಭಾಚ್ಚ ತದ್ಗತಾಃ ||**
**ನ ಶಕ್ಯಾ ಸುಖಮುದ್ಧರ್ತುಂ ಜಲಂ ನಿಮ್ನಾದಿವ ಸ್ಥಲಾತ್ ||೨೩||**

**ಅರ್ಥ—** ಏಕಂದರೆ, ವಾತಸ್ಥಾನವಾದ ಅವುಗಳಲ್ಲಿ ಇರುವ, ವಾತದ ಶೈತ್ಯಗುಣದಿಂದಲೂ ಅವೆರಡರ (ಆಮಮೇದಗಳ) ಸ್ತಬ್ಧತೆಯಿಂದಲೂ ಅವು ಗಳಲ್ಲಿರುವ ದೋಷಗಳನ್ನು—ತಗ್ಗಿನಲ್ಲಿಯ ನೀರನ್ನು ಮೇಲಕ್ಕೆ ತರಲಾಗದಂತೆ ಹೊರಗೆ ತೆಗೆಯಲು ಸುಲಭವಾಗಿ ಶಕ್ಯವಾಗುವದಿಲ್ಲ. ||೨೩||

**ತಸ್ಯ ಸಂಶಮನಂ ಕುರ್ಯಾತ್ ಕ್ಷಪಣಂ ಶೋಷಣಂ ತಥಾ ||**
**ಆಧಿಕ್ಯಾದಾಮಕಫಯೋರ್ಯುಕ್ತ್ಯಪೇಕ್ಷಃ ಸದಾ ಭಿಷಕ್ || ೨೪ ||**

**ಅರ್ಥ—** ಆದ ಕಾರಣ ವೈದ್ಯನು ಆಮಕಫಗಳು ಹೆಚ್ಚಿರುವದರಿಂದ ಯಾವಾಗಲೂ ಆದರ ಶಮನವನ್ನು ಆಮಕಫಗಳ ಕರ್ಶನ, ಶೋಷಣವನ್ನು ಯುಕ್ತಿಯಿಂದ ಮಾಡಬೇಕು. ||೨೪||

ಆಹಾರವನ್ನು ಹೇಳುತ್ತಾರೆ.

ರುಕ್ಷೋಪಚಾರಂ ಸ ಯದಾ ಯವಶ್ಯಾಮಾಕಕೋದ್ರವಾನ್ ||

ಶಾಕೈರಲವಣೈರ್ದದ್ಯಾತ್ ಜಲತೈಲೋಪಸಾಧಿತೈಃ ||೨೫||
ಸುನಿಷಣ್ಣಕನಿಂಬಾರ್ಕವೇತ್ರಾರಗ್ವಧಪಲ್ಲವೈಃ ||
ವಾಯಸೀವಾಸ್ತುಕೈಸ್ತಿಕ್ತೈರನ್ಯೈಶ್ಚ ಕುಲಕಾದಿಭಿಃ ||೨೬||

ಕ್ಷಾರಾರಿಷ್ಟಪ್ರಯೋಗೈಶ್ಚ ಹರೀತಕ್ಯಾಸ್ತಥೈವ ಚ ||
ಮಧೂದಕಸ್ಯ ಪಿಪ್ಪಲ್ಯಾಶ್ಚೋರುಸ್ತಂಭವಿನಾಶನಮ್ || ೨೭ ||

**ಅರ್ಥ—** ಆವನಿಗೆ ಯಾವಾಗಲೂ ರುಕ್ಷೋಪಚಾರವನ್ನು ಮಾಡಬೇಕು. ಹಸಿವೆಯಾದಾಗ ಜವೆ, ಸಾವಿ, ಹರಕ ಧಾನ್ಯಗಳ ಅನ್ನವನ್ನು ನೀರು ಮತ್ತು ಎಣ್ಣೆಗಳಿಂದ ಮಾಡಿದ, ಉಪ್ಪು ಹಾಕದ ||೨೫|| ಸುನಿಷಣ್ಣಕ, (ಪಾಂಡವರ ಹರಿವೆ), ಬೇವು, ಎಕ್ಕೆ, ಬೆತ್ತ, ಕಕ್ಕೆಗಳ ಎಲೆಗಳಿಂದ ಕಾಕಿ, ವಾಸ್ತುಕ (ಚಕೋತ) ಎಲೆಗಳಿಂದ ಅಥವಾ ಹಾಗಲಕಾಯಿ, ಮುಂತಾದ ಬೇರೆ ಕಹಿ ಪಲ್ಯಗಳೊಡನೆ ಕೊಡಬೇಕು. || ೨೬ || ಕ್ಷಾರ, ಅರಿಷ್ಟ, ಅಣಲೆ, ಜೇನು ಕೂಡಿದ ನೀರು, ಹಿಪ್ಪಲಿ ಇವುಗಳ ಪ್ರಯೋಗದಿಂದ ಊರುಸ್ತಂಭವು ಹೋಗುವದು. || ೨೭ ||

ಸಮಂಗಾಶಾಲ್ಮಲೀಬಿಲ್ವಂ ಮಧುನಾ ಸಹನಾಪಿಬೇತ್ ||
ತಥಾ ಶ್ರೀವೇಷ್ಟಕೋದೀಚ್ಯ ದೇವದಾರುನತಾನ್ಯಪಿ || ೨೮ ||

ಚಂದನಂ ಧಾತಕೀ ಕುಷ್ಠಂ ತಾಲೀಸಂ ನಲದಂ ತಥಾ ||
ಮುಸ್ತಂ ಹರೀತಕೀ ಲೋಧ್ರಂ ಪದ್ಮಕಂ ತಿಕ್ತರೋಹಿಣೀ || ೨೯ ||

ದೇವದಾರು ಹರಿದ್ರೇ ದ್ವೇ ವಚಾ ಕಟುಕರೋಹಿಣೀ ||
ಪಿಪ್ಪಲೀ ಪಿಪ್ಪಲೀಮೂಲಂ ಸರಲಂ ದೇವದಾರು ಚ || ೩೦ ||

ಚವ್ಯಂ ಚಿತ್ರಕಮೂಲಂಚ ದೇವದಾರು ಹರೀತಕೀ ||
ಸಕ್ಷೌದ್ರಾನರ್ಧಶ್ಲೋಕೋಕ್ತಾನ್ ಕಲ್ಕಾನೂರುಗ್ರಹಾಪಹಾನ್|| ೩೧ ||

ಶಾಂಗೇಷ್ಟಾಂ ಮದನಂ ದಂತೀಂ ವತ್ಸಕಸ್ಯ ಫಲಂ ವಚಾಮ್ ||
ಭಲ್ಲಾತಕಂ ಸಮೂಲಾಂ ಚ ಪಿಪ್ಪಲೀನ್ ಕ್ವಥಿತಾನ್ ಪಿಬೇತ್ || ೩೨ ||

ಮೂರ್ವಾಮಾರಗ್ವಧಂ ಪಾಠಾಂ ಕರಂಜಾಂ ಕುಲಕಂ ತಥಾ ||
ಪಿಬೇತ್ ತುಲ್ಯಂ ಮಧುಯುತಂ ಚೂರ್ಣಂ ವಾ ವಾರಿಣಾಪ್ಲುತಮ್ || ೩೩ ||

ಸಕ್ಷೌದ್ರಂ ದಧಿಮಂಡೈರ್ವಾ ಊರುಸ್ತಂಭವಿನಾಶನಮ್ ||
ಮೂರ್ವಾಮತಿವಿಷಾಂ ಕುಷ್ಠಂ ಚಿತ್ರಕಂ ಕಟುಕರೋಹಿಣೀಮ್ ||೩೪||

ಪೂರ್ವವದ್ಗುಗ್ಗುಲುಂ ಮೂತ್ರೇ ರಾತ್ರಿಸ್ಥಿತಮಥಾಪಿವಾ ||
ಸ್ವರ್ಣಕ್ಷೀರೀಮತಿವಿಷಾಂ ಮುಸ್ತಂ ತೇಜೋವತೀಂ ವಚಾ || ೩೫ ||

ಸುರಾಹ್ವಾಂ ಚಿತ್ರಕಂ ಕುಷ್ಠಂ ಪಾಠಾಂ ಕಟುಕರೋಹಿಣೀಂ ||
ಲೇಹಯೇನ್ಮಧುನಾ ಚೂರ್ಣಂ ಸಕ್ಷೌದ್ರಂ ವಾ ಜಲಪ್ಲುತಮ್ || ೩೬ ||

ಫಲೀಂ ವ್ಯಾಘ್ರನಖಿಂ ಹೇಮ ಪಿಬೇದ್ ವಾ ಮಧುಸಂಯುತಮ್ ||
ತ್ರಿಫಲಾಂ ಪಿಪ್ಪಲೀಂ ಮುಸ್ತಂ ಚವ್ಯಂ ಕಟುಕರೋಹಿಣೀಂ || ೩೭ ||

ಲಿಹ್ಯಾದ್ ವಾ ಮಧುನಾ ಚೂರ್ಣಮೂರುಸ್ತಂಭಾರ್ದಿತೋ ನರಃ ||
ಅಪತರ್ಪಣತಶ್ಚ ಸ್ಯಾದ್ ದೋಷಃ ಸಂತರ್ಪಯೇತ್ ತು ತಮ್ ||೩೮||

ಯುಕ್ತ್ಯಾ ಜಾಂಗಲಜೈರ್ಮಾಂಸೈಃ ಪುರಾಣೈಶ್ಚೈವ ಶಾಲಿಭಿಃ ||
ರೂಕ್ಷಣಾದ್ ವಾತಕೋಪಶ್ಚೇನ್ನಿದ್ರಾನಾಶಾರ್ತಿಪೂರ್ವಕಃ ||೩೯||

ಸ್ನೇಹಸ್ವೇದಕ್ರಮಸ್ತತ್ರ ಕಾರ್ಯೋ ವಾತಾಮಯಾಪಹಃ ||
ಪೀಲೂಪರ್ಣೀ ಪಯಸ್ಯಾ ಚ ರಾಸ್ನಾ ಗೋಕ್ಷುರಕಂ ವಚಾ ||೪೦||

ಸರಲಾಗುರುಪಾಠಾಶ್ಚ ತೈಲಮೇಭಿರ್ವಿಪಾಚಯೇತ್ ||
ಸಕ್ಷೌದ್ರಂ ಪ್ರಸೃತಂ ತಸ್ಮಾದಂಜಲಿಂ ಚಾಪಿ ವಾ ಪಿಬೇತ್ ||೪೧||

ಕುಷ್ಠಶ್ರೀವೇಷ್ಟಕೋದೀಚ್ಯಂ ಸರಲಂ ದಾರು ಕೇಶರಮ್ ||
ಅಜಗಂಧಾಶ್ವಗಂಧಾ ಚ ತೈಲಂ ತೈಃ ಸಾರ್ಷಪಂ ಪಚೇತ್ ||೪೨||

ಸಕ್ಷೌದ್ರಂ ಮಾತ್ರಯಾ ತಚ್ಚಾಪ್ಯೂರುಸ್ತಂಭಾರ್ದಿತಂ ಪಿಬೇತ್ ||
ರೌಕ್ಷ್ಯಾನ್ಮುಕ್ತ ಊರುಸ್ತಂಭಾತ್ ತತಶ್ಚ ಸ ವಿಮುಚ್ಯತೇ ||೪೩||

**ಅರ್ಥ—** ೧ ಮಂಜಿಷ್ಠೆ, ಬೂರಲು, ಬಿಲ್ವ ಇವುಗಳ ಅಥವಾ ೨ ಗಂಧ, ಬಿರೇಜಾ, ಬಾಳದ ಬೇರು, ದೇವದಾರು, ತಗರು ಇವುಗಳ ಅಥವಾ ೩ ಚಂದನ, ಧಾತಕೀ, ಕೋಷ್ಠ, ತಾಲೀಸಪತ್ರ, ತಗರಗಳ ೪ ಜೇಕು, ಅಣಲೆ, ಲೋಧ್ರ, ಪದ್ಮಕಾಷ್ಠ, ಕಟುಕರೋಹಿಣಿಗಳ ||೨೯|| ೫ ದೇವದಾರು,

ಅರಿಷಿಣ, ಮರಅರಿಷಿಣ, ಬಜೆ, ಕಟುಕರೋಹಿಣಿಗಳ ಅಥವಾ ೬ ಹಿಪ್ಪಲಿ, ಮೋಡಿ, ಸರಸಿ, ದೇವದಾರುಗಳ ||೩೦|| ಅಥವಾ ೭ ಚವಕ, ಚಿತ್ರಕ, ದೇವದಾರು, ಅಣಲೆಗಳ, ಹೀಗೆ ಅರ್ಧ ಅರ್ಧ ಶ್ಲೋಕಗಳಲ್ಲಿ ಹೇಳಿದ ದ್ರವ್ಯಗಳ ಕಲ್ಕವನ್ನು ಜೇನಿನೊಡನೆ ನೆಕ್ಕಿದರೆ ಊರುಸ್ತಂಭರೋಗವು ಹೋಗುವದು. ||೩೧|| ಗಜಗ, ಮದನಫಲ, ದಂತೀಮೂಲ, ಇಂದ್ರಜವಿ, ಬಜೆ, ಕೇರು, ಹಿಪ್ಪಲಿ, ಮೋಡಿ ಇವುಗಳ ಕಷಾಯ ಕುಡಿಯಬೇಕು. ||೩೨|| ಹೆಗ್ಗೊರಟಿಗೆ, ಕಕ್ಕಿ, ಅಗಳಶುಂಠಿ, ಹುಲಗಲಿ, ಹಾಗಲ, ಇವುಗಳ ಚೂರ್ಣ ವನ್ನು ಜೇನುಹಾಕಿ ಅಥವಾ ನೀರುಹಾಕಿ ಕುಡಿಯಬೇಕು. ||೩೩|| ಅಥವಾ ಹೆಗ್ಗೊರಟಿಗೆ, ಅತಿವಿಷ, ಕೋಷ್ಠ. ಚಿತ್ರಕ, ಕಟುಕರೋಹಿಣಿ ಇವುಗಳ ಚೂರ್ಣವನ್ನು ಜೇನು ಕೂಡಿಸಿ ಅಥವಾ ಮೊಸರಿನ ತಿಳಿಯನ್ನು ಕೂಡಿಸಿ ಕುಡಿಯಬೇಕು. ಅದು ಊರುಸ್ತಂಭವನ್ನು ಕಳೆಯುವದು. ||೩೪|| ಹಿಂಪೆ ಹೇಳಿದಂತೆ ರಾತ್ರಿಯಲ್ಲಿ ಮೂತ್ರದಲ್ಲಿ ನೆನೆಯಿಟ್ಟು, ಹಗಲು ಒಣಗಿಸಿದ ಗುಗ್ಗು ಳವನ್ನು ಜೇನಿನೊಡನೆ ಅಥವಾ ಮೊಸರಿನ ತಿಳಿಯೊಡನೆ ಕೊಡಬೇಕು. ||೩೫|| ದೇವದಾರು, ಚಿತ್ರಕ, ಕೋಷ್ಠ, ಅಗಳಶುಂಠಿ, ಕಟಕರೋಣಿ ಇವುಗಳ ಚೂರ್ಣ ವನ್ನು ಜೇನಿನೊಡನೆ ನೆಕ್ಕಬೇಕು. ಅಥವಾ ಜೇನು ನೀರು ಹಾಕಿ ಕುಡಿಯ ಬೇಕು. ||೩೬|| ಪ್ರಿಯಂಗು, ವ್ಯಾಘ್ರನಖ, ನಾಗಕೇಶರ, ಇವುಗಳ ಚೂರ್ಣ ವನ್ನು ಜೇನಿನೊಡನೆ ನೆಕ್ಕಿಸಬೇಕು. ತ್ರಿಫಳೆ, ಹಿಪ್ಪಲಿ, ಜೇಕು, ಚವಕ, ಕಟುಕರೋಣಿ ||೩೭|| ಇವುಗಳ ಚೂರ್ಣವನ್ನು ಊರುಸ್ತಂಭದಿಂದ ಪೀಡಿತ ರೋಗಿಯು ಜೇನಿನೊಡನೆ ನೆಕ್ಕಬೇಕು. ಅಪತರ್ಪಣದಿಂದ ಅಪಾಯವಾದರೆ ||೩೮|| ಜಾಂಗಲ ಪ್ರಾಣಿಗಳ ಮಾಂಸದಿಂದ ಹಳೇ ಅಕ್ಕಿಗಳ ಅನ್ನಗಳಿಂದ ಯೋಗ್ಯರೀತಿಯಿಂದ ಬೃಂಹಣ ಮಾಡಬೇಕು. ರುಕ್ಷ ಉಪಚಾರದಿಂದ ವಾತ ಕೋಪವಾಗಿ ನಿದ್ರಾನಾಶ, ಶೂಲ ಮುಂತಾದ ವಿಕಾರಗಳು ಉಂಟಾದರೆ ||೩೯|| ಆಗ್ಗೆ ವಾತರೋಗನಾಶಕವಾದ ಸ್ನೇಹ ಸ್ವೇದ ಕ್ರಮವನ್ನು ಮಾಡ ಬೇಕು. ಹೆಗ್ಗೊರಟಿಗೆ, ಹಾಲಸೆಲಗುಂಬಳ, ರಾಸ್ನಾ, ನೆಗ್ಗಿಲು, ಬಜೆ ||೪೦|| ಸರಲ, ಅಗರು, ಅಗಳಶುಂಠಿ, ಇವುಗಳ ಕಲ್ಕದಿಂದ ೪ ಪಾಲು ನೀರಿನಲ್ಲಿ ತೈಲ ವನ್ನು ಸಿದ್ಧಮಾಡಬೇಕು. ಅದನ್ನು ೪ ತೊಲೆ ಅಥವಾ ೧೬ ತೊಲೆಯಷ್ಟು ಜೇನು ಹಾಕಿ ಕುಡಿಯಬೇಕು. ||೪೧|| ಕೋಷ್ಠ, ಗಂಧಾಬಿರೋಚಾ, ಬಾಳದ ಬೇರು, ಸರಲ, ದೇವದಾರು, ನಾಗಕೇಶರ, ಅಜಗಂಧಾ, (ಅಜವಾನ) ಅಶ್ವ ಗಂಧ, ಇವುಗಳ ಕಲ್ಕದಿಂದ ೪ ಪಾಲು ನೀರಿನಲ್ಲಿ ಸಾಸಿವೆ ಎಣ್ಣೆಯನ್ನು ಸಿದ್ಧ

ಮಾಡಬೇಕು. ||೪೨|| ಊರುಸ್ತಂಭದಿಂದ ಪೀಡಿತನಾದ ರೋಗಿಯು ಅದ ನ್ನಾದರೂ ಜೇನು ಹಾಕಿ ಯೋಗ್ಯ ಪ್ರಮಾಣದಲ್ಲಿ ಕುಡಿಯಬೇಕು. ಅದ ರಿಂದ ರುಕ್ಷತೆಯಿಂದ ಮುಕ್ತನಾಗಿ, ಆ ಮೇಲೆ ಊರುಸ್ತಂಭರೋಗದಿಂದಲೂ ಮುಕ್ತನಾಗುತ್ತಾನೆ. ||೪೩||

ಅಪತ್ಯದಾಯಕ ಸೈಂಧವಾದಿ ಮತ್ತು ಅಷ್ಟಕಟ್ವರ ತೈಲವನ್ನು ಹೇಳುತ್ತಾರೆ.

**ದ್ವೇಪಲೇ ಸೈಂಧವಾತ್ ಪಂಚ ಶುಂಠ್ಯಾ ಗ್ರಂಥಿಕಚಿತ್ರಕಾತ್ ||**
**ದ್ವೇ ದ್ವೇ ಭಲ್ಲಾತಕಾಸ್ಥೀನಿ ವಿಂಶತಿರ್ದ್ವೇ ತಥಾಢಕೇ ||೪೪||**
**ಆರನಾಲಾತ್ ಪಚೇತ್ ಪ್ರಸ್ಥಂ ತೈಲಸ್ಯೈತೈರಪತ್ಯದಮ್ ||**
**ಗೃಧ್ರಸ್ಯೂರುಗ್ರಹಾರ್ಶೋರ್ತಿಸರ್ವವಾತವಿಕಾರನುತ್ ||೪೫||**
**ಪಲಾಭ್ಯಾಂ ಪಿಪ್ಪಲೀಮೂಲನಾಗರಾದಷ್ಟಕಟ್ವರಃ ||**
**ತೈಲಪ್ರಸ್ಥಃ ಸಮೋ ದಧ್ನಾ ಗೃಧ್ರಸ್ಯೂರುಗ್ರಹಾಪಹಃ ||೪೬||**

**ಅರ್ಥ—** ಸೈಂಧವ ೮ ತೊಲೆ, ಶುಂಠಿ ೨೦ ತೊಲೆ, ಮೋಡಿ ೮ ತೊಲೆ, ಚಿತ್ರಕ ೮ ತೊಲೆ, ಕೇರು ೨೦ ತೊಲೆ ಇವುಗಳ ಕಲ್ಕದಲ್ಲಿ ಬೆಣ್ಣೇ ತೆಗೆದ ಮಜ್ಜಿಗೆ ೧೦೨೪ ತೊಲೆ ||೪೪|| ಹಾಕಿ ೧೨೮ ತೊಲೆ ಎಣ್ಣೆಯನ್ನು ಸಿದ್ಧಮಾಡ ಬೇಕು. ಅದು ಅಪತ್ಯವನ್ನು ಕೊಡುವದು. ಗೃಧ್ರಸಿ, ಊರುಸ್ತಂಭ, ಮೂಲವ್ಯಾಧಿಗಳ ನೋವು ಮತ್ತು ಸರ್ವಪಿತ್ತವಿಕಾರ ಇವುಗಳನ್ನು ಕಳೆಯು ವದು ||೪೫|| ಮೋಡಿ ೪ ತೊಲೆ, ಶುಂಠಿ ೪ ತೊಲೆ, ಇವುಗಳ ಕಲ್ಕದಲ್ಲಿ ಕೆನೆ ತೆಗೆಯದ ಮೊಸರಿನ ಮಜ್ಜಿಗೆಯನ್ನು ೮ ಪಾಲು ಮತ್ತು ಮೊಸರು ೧೨೮ ತೊಲೆ, ತೈಲ ೧೨೮ ತೊಲೆ ಹಾಕಿ ತೈಲವನ್ನು ಸಿದ್ಧಮಾಡಬೇಕು ಈ ಅಷ್ಟಕಟ್ವರ (ಕಟ್ವರ=ಮಜ್ಜಿಗೆ) ತೈಲವು ಗೃಧ್ರಸಿ, ಊರುಸ್ತಂಭಗಳನ್ನು ಕಳೆಯುವದು. ||೪೬||

**ಇತ್ಯಂಭ್ಯಂತರಮುದ್ದಿಷ್ಟಮೂರುಸ್ತಂಭಸ್ಯ ಭೇಷಜಂ ||**
**ಶ್ಲೇಷ್ಮಣಃ ಕ್ಷಪಣಂ ತ್ವನ್ಯದ್ ಬಾಹ್ಯಂ ಶೃಣು ಚಿಕಿತ್ಸಿತಮ್ ||೪೭||**

**ಅರ್ಥ—** ಇಲ್ಲಿಯವರೆಗೆ ಹೊಟ್ಟೆಯಲ್ಲಿ ತಕ್ಕೊಳ್ಳುವ ಊರುಸ್ತಂಭದ ಔಷಧಗಳನ್ನು ಹೇಳಿದೆವು. ಇನ್ನು ಮೇಲೆ ಕಫವನ್ನು ಕಳೆಯುವ ಬಾಹ್ಯ ಔಷಧಗಳನ್ನು ಹೇಳುತ್ತೇನೆ; ಕೇಳಿರಿ. ||೪೭||

ಕಫನಾಶಕ ಬಾಹ್ಯ ಉಪಚಾರಗಳನ್ನು ಹೇಳುತ್ತಾರೆ.

ವಲ್ಮೀಕಮೃತ್ತಿಕಾ ಮೂಲಂ ಕರಂಜಾತ್ ಸಫಲತ್ವಚಮ್ ||
ಇಷ್ಟಕಾನಾಂ ತತಶ್ಚೂರ್ಣೈಃ ಕುರ್ಯಾತ್ ಉತ್ಸಾದನಂ ಭೃಶಮ್ ||೪೮||

ಮೂಲೈರ್ವಾಪ್ಯಶ್ವಗಂಧಾಯಾ ಮೂಲೈರರ್ಕಸ್ಯ ವಾ ಭಿಷಕ್ ||
ಪಿಚುಮರ್ದಸ್ಯ ವಾ ಮೂಲೈರಥವಾ ದೇವದಾರುಣಃ ||೪೯||

ಕ್ಷೌದ್ರಸರ್ಷಪವಲ್ಮೀಕಮೃತ್ತಿಕಾಸಂಯುತೈರ್ಭಿಷಕ್ ||
ಗಾಢಮುತ್ಸಾದನಂ ಕುರ್ಯಾತ್ ಊರುಸ್ತಂಭೇ ಪ್ರಲೇಪನಮ್||೫೦||

ದಂತೀದ್ರವಂತೀಸುರಸಾ ಸರ್ಷಪೈಶ್ಚಾಪಿಬುದ್ಧಿಮಾನ್
ತರ್ಕಾರಿ ವಿಶ್ವಸುರಸ ಶಿಗ್ರುವತ್ಸಕನಿಂಬಜೈಃ || ೫೧ ||

ಪತ್ರಮೂಲಫಲೈಸ್ತೋಯಂ ಶೃತಮುಷ್ಣಂ ಚ ಸೇಚನಮ್ ||
ಪಿಷ್ಟಂ ತು ಸರ್ಷಪಂ ಮೂತ್ರೇಽಧ್ಯುಷಿತಂ ಸ್ಯಾತ್ ಪ್ರಲೇಪನಮ್ ||೫೨||

ವತ್ಸಕಃ ಸುರಸಃ ಕುಷ್ಠಂ ಗಂಧಾ ತುಂಬುರುಶಿಗ್ರುಕೌ ||
ಹಿಂಸ್ರಾರ್ಕಮೂಲವಲ್ಮೀಕಮೃತ್ತಿಕಾ ಸಕುಠೇರಕಾಃ ||೫೩||

ದಧಿಸೈಂಧವಸಂಯುಕ್ತಂ ಕಾರ್ಯಮೇತೈಃ ಪ್ರಲೇಪನಮ್ ||
ಊರುಸ್ತಂಭವಿನಾಶಾಯ ಭಿಷಜಾ ಜಾನತಾ ಕ್ರಮಮ್ ||೫೪||

ಶ್ಯೋನಾಕಂ ಖದಿರಂ ನಿಂಬಂ ಬೃಹತ್ಯೌ ಸರಲಾಸನೌ ||
ಶೋಭಾಂಜನಕತರ್ಕಾರೀ ಶ್ವದಂಷ್ಟ್ರಾಸುರಸಾರ್ಜಕಮ್ ||೫೫||

ಅಗ್ನಿಮಂಥಕರಂಜೌ ಚ ಜಲೇ ನಿಕ್ವಾಥ್ಯ ಸೇಚಯೇತ್ ||
ಪ್ರಲೇಪೋ ಮೂತ್ರಪಿಷ್ಟೈರ್ವಾಪ್ಯೂರುಸ್ತಂಭನಿವಾರಣಃ ||೫೬||

ಕಫಕ್ಷಯಾರ್ಥಂ ವ್ಯಾಯಾಮೇಷ್ವೇನಂ ಶಕ್ಯೇಷು ಚೋತ್ಸೃಜೇತ್ ||
ಸ್ಥಾನಾನ್ಯಾಕ್ರಾಮಯೇತ್ಕಲ್ಯಂ ಶರ್ಕರಾಸಿಕತ ಸ್ತಥಾ ||೫೭||

ಪ್ರತಾರಯೇತ್ ಪ್ರತಿಸ್ರೋತೋ ನದೀಂ ಶೀತಜಲಾಂ ಶಿವಾಮ್ ||
ಸರಶ್ಚ ವಿಮಲಂ ಶೀತಂ ಸ್ಥಿರತೋಯಂ ಪುನಃಪುನಃ ||೫೮||

ತಥಾ ವಿಶುಷ್ಕೇಽಸ್ಯ ಕಫೇ ಶಾಂತಿಮೂರುಗ್ರಹೋ ವ್ರಜೇತ್ ||೫೯|| ||

**ಅರ್ಥ—** ಹುತ್ತಿನ ಮಣ್ಣು, ಹುಲಗಲಿಬೇರು, ಕಾಯಿ, ತೊಗಟೆ, ಇಟ್ಟಂಗಿ, ಇವುಗಳ ಚೂರ್ಣವನ್ನು ತೊಡೆಗೆ ಹಚ್ಚಿ ತಿಕ್ಕಬೇಕು. ||೪೮|| ಹಿರೇ ಮದ್ದಿನ ಬೇರಿನ ಚೂರ್ಣದಲ್ಲಿ ಅಥವಾ ಎಕ್ಕೆಯ ಬೇರಿನಚೂರ್ಣದಲ್ಲಿ ಅಥವಾ ಬೇವಿನ ಬೇರಿನ ಚೂರ್ಣದಲ್ಲಿ ಅಥವಾ ದೇವದಾರು ಬೇರಿನ ಚೂರ್ಣದಲ್ಲಿ ||೪೯|| ಜೇನು, ಸಾಸಿವೆಪುಡಿ, ಹುತ್ತಿನಮಣ್ಣನ್ನು ಕೂಡಿಸಿ, ವೈದ್ಯನು ಅವು ಗಳಿಂದ ಊರುಸ್ತಂಭವಿಕಾರದಲ್ಲಿ ಗಟ್ಟಿಯಾಗಿ ತೊಡೆಗೆ ತಿಕ್ಕಬೇಕು. ||೫೦|| ದಂತೀಮೂಲ, ದ್ರವಂತಿ ( ಮೂಷಕ ಪೂರ್ಣಿ ) ಮೂಲ, ತುಳಸಿ, ಸಾಸಿವೆಗಳ ಚೂರ್ಣದಿಂದ ಬುದ್ಧಿವಂತನು ಲೇಪಮಾಡಬೇಕು. ಜಯಂತಿ, ಶುಂಠಿ, ತುಳಸಿ, ನುಗ್ಗಿ, ಇಂದ್ರಜವಿ, ಬೇವಿನಎಲೆ ಇವುಗಳ ಕಲ್ಕದಿಂದ ಲೇಪಮಾಡಬೇಕು. ||೫೧||ಮತ್ತು ಇವುಗಳ ಎಲೆ ಬೇರು ಕಾಯಿಗಳ ಉಷ್ಣವಾದ ಕಷಾಯದಿಂದ ಸೇಚನಮಾಡಬೇಕು. ಸಾಸಿವೆಯನ್ನು ಗೋಮೂತ್ರದಲ್ಲಿ ರಾತ್ರಿಯಲ್ಲಿ ನೆನೆ ಯಿಟ್ಟು, ಮುಂಜಾನೆ ಅದರಲ್ಲಿಯೇ ಅರೆದು ಲೇಪಮಾಡಬೇಕು. ||೫೨|| ಇಂದ್ರಜವಿ, ಕರೇತುಳಸಿ, ಕೋಷ್ಠ, ಅಶ್ವಗಂಧ, ತುಂಬುರು ( ಅಡವೀಹವೀಜ) ನುಗ್ಗೀಬೀಜ, ನಸುಗುನ್ನೀಬೇರು, ಎಕ್ಕೀಬೇರು, ಹುತ್ತಿನಮಣ್ಣು,ಬಿಳೀತುಳಸಿ, ||೫೩|| ಇವುಗಳಲ್ಲಿ ಮೊಸರು ಸೈಂಧವಗಳನ್ನು ಕೂಡಿಸಿ, ಅವುಗಳಿಂದ ವಿಧಿ ಯನ್ನು ಬಲ್ಲ ವೈದ್ಯನು ಊರುಸ್ತಂಭನಾಶಕ್ಕಾಗಿ ಲೇಪವನ್ನು ಮಾಡಬೇಕು. ||೫೪|| ಹೆಮ್ಮರದಬೇರು, ತರೆಯಬೇರು, ಬೇವಿನತೊಗಟೆ, ನೆಲಗುಳ್ಳ, ಹೆಬ್ಬ ಗುಳ್ಳ, ಸರಲ, ಅಸನ ( ಹೊನ್ನೆ ), ನುಗ್ಗಿ, ತರ್ಕಾರಿ ( ಜಯಂತಿ ) ಇವುಗಳ ತೊಗಟೆ, ನೆಗ್ಗಿಲಮುಳ್ಳು, ಕರೇ ಮತ್ತು ಬಿಳೀ ತುಳಸಿ ||೫೫|| ಅಗ್ನಿಮಂಥ (ಹೂಸಲಕ್ಕಿ)ದ ತೊಗಟೆ, ಹುಲಗಲ ಇವುಗಳನ್ನು ನೀರಿನಲ್ಲಿ ಕುದಿಸಿ ಸೇಚನ ಮಾಡಬೇಕು; ಅಥವಾ ಗೋಮೂತ್ರದಲ್ಲಿ ಅರೆದು ಲೇಪಮಾಡಬೇಕು. ಅಂದರೆ ಊರುಸ್ತಂಭರೋಗವು ಹೋಗುವದು. || ೫೬ || ಕಫದ ನಾಶಕ್ಕಾಗಿ ಶಕ್ಯವಾದ ವ್ಯಾಯಾಮಗಳಲ್ಲಿ ಇವನನ್ನು ತೊಡಗಿಸಬೇಕು. ಮುಂಜಾನೆ ಬಹಳ ಹಾದೀ ನಡೆಸಬೇಕು. ಉಸುಕಿನ ಪ್ರದೇಶಗಳಲ್ಲಿ ಓಡಾಡಿಸಬೇಕು. || ೫೭ || ಹಿಂಸ್ರ ಪ್ರಾಣಿಗಳಿರದ ತಣ್ಣೀರಿನ ನದಿಗಳಲ್ಲಿ ಪ್ರವಾಹದ ವಿರುದ್ಧ ಈಸಲು ಹೇಳ ಬೇಕು. ಅದರಂತೆ ಯಾವಾಗಲೂ ಸ್ಥಿರವಾದ ನೀರುಳ್ಳ, ಶೀತ ಮತ್ತು ಸ್ವಚ್ಛವಾದ ಸರೋವರದಲ್ಲಿ ಮೇಲಿಂದಮೇಲೆ ಈಸಲು ಹಚ್ಚಬೇಕು. ||೫೮|| ಹೀಗೆ ಮಾಡುವದರಿಂದ ಇವನ ಕಫವು ಒಣಗಿ ಊರುಸ್ತಂಭವು ಶಾಂತವಾಗು ವದು. || ೫೮|| ||

ಊರುಸ್ತಂಭ ಚಿಕಿತ್ಸೆಯ ತತ್ವವನ್ನು ಹೇಳುತ್ತಾರೆ—

**ಯತ್ ಸ್ಯಾತ್ ಕಫಪ್ರಶಮನಂ ನ ಚ ಮಾರುತಕೋಪನಮ್ || ೫೯ ||**
**ತತ್ಸರ್ವಂ ಸರ್ವದಾಕಾರ್ಯಮೂರುಸ್ತಂಭಸ್ಯ ಭೇಷಜಂ ||**
**ಶರೀರಂ ಬಲಮಗ್ನಿಂ ಚ ಕಾರ್ಯೈಷಾ ರಕ್ಷತಾ ಕ್ರಿಯಾ || ೬೦ ||**

**ಅರ್ಥ—** ಯಾವದು ಕಫವನ್ನು ಕಳೆಯುವದು ಮತ್ತು ವಾತಕೋಪವನ್ನುಂಟುಮಾಡದು. || ೫೯ || ಅದನ್ನು ಯಾವಾಗಲೂ ಮಾಡತಕ್ಕದ್ದು. ಅದೇ ಊರುಸ್ತಂಭದ ಔಷಧವಾಗಿದೆ. ಆದರೆ ಇದನ್ನು ಮಾಡುವಾಗ ಶರೀರ, ಬಲ, ಅಗ್ನಿಗಳನ್ನು ರಕ್ಷಿಸತಕ್ಕದ್ದು. || ೬೦ ||

## ತತ್ರಶ್ಲೋಕಃ

**ಹೇತುಪ್ರಾಗ್ರೂಪಲಿಂಗಾನಿ ಕರ್ಮಾಯೋಗ್ಯತ್ವಕಾರಣಮ್ ||**
**ಭೇಷಜಂ ದ್ವಿವಿಧಂ ಚೋಕ್ತಮೂರುಸ್ತಂಭಚಿಕಿತ್ಸಿತೇ ||೬೧||**

**ಅರ್ಥ—** ಈ ಊರುಸ್ತಂಭ ಚಿಕಿತ್ಸಾಧ್ಯಾಯದಲ್ಲಿ ಅದರ ಕಾರಣ, ಪೂರ್ವರೂಪ,ಲಕ್ಷಣ, ತೊಡೆಗಳ ಕಾರ್ಯದಲ್ಲಿ ಅಸಮರ್ಥವಾಗಲು ಕಾರಣ, ಹೊಟ್ಟೆಯೊಳಗಣ, ಮೇಲಣ ಔಷಧ ಇವು ಹೇಳಲ್ಪಟ್ಟವು. ||೬೧||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಊರುಸ್ತಂಭ ಚಿಕಿತ್ಸಿತಂ ನಾಮ ಸಪ್ತವಿಂಶೋಽಧ್ಯಾಯಃ**

**ಅರ್ಥ—** ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕ ಸಂಹಿತೆಯಚಿಕಿತ್ಸಾಸ್ಥಾನದಲ್ಲಿ **ಊರುಸ್ತಂಭ** ಎಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ-ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ಊರುಸ್ತಂಭ** ಚಿಕಿತ್ಸೆ ಎಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

# ಇಪ್ಪತ್ತೆಂಟನೆಯ ಅಧ್ಯಾಯವು.

ಊರುಸ್ತಂಭ ಚಿಕಿತ್ಸೆಯಲ್ಲಿ ರೂಕ್ಷ ಚಿಕಿತ್ಸೆ ಮಾಡಬೇಕಾಗುವದರಿಂದ ವಾತಪ್ರಕೋಪ ವಾಗುವ ಸಂಭವವಿರುವದರಿಂದ ಅದರ ನಂತರ ವಾತ ಚಿಕಿತ್ಸೆಯನ್ನು ಹೇಳುತ್ತಾರೆ—

**ಅಥಾತೋ ವಾತವ್ಯಾಧಿ ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನು ಮೇಲೆ ವಾತವ್ಯಾಧಿ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು.

**ವಾಯುರಾಯುರ್ಬಲಂ ವಾಯುರ್ವಾಯುರ್ಧಾತಾ ಶರೀರಿಣಾಮ್ ||**
**ವಾಯುರ್ವಿಶ್ವಮಿದಂ ಸರ್ವಂ ಪ್ರಭುರ್ವಾಯುಃಪ್ರಕೀರ್ತಿತಃ || ೧ ||**
**ಅವ್ಯಾಹತಗತಿರ್ಯಸ್ಯ ಸ್ಥಾನಸ್ಥಃ ಪ್ರಕೃತೌ ಸ್ಥಿತಃ ||**
**ವಾಯುಃ ಸ್ಯಾತ್ ಸೋಽಧಿಕಂ ಜೀವೇದ್ ವೀತರೋಗಃ ಸಮಾಃ ಶತಮ್ || ೨ ||**

**ಅರ್ಥ—** ಆಯುಷ್ಯ, ಬಲ, ಜೀವಿತ ಇವುಗಳಿಗೆ ಮುಖ್ಯಕಾರಣವಾದ್ದರಿಂದ ವಾಯುವು ಆಯುಷ್ಯವೆಂದೂ ಬಲವೆಂದೂ ಪ್ರಾಣಿಗಳ ಧಾರಕನೆಂದೂ ಸರ್ವ ವಿಶ್ವವೇಯೆಂದೂ ಎಲ್ಲದರ ಸ್ವಾಮಿಯೆಂದೂ ಹೇಳಲ್ಪಟ್ಟಿದೆ. || ೧ || ಯಾವನಲ್ಲಿಯ ವಾಯುವು ಪ್ರತಿಬದ್ಧವಾಗದೆ ತನ್ನ ಸ್ಥಾನದಲ್ಲಿ ಸಮಪ್ರಮಾಣದಲ್ಲಿ ಇರುತ್ತದೊ ಅವನು ರೋಗವಿಲ್ಲದೆ ನೂರಾರು ವರ್ಷ ಹೆಚ್ಚು ಬದುಕುತ್ತಾನೆ.

ಮೇಲೆ ಹೇಳಿದಂತೆ ವಾಯುವಿನಿಂದ ಬಲ ಮತ್ತು ಧಾರಣವು ಹೇಗೆ ಆಗುತ್ತದೆಯೆಂಬುದನ್ನು ಹೇಳುತ್ತಾರೆ—

**ಪ್ರಾಣೋದಾನಸಮಾನಾಖ್ಯವ್ಯಾನಾಪಾನೈಃ ಸ ಪಂಚಧಾ ||**
**ದೇಹಂ ತಂತ್ರಯತೇ ಸಮ್ಯಕ್ ಸ್ಥಾನೇಷ್ವವ್ಯಾಹತಶ್ಚರನ್ || ೩ ||**
**ಸ್ಥಾನಂ ಪ್ರಾಣಸ್ಯ ಶೀರ್ಷೋರಃ ಕರ್ಣಜಿಹ್ವಾಸ್ಯನಾಶಿಕಾಃ**
**ಷ್ಠೀವನಕ್ಷವಥೂದ್ಗಾರಶ್ವಾಸಾಹಾರಾದಿ ಕರ್ಮ ಚ**

ಉದಾನಸ್ಯ ಪುನಃ ಸ್ಥಾನಂ ನಾಭ್ಯೂರಃ ಕಂಠ ಏವ ಚ ||
ವಾಕ್ಪ್ರವೃತ್ತಿಃ ಪ್ರಯತ್ನೋಽರ್ಜೋಽಬಲವರ್ಣಾದಿ ಕರ್ಮ ಚ || ೫ ||
ಸ್ವೇದದೋಷಾಂಬುವಾಹೀನಿ ಸ್ರೋತಾಂಸಿ ಸಮಧಿಷ್ಠಿತಃ ||
ಅಂತರಗ್ನೇಶ್ಚ ಪಾರ್ಶ್ವಸ್ಥಃ ಸಮಾನೋಽಗ್ನಿಬಲಪ್ರದಃ || ೬ ||
ದೇಹಂ ವ್ಯಾಪ್ನೋತಿ ಸರ್ವಂ ತು ವ್ಯಾನಃ ಶೀಘ್ರಗತಿರ್ನೃಣಾಮ್ ||
ಗತಿಪ್ರಸಾರಣಾಕ್ಷೇಪನಿಮೇಷಾದಿಕ್ರಿಯಃ ಸದಾ || ೭ ||
ವೃಷಣೌ ಬಸ್ತಿಮೇಢ್ರಂ ಚ ನಾಭ್ಯೂರುವಂಕ್ಷಣೌ ಗುದಮ್ ||
ಅಪಾನಸ್ಥಾನಮಂತ್ರಸ್ಥಃ ಶುಕ್ರಮೂತ್ರಶಕೃತ್ ಕ್ರಿಯಃ || ೮ ||
ಸೃಜತ್ಯಾರ್ತವಗರ್ಭೌ ಚ ಯುಕ್ತಾಃ ಸ್ಥಾನಸ್ಥಿತಾಶ್ಚ ತೇ ||
ಸ್ವಕರ್ಮ ಕುರ್ವತೇ ದೇಹೋ ಧಾರ್ಯತೇ ತೈರನಾಮಯಃ || ೯ ||
ವಿಮಾರ್ಗಸ್ಥಾ ಹ್ಯಯುಕ್ತಾ ವಾ ರೋಗೈಃ ಸ್ವಸ್ಥಾನಕರ್ಮಜೈಃ ||
ಶರೀರಂ ಪೀಡಯಂತ್ಯೇತೆ ಪ್ರಾಣಾನಾಶು ಹರಂತಿ ವಾ ||೧೦||
ಸಂಖ್ಯಾಮಪ್ಯತಿವೃತ್ತಾನಾಂ ತಜ್ಜಾನಾಂ ಹಿ ಪ್ರಧಾನತಃ ||
ಅಶೀತಿರ್ನಖಭೇದಾದ್ಯಾ ರೋಗಾಃ ಸೂತ್ರೇ ನಿದರ್ಶಿತಾಃ ||೧೧||

**ಅರ್ಥ—** ಅದು ಪ್ರಾಣ, ಉದಾನ, ಸಮಾನ, ವ್ಯಾನ ಅಪಾನ ಎಂಬ ೫ ಭೇಧಗಳಿಂದ ತನ್ನ ತನ್ನ ಸ್ಥಾನಗಳಲ್ಲಿ ಅಪ್ರತಿಹತವಾಗಿ ಸಂಚರಿಸುತ್ತ ದೇಹವನ್ನು ಚೆನ್ನಾಗಿಸಾಗಿಸುತ್ತದೆ ||೩||

ಅವುಗಳ ಸ್ಥಾನ ಕರ್ಮಗಳನ್ನು ಹೇಳುತ್ತಾರೆ.

**ಪ್ರಾಣಸ್ಥಾನವು—** ತಲೆ, ಎದೆ, ಕಿವಿ, ನಾಲಿಗೆ, ಮುಖ ಮತ್ತು ಮೂಗು. ಅದರ ಕಾರ್ಯವು— ಉಗುಳೋಣ, ಶೀನು, ತೇಗು, ಶ್ವಾಸಬಿಡೋಣ, ಉಂಬೋಣ, ಮುಂತಾದ್ದು. ||೪|| **ಉದಾನದ ಸ್ಥಾನವು—** ಹೊಕ್ಕಳು, ಎದೆ, ಕುತ್ತಿಗೆ. ಅದರ ಕಾರ್ಯವು— ಮಾತಾಡೋಣ, ಪ್ರಯತ್ನ. ಊರ್ಜ (ಉತ್ಸಾಹ) ಬಲ, ವರ್ಣ ಮುಂತಾದ್ದು ||೫|| **ಸಮಾನವಾಯುವು—** ಸ್ವೇದ, ದೋಷ, ಅಂಬುವಾಹಕ ಸ್ರೋತಸ್ಸುಗಳಲ್ಲಿಯೂ ಅಂತರಗ್ನಿಯ ಸಮೀಪದಲ್ಲೂ ಇದ್ದುಕೊಂಡು ಅಗ್ನಿಗೆ ಬಲವನ್ನು ಕೊಡುತ್ತದೆ. ||೬|| ಶೀಘ್ರಗತಿಯುಳ್ಳ **ವ್ಯಾನವು** ಮನುಷ್ಯನ ಎಲ್ಲ ಶರೀರವನ್ನು ವ್ಯಾಪಿಸಿಕೊಂಡು ಇದ್ದು ಮನುಷ್ಯರ ನಡೆಯೋಣ, ದೇಹದ ಪ್ರಸಾರಣ, ಆಕುಂಚನ, ಕಣ್ಣು

ಎವೆ ಬಡಿಯೋಣ ಮುಂತಾದ ಕ್ರಿಯೆಗಳನ್ನು ಮಾಡುತ್ತವೆ. ||೭|| ವೃಷಭ, ಬಸ್ತಿ, ಶಿಶ್ನ, ನಾಭ, ತೊಡೆ, ತೊಡೆಸಂಧಿ, ಗುದ ಮತ್ತು ಅಂತ್ರ ಇವು ಅಪಾನವಾಯುವಿನ ಸ್ಥಾನಗಳು. ಅಂತ್ರದಲ್ಲಿ ಇದ್ದುಕೊಂಡು ಶುಕ್ರ, ಮೂತ್ರ, ಮಲ, ಆರ್ತವ, ಗರ್ಭಗಳನ್ನು ಕೆಳಗೆ ಬಿಡುವದು ||೮|| ಇವು ಕೃತವಾಗಿ ತಮ್ಮ ಸ್ಥಾನಗಳಲ್ಲಿದ್ದಾಗ್ಗೆ ತಮ್ಮ ಕಾರ್ಯವನ್ನು ಮಾಡುತ್ತವೆ. ಆವುಗಳಿಂದ ದೇಹವು ನಿರೋಗಿಯಾಗಿ ಬಾಳುತ್ತದೆ. ||೯|| ಅವು ವಿಕೃತ ವಾದರೆ ಅಥವಾ ಸ್ಥಾನಬಿಟ್ಟರೆ, ಆಯಾ ಸ್ಥಾನ ಮತ್ತು ಕರ್ಮಗಳಿಂದ ಉಂಟಾದ ರೋಗಗಳಿಂದ ಶರೀರವನ್ನು ಪೀಡಿಸುತ್ತವೆ. ಅಥವಾ ಪ್ರಾಣ ವನ್ನು ಕಳೆಯುತ್ತವೆ. ||೧೦|| ಆವುಗಳಿಂದ ಉಂಟಾದ ರೋಗಗಳು ಅಗಣಿತ ವಾಗಿದ್ದರೂ ಮುಖ್ಯವಾದ ನಖಭೇದ ಮುಂತಾದ ೮೦ ರೋಗಗಳು ಸೂತ್ರ ಸ್ಥಾನದಲ್ಲಿ ( ಮಹಾರೋಗಾಧ್ಯಾಯದಲ್ಲಿ ) ಹೇಳಲ್ಪಟ್ಟಿವೆ. ||೧೧||

ವಾತದ ಸಾಮಾನ್ಯ ಕಾರಣ ಲಕ್ಷಣಗಳನ್ನು ಹೇಳುತ್ತಾರೆ.

**ತಾನುಚ್ಯಮಾನಾನ್ ಪರ್ಯಾಯೈಃ ಸಹೇತೂಪಕ್ರಮಾನ್ ಶೃಣು ||**
**ಕೇವಲಂ ವಾಯುಮುದ್ದಿಶ್ಯ ಸ್ಥಾನಭೇದಾತ್ ತಥಾವೃತಮ್ ||೧೨||**

**ರೂಕ್ಷಶೀತಾಲ್ಪಲಘ್ವನ್ನ ವ್ಯವಾಯಾತಿ ಪ್ರಜಾಗರೈಃ ||**
**ವಿಷಮಾದುಪಚಾರಾತ್ತು ದೋಷಾಸೃಕ್‌ಸ್ರವಣಾದತಿ || ೧೩ ||**

**ಲಂಘನಪ್ಲವನಾತ್ಯಧ್ವವ್ಯಾಯಾಮಾತಿವಿಚೇಷ್ಟಿತೈಃ ||**
**ಧಾತೂನಾಂ ಸಂಕ್ಷಯಾಚ್ಚಿಂತಾಶೋಕರೋಗಾತಿಕರ್ಷಣಾತ್ || ೧೪ ||**

**ವೇಗಸಂಧಾರಣಾದಾಮಾದಭಿಘಾತಾದಭೋಜನಾತ್ ||**
**ಮರ್ಮಾಬಾಧಾದ್ ಗಜೋಷ್ಟ್ರಾಶ್ವ ಶೀಘ್ರಯಾನಾಪತಂಸನಾತ್ || ೧೫ ||**

**ದೇಹೇ ಸ್ರೋತಾಂಸಿ ರಿಕ್ತಾನಿ ಪೂರಯಿತ್ವಾನಿಲೋ ಬಲೀ ||**
**ಕರೋತಿ ವಿವಿಧಾನ್ ವ್ಯಾಧೀನ್ ಸರ್ವಾಂಗೈಕಾಂಗಸಂಶ್ರಯಾನ್ ||೧೬||**

**ಅವ್ಯಕ್ತಂ ಲಕ್ಷಣಂ ತೇಷಾಂ ಪೂರ್ವರೂಪಮಿತಿ ಸ್ಮೃತಮ್ ||**
**ಆತ್ಮರೂಪಂ ತು ತದ್‌ವ್ಯಕ್ತಮಪಾಯೋ ಲಘುತಾಪುನಃ || ೧೭ ||**

**ಸಂಕೋಚಃ ಪರ್ವಣಾಂ ಸ್ತಂಭೋ ಭೇದೋಽಸ್ಥಿಪರ್ವಣಾಮಪಿ ||**
**ಲೋಮಹರ್ಷಃ ಪ್ರಲಾಪಶ್ಚ ಪಾಣಿಪಾದಶಿರೋಗ್ರಹಃ || ೧೮ ||**

**ಖಾಂಜ್ಯಪಾಂಗುಲ್ಯಕುಬ್ಜತ್ವಂ ಶೋಷೋಽಂಗಾನಾಮನಿದ್ರತಾ ||**
**ಗರ್ಭಶುಕ್ರರಜೋನಾಶಃ ಸ್ಪಂದನಂ ಗಾತ್ರಸುಪ್ತತಾ || ೧೯ ||**
**ಶಿರೋನಾಸಾಕ್ಷಿಜತ್ರೂಣಾಂ ಗ್ರೀವಾಯಾಶ್ಚಾಪಿ ಹುಂಡನಮ್ ||**
**ಭೇದಸ್ತೋದೋಽರ್ತಿರಾಕ್ಷೇಪೋ ಮೋಹಶ್ಚಾಯಾಸ ಏವ ಚ ||೨೦||**
**ಏವಂ ವಿಧ್ಯಾನಿ ರೂಪಾಣಿ ಕರೋತಿ ಕುಪಿತೋಽನಿಲಃ ||**
**ಹೇತುಸ್ಥಾನವಿಶೇಷಾಚ್ಚ ಭವೇದ್ ರೋಗವಿಶೇಷಕೃತ್ ||೨೧||**

**ಅರ್ಥ—** ಕೇವಲ ವಾಯುವಿನಿಂದ, ಸ್ಥಾನಭೇದದಿಂದುಂಟಾಗುವ ಮತ್ತು ಆವೃತವಾಯುವಿನಿಂದುಟಾಗುವ ರೋಗಗಳನ್ನೂ ಅವುಗಳ ಕಾರಣ ಲಕ್ಷಣ ಚಿಕಿತ್ಸೆಗಳನ್ನು ಕ್ರಮದಿಂದ ಹೇಳುವೆವು ಕೇಳಿರಿ. ||೧೨|| ರೂಕ್ಷ, ಶೀತ, ಸ್ವಲ್ಪ ಹಗುರು, ಆಹಾರಗಳಿಂದ, ಮೈಥುನ ಅತಿಜಾಗರಣೆಗಳಿಂದ, ಸರಿಯಾಗಿ ಚಿಕಿತ್ಸೆಮಾಡದಿರೋಣದರಿಂದ, ದೋಷ ಮತ್ತು ರಕ್ತಗಳ ಅತಿಸ್ರಾವದಿಂದ ||೧೩|| ಲಂಘನ (ಅಪತರ್ಪಣ), ಜಿಗಿಯೋಣ, ಬಹಳ ಹಾದೀ ನಡೆಯೋಣ, ವ್ಯಾಯಾಮ, ಬಹಳ ಕೆಲಸಮಾಡೋಣ, ಧಾತುಕ್ಷಯಗಳಿಂದ, ಚಿಂತೆ ಶೋಕರೋಗಗಳಿಂದ, ಬಹಳ ಕೃಶತ್ವ ಬರುವದರಿಂದ ||೧೪|| ವೇಗಧಾರಣದಿಂದ, ಆಮದಿಂದ, ಹೊಡೆತದಿಂದ, ಉಪವಾಸದಿಂದ,ಮರ್ಮಕ್ಕೆ ಪೆಟ್ಟು ಬಡಿಯುವದರಿಂದ, ಆನೆ, ಒಂಟೆ, ಕುದುರೆ, ಅಥವಾ ಬೇರೆ ಓಡುವ ವಾಹನಗಳ ಮೇಲಿಂದ ಬೀಳುವದರಿಂದ||೧೫|| ದೇಹದಲ್ಲಿ ತೆರವಾದ ಸ್ರೋತಸ್ಸುಗಳನ್ನು ಪ್ರಬಲವಾದ ವಾಯುವು ಸೇರಿ ಶರೀರದ ಎಲ್ಲ ಅವಯವಗಳಲ್ಲಿ ಅಥವಾ ಒಂದೊಂದೇ ಅವಯವಗಳಲ್ಲಿ ಅನೇಕ ರೋಗಗಳನ್ನುಂಟುಮಾಡುತ್ತದೆ ||೧೬|| ಅಸ್ಪಷ್ಟ ಲಕ್ಷಣ ವಾತದ ಪೂರ್ವರೂಪ. ಸ್ಪಷ್ಟಲಕ್ಷಣಸ್ವರೂಪ. ಶರೀರಕ್ಕೆ ಹಗುರತನ ಬರುವದು ರೋಗನಾಶವಾದ ಚಿಹ್ನವು. ||೧೭|| ಕುಪಿತವಾದ ವಾಯುವು ಸಂಧಿಗಳ ಸಂಕೋಚ, ಅವು ಶಟೆಯೋಣ, ಎಲವು ಮತ್ತು ಸಂಧಿಗಳಲ್ಲಿ ಚುಚ್ಚಿದಂತೆ ನೋವು, ರೋಮಾಂಚ, ಬಡಬಡಿಸೋಣ, ಕೈ ಕಾಲು ತಲೆಗಳು ಹಿಡಿಯೋಣ ||೧೮|| ಕುಂಟೋಣ, ಎರಡೂ ಕಾಲು ಹೋಗೋಣ, ಗೂನು ಆಗೋಣ, ಅವಯವಗಳು ಒಣಗೋಣ, ನಿದ್ರೆಬಾರದಿರೋಣ, ಗರ್ಭಶುಕ್ರ ಆರ್ತವಗಳ ನಾಶ, ಎದೆಹಾರೋಣ, ಸ್ಪರ್ಶಜ್ಞಾನಶೂನ್ಯತೆ, ||೧೯|| ತಲೆ, ಮೂಗು, ಕಣ್ಣು, ಜತ್ರು ಕುತ್ತಿಗೆಗಳಲ್ಲಿ ವಿಕೃತಿ, ಚುಚ್ಚಿದಂತೆ, ಸೀಳಿದಂತೆ ಅನಿಸೋಣ, ನೋವು, ಜಗ್ಗೋಣ, ಮೋಹ, ಆಯಾಸ || ೨೦ || ಇವುಗಳನ್ನು ಇಂಥ ಬೇರೆ ಲಕ್ಷಣಗಳನ್ನು ಉಂಟುಮಾಡುತ್ತದೆ. ಬೇರೆ ಬೇರೆ ಕಾರಣ ಸ್ಥಾನಗಳನ್ನು ಹೊಂದಿ ತರತರದ ರೋಗ

ಗಳನ್ನು ಉಂಟುಮಾಡುತ್ತದೆ.

ಬೇರೆ ಬೇರೆ ಸ್ಥಾನಗಳಲ್ಲಿ ವಾಯುವು ಕುಪಿತವಾದರೆ ಉಂಟಾಗುವ ಲಕ್ಷಣ ಗಳನ್ನು ಹೇಳುತ್ತಾರೆ—

ತತ್ರ ಕೋಷ್ಠಾಶ್ರಿತೇ ದುಷ್ಟೇ ನಿಗ್ರಹೋ ಮೂತ್ರವರ್ಚಸೋಃ ॥
ಬ್ರಧ್ನಹೃದ್ರೋಗಗುಲ್ಮಾರ್ಶಃಪಾರ್ಶ್ವಶೂಲಂ ಚ ಮಾರುತೇ ॥ ೨೨ ॥

ಸರ್ವಾಂಗಕುಪಿತೇ ವಾತೇ ಗಾತ್ರಸ್ಫುರಣಭಂಜನೇ ॥
ವೇದನಾಭಿಃ ಪರೀತಸ್ಯ ಸ್ಫುಟಂತೀವಾಸ್ಯ ಸಂಧಯಃ ॥ ೨೩ ॥

ಗ್ರಹೋ ವಿಣ್ಮೂತ್ರವಾತಾನಾಂ ಶೂಲಾಧ್ಮಾನಾಶ್ಮಶರ್ಕರಾಃ ॥
ಜಂಘೋರುತ್ರಿಕಪಾತ್ ಪೃಷ್ಠರೋಗಶೋಥೌ ಗುದೇ ಸ್ಥಿತೇ ॥ ೨೪ ॥

ರುಕ್ ಪಾರ್ಶ್ವೋದರಹೃನ್ನಾಭೇಸ್ತೃಷ್ಣೋದ್ಗಾರವಿಸೂಚಿಕಾಃ ॥
ಕಾಸಃ ಕಂಠಾಸ್ಯಶೋಷಶ್ಚ ಶ್ವಾಸಶ್ಚಾಮಾಶಯಸ್ಥಿತೇ ॥ ೨೫ ॥

ಪಕ್ವಾಶಯಸ್ಥೋಽಂತ್ರಕೂಜಂ ಶೂಲಾಟೋಪೌ ಕರೋತಿ ಚ ॥
ಕೃಚ್ಛ್ರಮೂತ್ರ ಪುರೀಷತ್ವಮಾನಾಹಂ ತ್ರಿಕವೇದನಾಮ್ ॥ ೨೬ ॥

ಶ್ರೋತ್ರಾದಿಷ್ವಿಂದ್ರಿಯವಧಂ ಕುರ್ಯಾತ್ ಕ್ರುದ್ಧಃ ಸಮೀರಣಃ ॥
ತ್ವಗ್ರೂಕ್ಷಾ ಸ್ಫುಟಿತಾ ಸುಪ್ತಾ ಕೃಶಾ ಕೃಷ್ಣಾ ಚ ತುದ್ಯತೇ ॥ ೨೭ ॥

ಆತನ್ಯತೇ ಸರಾಗಾ ಚ ಪರ್ವರುಕ್ ತ್ವಗ್ ತೇಽನಿಲೇ ॥
ರುಜಸ್ತೀವ್ರಾಃ ಸಸಂತಾಪಾ ವೈವರ್ಣ್ಯಂ ಕೃಶತಾಽರುಚಿಃ ॥ ೨೮ ॥

ಗಾತ್ರೇ ಚಾರೂಂಷಿ ಭುಕ್ತಸ್ಯ ಸ್ತಂಭಶ್ಚಾಸೃಗ್ಗತೇಽನಿಲೇ ॥
ಗುರ್ವಂಗಂ ತುದ್ಯತೇ ಸ್ತಬ್ಧಂ ದಂಡಮುಷ್ಟಿಹತಂ ಯಥಾ ॥ ೨೯ ॥

ಸರುಕ್‌ಸ್ತಿಮಿತಮತ್ಯರ್ಥಂ ಮಾಂಸಮೇದೋಗತೇಽನಿಲೇ ॥
ಭೇದೋಽಸ್ಥಿ ಪರ್ವಣಾಂ ಸಂಧಿ-ಶೂಲಂ ಮಾಂಸಬಲಕ್ಷಯಃ ॥ ೩೦ ॥
ಅಸ್ವಪ್ನಃ ಸಂತತಾ ರುಕ್ ಚ ಮಜ್ಜಾಸ್ಥಿಕುಪಿತೇಽನಿಲೇ ॥
ಕ್ಷಿಪ್ರಂ ಮುಂಚತಿ ಬಧ್ನಾತಿ ಶುಕ್ರಂ ಗರ್ಭಮಥಾಪಿವಾ ॥ ೩೧ ॥

ವಿಕೃತಿಂ ಜನಯೇಚ್ಚಾಪಿ ಶುಕ್ರಸ್ಥಃ ಕುಪಿತೋಽನಿಲಃ ॥
ಬಾಹ್ಯಾಭ್ಯಂತರಮಾಯಾಮಂ ಖಲ್ಲೀಂ ಕುಬ್ಜತ್ವಮೇವ ಚ ॥ ೩೨ ॥

ಸರ್ವಾಂಗೈಕಾಂಗರೋಗಾಂಶ್ಚ ಕುರ್ಯಾತ್ ಸ್ನಾಯುಗತೋಽನಿಲಃ ॥
ಶರೀರಂ ಮಂದರುಕ್‌ಶೋಥಂ ಶುಷ್ಯತಿ ಸ್ಪಂದತೇ ತಥಾ ॥ ೩೩ ॥

**ಸುಪ್ತಾಸ್ಸನ್ನ್ಯೋ ಮಹತ್ಯೋ ವಾ ಸಿರಾ ವಾತೇ ಸಿರಾಗತೇ**
**ವಾತಪೂರ್ಣದೃತಿಸ್ಪರ್ಶಃ ಶೋಥಃ ಸಂಧಿಗತೇಽನಿಲೇ ॥ ೩೪ ॥**
**ಪ್ರಸಾರಣಾಕುಂಚನಯೋಃ ಅಪ್ರವೃತ್ತಿಃ ಸವೇದನಾ ॥**
**ಇತ್ಯುಕ್ತಂ ಸ್ಥಾನಭೇದೇನ ವಾಯೋರ್ಲಕ್ಷಣಮೇವ ಚ ॥ ೩೫ ॥**

**ಅರ್ಥ—** ಕೋಷ್ಠದಲ್ಲಿ ವಾಯುವು ಕುಪಿತವಾಗಲು ಮಲ ಮೂತ್ರ ಗಳ ಪ್ರತಿಬಂಧ, ಬ್ರಧ್ನ ಹೃದ್ರೋಗ ಗುಲ್ಮ ಮೂಲವ್ಯಾಧಿ, ಪಾರ್ಶ್ವಶೂಲ, ಇವುಗಳುಂಟಾಗುತ್ತವೆ. ॥೨೨॥ ಸರ್ವಾಂಗದಲ್ಲಿ ಕುಪಿತವಾಗಲು ಅವಯವ ಗಳಲ್ಲಿ ಸ್ಫುರಣ, ಮುರಿದಂತೆ ಅನಿಸುವದು. ನೋವು ಉಂಟಾಗುವದು, ಸಂಧಿ ಗಳು ಒಡೆದಂತೆ ಅನಿಸುವದು ॥೨೩॥ **ಗುದದಲ್ಲಿ** ವಾತವು ಕುಪಿತವಾದರೆ ಮಲಮೂತ್ರಗಳ ಪ್ರತಿಬಂಧ, ಶೂಲ, ಹೊಟ್ಟೆಯುಬ್ಬು. ಮೂತ್ರಾಶ್ಮರಿ, ಮೂತ್ರಶರ್ಕರ, ಮೊಣಕಾಲು, ತೊಡೆ, ತಿಗ, ಬೆನ್ನುಗಳಲ್ಲಿ ನೋವು ಮತ್ತು ಬಾವುಗಳುಂಟಾಗುವವು. ॥೨೪॥ **ಆಮಾಶ**ಯದಲ್ಲಿ ಕುಪಿತವಾಗಲು ಪಾರ್ಶ್ವ, ಹೊಟ್ಟೆ, ಹೃದಯ, ಹೊಕ್ಕಳುಗಳಲ್ಲಿ ನೋವು, ನೀರಡಿಕೆ, ತೇಗು, ವಿಷೂಚಿಕೆ, ಕೆಮ್ಮು, ಕಂಠರೋಗ, ಮುಖರೋಗ, ಶ್ವಾಸಗಳುಂಟಾಗುವವು. ॥೨೫॥ **ಪಕ್ವಾಶಯ**ದಲ್ಲಿ ಕುಪಿತವಾದರೆ ಕರುಳಿನಲ್ಲಿ ಧ್ವನಿ, ಶೂಲ, ಗುಡುಗುಡು ಶಬ್ದವಾಗುವದು, ಮಲಮೂತ್ರಗಳಾಗುವಾಗ ತ್ರಾಸವಾಗುವದು, ಹೊಟ್ಟೆ ಯುಬ್ಬುವದು, ತಿಗದಲ್ಲಿ ನೋವುಂಟಾಗುವದು ॥೨೬॥ **ಕಿವಿ ಮುಂತಾದ ಇಂದ್ರಿಯ**ಗಳಲ್ಲಿ ಕುಪಿತವಾದರೆ ಆಯಾ ಇಂದ್ರಿಯಗಳ ಶಕ್ತಿಯು ಹೋಗು ವದು. ತ್ವಚೆಯಲ್ಲಿ ಕುಪಿತವಾದರೆ ತ್ವಚೆಯು ಖುಕ್ಷವಾಗುವದು; ಒಡೆಯು ವದು; ಸ್ಪರ್ಶಜ್ಞಾನರಹಿತವಾಗುವದು; ಕೃಶ ಮತ್ತು ಕಪ್ಪು ಆಗುವದು ಮತ್ತು ನೋಯುವದು ॥೨೭॥ ಬಿರಿದಂತೆ ಆಗುವದು; ನಸುಗೆಂಪಾಗುವದು; ಸಂಧಿ ಗಳು ನೋಯುವದು. **ರಕ್ತದಲ್ಲಿ ವಾತವು** ಕುಪಿತವಾಗಲು ಬಹಳ ನೋವು ದಾಹ, ವಿವರ್ಣತೆ, ಕೃಶತಾ, ಅರುಚಿ ॥೨೮॥ ಮೈಮೇಲೆ ಬಕ್ಕೆ, ತಿಂದ ಅನ್ನವು ಹೊಟ್ಟೆಯಲ್ಲಿ ಹಾಗೆ ಉಳಿಯೋಣ ಆಗುತ್ತದೆ. **ಮಾಂಸ** ಮತ್ತು **ಮೇದ** ದಲ್ಲಿಯ ವಾತವು ಕುಪಿತವಾಗಲು ಶರೀರವು ಜಡ, ಸ್ತಬ್ಧ, ಶೂಲಯುಕ್ತ, ಬಡಿಗೆಯಿಂದ ಅಥವಾ ಮುಷ್ಟಿಯಿಂದ ಹೊಡೆದಂತೆ ನೋವುಳ್ಳದ್ದು ॥೨೯॥ ಮತ್ತು ಬಹಳ ಸ್ತಿಮಿತವಾಗುವದು. **ಮಜ್ಜ ಅಸ್ಥಿ**ಗಳಲ್ಲಿ ವಾಯುವು ಕುಪಿತವಾದರೆ ಎಲಬು ಮತ್ತು ಸಂಧಿಗಳಲ್ಲಿ ಚುಚ್ಚಿದಂತೆ ಆಗುವದು. ಸಂಧಿ ಶೂಲ, ಮಾಂಸ ಮತ್ತು ಬಲಗಳ ನಾಶ ॥೩೦॥ ನಿದ್ರೆಬಾರದಿರೋಣ,

ಯಾವಾಗಲೂ ನೋವು ಇವು ಇರುವವು. **ಶುಕ್ರದಲ್ಲಿ ವಾಯುವು** ಕುಪಿತ ವಾದರೆ ಶುಕ್ರವನ್ನು ತೀವ್ರಬಿಡುವದು, ಗರ್ಭಪಾತವಾಗುವದು. ಅಥವಾ ಶುಕ್ರ ಗರ್ಭಗಳಿಗೆ ಪ್ರತಿಬಂಧ ||೩೧|| ಅಥವಾ ವಿಕೃತಿಯಾಗುವದು. **ಸ್ನಾಯುವಿನಲ್ಲಿಯು** ವಾಯುವು ಕುಪಿತವಾಗಲು ಅದು ಬಾಹ್ಯಾಯಾಮ ಅಂತರಾಯಾಮ, ಖಲ್ಲೀಗೂಸು ||೩೨|| ಸರ್ವಾಂಗರೋಗ, ಏಕಾಂಗರೋಗ ಗಳನ್ನು ಉಂಟು ಮಾಡುವದು. ಶಿರೆಯಲ್ಲಿದ್ದ ವಾತವು ಕುಪಿತವಾಗಲು, ಶರೀರದಲ್ಲಿ ಸ್ವಲ್ಪ ನೋವು ಬಾವು, ಶೋಷ, ಸ್ಪಂದನಗಳು ಇರುತ್ತವೆ. ||೩೩|| ಶಿರೆಗಳ ಸ್ಪರ್ಶಜ್ಞಾನವು ನಷ್ಟವಾಗಿ ಅವು ಕೃಶ ಅಥವಾ ಸ್ಥೂಲವಾಗುವವು. **ಸಂಧಿಗತ ವಾಯುವು** ಕುಪಿತವಾಗಲು ಗಾಳಿಯಿಂದ ತುಂಬಿದ ಪಕಾಲಿ ಯಂತೆ ಕೈಗೆ ಹತ್ತುವದು, ಬಾವು ||೩೪|| ಪ್ರಸಾರಣ ಆಕುಂಚನ ಇವು ಆಗ ದಿರೋಣ ವೇದನೆಗಳು ಉಂಟಾಗುವವು. ಈ ಪ್ರಕಾರ ಬೇರೆ ಬೇರೆ ಸ್ಥಾನ ಗಳಲ್ಲಿ ಕುಪಿತವಾದ ವಾಯುವಿನ ಲಕ್ಷಣಗಳು ಹೇಳಲ್ಪಟ್ಟವು. ||೩೫||

ಅರ್ದಿತ ರೋಗವನ್ನು ಹೇಳುತ್ತಾರೆ.

**ಅತಿವೃದ್ಧಃ ಶರೀರಾರ್ಧಮೇಕಂ ವಾಯುಃ ಪ್ರಪದ್ಯತೇ ||**
**ಯದಾ ತದೋಪಶೋಷ್ಯಾಸೃಕ್ ಬಾಹುಂ ಪಾದಂ ಚ ಜಾನು ಚ ||೩೬||**

**ತಸ್ಮಿನ್ ಸಂಕೋಚಯತ್ಯರ್ಧೇ ಮುಖಂ ಜಿಹ್ವಂ ಕರೋತಿ ಚ ||**
**ವಕ್ರೀಕರೋತಿ ನಾಸಾಭ್ರೂ ಲಲಾಟಾಕ್ಷಿ ಹನೂಸ್ತಥಾ ||೩೭||**

**ತದಾ ವಕ್ರಂ ವ್ರಜತ್ಯಾಸ್ಯೇ ಭೋಜನಂ ವಕ್ರನಾಸಿಕಮ್ ||**
**ಸ್ತಬ್ಧಂ ನೇತ್ರಂ ಕಥಯತಃ ಕ್ಷವಥುಶ್ಚ ನಿಗೃಹ್ಯತೇ ||೩೮||**

**ದೀನಾ ಜಿಹ್ವಾ ಸಮುತ್ಕ್ಷಿಪ್ತಾಽಬಲಾ ಸಜ್ಜತಿ ಚಾಸ್ಯವಾಕ್ ||**
**ದಂತಾಶ್ಚಲಂತಿ ಬಧ್ಯೇತೇ ಶ್ರವಣೇ ಭಿದ್ಯತೇ ಸ್ವರಃ ||೩೯||**

**ಪಾದಹಸ್ತಾಕ್ಷಿಜಂಘೋರುಶಂಖಶ್ರವಣಗಂಡರುಕ್ ||**
**ಅರ್ಧೇ ತಸ್ಮಿನ್ ಮುಖಾರ್ಧೇ ವಾ ಕೇವಲೇ ಸ್ಯಾತ್ ತದರ್ದಿತಮ್ ||೪೦||**

**ಅರ್ಥ—** ವಾತವು ಬಹಳ ಹೆಚ್ಚಾಗಿ ಶರೀರದ ಒಂದು ಅರ್ಧಭಾಗ ವನ್ನು ಸೇರಿದರೆ, ಆಗ್ಗೆ ಅದು ರಕ್ತವನ್ನೂ ಕೈಕಾಲು ಮೊಣಕಾಲುಗಳನ್ನೂ

ಒಣಗಿಸಿ || ೩೬ || ಆ ಅರ್ಧಭಾಗದಲ್ಲಿಯ ಮುಖವನ್ನು ಡೊಂಕ ಮಾಡು ವದು. ಮೂಗು, ಹುಬ್ಬು, ಹಣೆ, ಕಣ್ಣುಗಳನ್ನು ವಕ್ರ ಮಾಡುವದು. || ೩೭ || ಆಗ್ಗೆ ಬಾಯಿಯಲ್ಲಿ ಹಾಕಿದ ಅನ್ನವು ಡೊಂಕಾಗಿ ಹೋಗುವದು. ಆಗ ಮೂಗು ಡೊಂಕಾಗುವದು. ಮಾತಾಡುವಾಗ ಕಣ್ಣು ಸ್ತಬ್ಧವಾಗಿ ನಿಲ್ಲುವವು. ಸೀನಿಗೆ ಪ್ರತಿಬಂಧವಾಗುವದು. || ೩೮ || ನಾಲಿಗೆಯು ಸ್ತಬ್ಧ, ವಕ್ರ, ಅಶಕ್ತ ಆಗಿ ಮುಂದೆ ಬರುವದು. ಮಾತು ನೆಟ್ಟಗೆ ಹೊರಡುವದಿಲ್ಲ. ಹಲ್ಲುಗಳು ಅಗಳಾಡುವವು. ಕಿವಿಗಳು ಕೇಳಿಸವು. ಧ್ವನಿಯು ಬೀಳುವದು. ||೩೯|| ಕೈ-ಕಾಲು-ಕಣ್ಣು-ಮೊಣಕಾಲು-ತೊಡೆ-ಶಂಖ-ಕಿವಿ-ಕಪಾಲಗಳಲ್ಲಿ ನೋವು ಇರುವದು. ಇದು ಶರೀರದ ಅಥವಾ ಮುಖದ ಅರ್ಧ ಭಾಗದಲ್ಲಿ ಇರುವದು. ಇದು ಅರ್ದಿತ ರೋಗವು. || ೪೦ ||

ಅಂತರಾಯಾಮ ಲಕ್ಷಣವನ್ನು ಹೇಳುತ್ತಾರೆ—

**ಮನ್ಯೇ ಸಂಸ್ರಿತ್ಯ ವಾತೋಽಂತರ್ಯದಾ ನಾಡೀಃ ಪ್ರಪದ್ಯತೇ ||**
**ಮನ್ಯಾಸ್ತಂಭಂ ತದಾ ಕುರ್ಯಾದಂತರಾಯಾಮಸಂಜ್ಞಕಮ್ ||೪೧||**

**ಅಂತರಾಯಮ್ಯತೇ ಗ್ರೀವಾ ಮನ್ಯಾ ಚ ಸ್ತಭ್ಯತೇ ಭೃಶಮ್ ||**
**ದಂತಾನಾಂ ದಂಶನಂ ಲಾಲಾ ಪೃಷ್ಠಾಕ್ಷೇಪಃ ಶಿರೋಗ್ರಹಃ ||೪೨||**

**ಜೃಂಭಾ ವದನಸಂಗಶ್ಚಾಪ್ಯಂತರಾಯಾಮ ಲಕ್ಷಣಮ್ ||**
**ಇತ್ಯುಕ್ತಸ್ತ್ವಂತರಾಯಾಮಃ...**
**.........ಬಹಿರಾಯಾಮ ಉಚ್ಯತೇ ||೪೩||**

**ಪೃಷ್ಠಮನ್ಯಾಶ್ರಿತಾ ಬಾಹ್ಯಾಃ ಶೋಷಯಿತ್ವಾ ಶಿರಾ ಬಲೀ ||**
**ತತಃ ಕುರ್ಯಾದ್ಧನುಸ್ತಂಭಃ ಬಹಿರಾಯಾಮಸಂಜ್ಞಕಮ್ ||೪೪||**

**ಚಾಪವನ್ನಾಮ್ಯಮಾನಸ್ಯ ಪೃಷ್ಠತೋ ನೀಯತೇ ಶಿರಃ ||**
**ಉರ ಉತ್‌ಕ್ಷಿಪ್ಯತೇ ಮನ್ಯೇ ಸ್ತಬ್ಧೇ ಗ್ರೀವಾಚ ಮೃದ್ಯತೇ ||೪೫||**

**ದಂತಾನಾಂ ದಂಶನಂ ಜೃಂಭಾ ಲಾಲಾಸ್ರಾವಶ್ಚ ವಾಗ್‌ಗ್ರಹಃ ||**
**ಜಾತವೇಗೋ ನಿಹಂತ್ಯೇಷ ವೈಕಲ್ಯಂ ವಾ ಪ್ರಯಚ್ಛತಿ ||೪೬||**

ಅರ್ಥ— ವಾತವು ಎರಡೂ ಹೆಡಕುಗಳನ್ನು ಆಶ್ರಯಿಸಿ ನಾಡಿಗಳೊಡನೆ ಸೇರುತ್ತದೆ. ಆಗ 'ಅಂತರಾಯಾಮ' ಎಂಬ ಮನ್ಯಾಸ್ತಂಭವನ್ನು ಉಂಟುಮಾಡುತ್ತದೆ. ||೪೧|| ಗೋಣು ಒಳಗೆ ಜಗ್ಗಲ್ಪಡುವದು. ಹೆಡಕು

ಬಹಳ ಸ್ತಬ್ಧವಾಗುವದು. ಹಲ್ಲು ಗಡಿಕೂಡುವದು. ಜೊಲ್ಲು ಸುರಿಯುವದು. ಬೆನ್ನು ಮಣಿಯುವದು. ತಲೆ ಹಿಡಿಯುವದು. ||೪೨|| ಆಕಳಿಕೆ ಬರುವದು. ಬಾಯಿ ಆಡಿಸಲು ಬಾರದು. ಇದು ಅಂತರಾಯಾಮದ ಲಕ್ಷಣವು. ಇಲ್ಲಿಯ ವರೆಗೆ ಅಂತರಾಯಾಮವು ಹೇಳಲ್ಪಟ್ಟಿತು. ಇನ್ನುಮೇಲೆ ಬಹಿರಾಯಾಮವು ಹೇಳಲ್ಪಡುತ್ತದೆ. ||೪೩|| ಬಲಿಷ್ಠವಾದ ವಾತವು ಬೆನ್ನು ಹೆಡಕುಗಳಲ್ಲಿರುವ ಬಾಹ್ಯ ಶಿರೆಗಳನ್ನು ಒಣಗಿಸಿ ' ಬಹಿರಾಯಾಮ ' ಎಂಬ ಹೆಸರಿನ ಧನುಸ್ತಂಭ ವನ್ನುಂಟುಮಾಡುತ್ತದೆ. ||೪೪|| ಆತನು ಬಿಲ್ಲಿನಂತೆ ಮಣಿಯುವನು. ತಲೆಯು ಹಿಂದೆ ಹೋಗುವದು. ಎದೆಯು ಮುಂದೆ ಬರುವದು. ಹೆಡಕುಗಳು ಸ್ತಬ್ಧ ವಾಗುವವು. ' ಕುತ್ತಿಗೆಯು ಒತ್ತಲ್ಪಡುವದು. ||೪೫|| ಹಲ್ಲು ಕಡಿಯುವದು. ಆಕಳಿಸುವದು. ಜೊಲ್ಲು ಸುರಿಯುವದು. ಮಾತಾಡಲು ಬಾರದು. ತೇಗು ಬಂದಕೂಡಲೇ ಇವರಲ್ಲಿ ರೋಗಿಯು ಸಾಯುವನು ಅಥವಾ ವ್ಯಂಗ ಆಗುವನು. ||೪೬||

ಹನುಗ್ರಹದ ಲಕ್ಷಣವನ್ನು ಹೇಳುತ್ತಾರೆ—

**ಹನುಮೂಲೇ ಸ್ಥಿತೋ ಬಂಧಾತೆ ಸಂಸ್ರಯಂತ್ಯನಿಲೋಹನೂ ||**
**ವಿವೃತಾಸ್ಯತ್ವಮಥವಾ ಕುರ್ಯಾತ್ ಸ್ತಬ್ಧಮವೇದನಮ್ || ೪೭ ||**
**ಹನುಗ್ರಹಂ ಚ ಸಂಸ್ತಭ್ಯ ಹನೂಸಂವೃತವಕ್ತ್ರತಾಮ್ || ೪೭|| ||**

**ಅರ್ಥ—** ಹನುವಿನ ಮೂಲದಲ್ಲಿರುವ ವಾಯುವು ಹನುಗಳನ್ನು ಸಂಧಿ ತಪ್ಪಿಸುವದು. ಆಗ ಬಾಯಿಯು ತೆರದೇ ನಿಲ್ಲುವದು. ಅಥವಾ ಹನುಸ್ತಬ್ಧ ಮಾಡುವದು. ಅದರಿಂದ ಬಾಯಿಯು ಮುಚ್ಚಿಯೇ ಬಿಡುವದು. ಇದರಲ್ಲಿ ಸ್ತಬ್ಧತೆಯಿದ್ದರೂ ನೋವು ಇರುವದಿಲ್ಲ. ಈ ಎರಡಕ್ಕೂ ಹನುಗ್ರಹವೆಂಬ ಹೆಸರು. || ೪೭|| ||

ಆಕ್ಷೇಪಕವನ್ನು ಹೇಳುತ್ತಾರೆ—

**ಮುಹುರ್ಮುಹುಶ್ಚಾಕ್ಷಿಪತಿ ಗಾತ್ರಾಣ್ಯಾಕ್ಷೇಪಕೋಽನಿಲಃ ||೪೮||**
**ಪಾಣಿಪಾದೌ ಚ ಸಂಶೋಷ್ಯ ಸಶಿರಾಃ ಸ್ನಾಯುಕಂಡರಾಃ ||೪೮|| ||**

**ಅರ್ಥ—** ಕುಪಿತ ವಾಯುವು ಕೈಕಾಲು, ಸಿರೆ ಸ್ನಾಯು ಕಂಡರೆಗಳನ್ನು ಒಣಗಿಸಿ, ಆಗಾಗ್ಗೆ ಎತ್ತೆತ್ತಿ ಹಾಕುವದು. ಅದು ಆಕ್ಷೇಪಕ ರೋಗವು || ೪೮||

ದಂಡಕವನ್ನು ಹೇಳುತ್ತಾರೆ.

**ಪಾಣಿಪಾದಶಿರಃಪೃಷ್ಠಶ್ರೋಣೀಃ ಸ್ತಭ್ನಾತಿ ಮಾರುತಃ ||೪೯||**
**ದಂಡವತ್ ಸ್ತಬ್ಧಗಾತ್ರಸ್ಯ ದಂಡಕಃ ಸೋಽನುಪಕ್ರಮಃ ||**
**ಸ್ವಸ್ಥಃ ಸ್ಯಾದರ್ದಿತಾದೀನಾಂ ಮುಹುರ್ವೇಗೇ ಗತೇಽಗತೇ ||೫೦||**
**ಪೀಡ್ಯತೇ ಪೀಡನೈಸ್ತೈಸ್ತೈರ್ಭಿಷಗೇತಾನ್ ವಿವರ್ಜಯೇತ್ ||**

**ಅರ್ಥ—** ವಾತವು ಕೈಕಾಲು ತಲೆ ಬೆನ್ನು ತಿಗಗಳನ್ನು ಸ್ತಬ್ಧಗೊಳಿಸುವದು. || ೪೯ || ಆಗ್ಗೆ ಶರೀರವು ದಂಡದಂತೆ ಸ್ತಬ್ಧವಾಗಿ ಬೀಳುವದು ಇದು ದಂಡಕರೋಗವು. ಇದು ಅಸಾಧ್ಯವಾಗಿದೆ. ಇದಕ್ಕೇ ಬೇರೆ ತಂತ್ರಗಳಲ್ಲಿ ದಂಡಾವತಾನಕ ಎನ್ನುವರು. ಅರ್ದಿತ ಮುಂತಾದವುಗಳಲ್ಲಿ ವೇಗವು ಹೋಗಲು ಸ್ವಾಸ್ಥ್ಯವುಂಟಾಗುತ್ತದೆ. || ೫೦ || ವೇಗವು ಇರಲು ಅನೇಕ ತರದ ಪೀಡೆಗಳುಂಟಾಗುತ್ತವೆ. ಈ ರೋಗಗಳು ಅಸಾಧ್ಯವಾಗಿವೆ. || ೫೦|| ||

ಪಕ್ಷವಧವನ್ನು ಹೇಳುತ್ತಾರೆ.

**ಹತ್ವೈಕಂ ಮಾರುತಂ ಪಕ್ಷಂ ದಕ್ಷಿಣಂ ವಾಮಮೇವ ವಾ ||೫೧||**
**ಕರೋತಿ ಚೇಷ್ಟಾನಿರತಿಂ ರುಜಂ ವಾಕ್‌ಸ್ತಂಭಮೇವ ಚ ||**

**ಅರ್ಥ—** ವಾಯುವು ಬಲ ಅಥವಾ ಎಡಭಾಗವನ್ನು ನಾಶಮಾಡಿ ||೫೧|| ಅಗಳಾಡದಂತೆ ಮಾತಾಡದಂತೆ ಮಾಡುತ್ತದೆ. ನೋವು ಇರುವದು ಮಾತು ನಿಲ್ಲುವದು ಇದು ಪಕ್ಷವಧವು ||೫೧|| ||

ಏಕಾಂಗರೋಗವನ್ನು ಹೇಳುತ್ತಾರೆ.

**ಗೃಹೀತ್ವಾರ್ಧಂ ಶರೀರಸ್ಯ ಸಿರಾಃ ಸ್ನಾಯುರ್ವಿಶೋಷ್ಯ ಚ ||೫೨||**
**ಪಾದಂ ಸಂಕೋಚಯತ್ಯೇಕಂ ಹಸ್ತಂ ವಾ ತೋದಶೂಲಕೃತ್ ||**
**ಏಕಾಂಗರೋಗಂ ತಂ ವಿದ್ಯಾತ್ ಪವನಾತ್ ಕುಶಲೋ ಭಿಷಕ್ ||೫೩||**

**ಅರ್ಥ—** ವಾಯುವು ಶರೀರದ ಅರ್ಧಭಾಗವನ್ನು ಹಿಡಿದುಕೊಂಡು ಶಿರೆಸ್ನಾಯುಗಳನ್ನು ಒಣಗಿಸಿ ||೫೨|| ಚುಚ್ಚುವಿಕೆ, ಶೂಲಗಳನ್ನುಂಟುಮಾಡುತ್ತ ಒಂದು ಕಾಲನ್ನು ಅಥವಾ ಕೈಯನ್ನು ಸಂಕೋಚಗೊಳಿಸುವದು.

ನೋವು ಶೂಲಗಳಿರುವವು. ಕುಶಲನಾದ ವೈದ್ಯನು ಇದನ್ನು ವಾತದಿಂದುಂಟಾದ ಏಕಾಂಗರೋಗವೆಂದು ತಿಳಿಯತಕ್ಕದ್ದು. ||೫೩||

ಸರ್ವಾಂಗರೋಗವನ್ನು ಹೇಳುತ್ತಾರೆ—

**ಸರ್ವಾಂಗರೋಗಂ ತದ್ವಚ್ಚ ಸರ್ವದೇಹಾನುಗೇಽನಿಲೇ ||**

**ಅರ್ಥ—** ಇದರಂತೆ ಎಲ್ಲ ಶರೀರವನ್ನು ಹಿಡಿದುಕೊಂಡು ಶಿರಸ್ನಾಯುಗಳನ್ನು ಒಣಗಿಸಿ, ಎರಡೂ ಕೈ ಅಥವಾ ಎರಡೂ ಕಾಲುಗಳನ್ನು ಸಂಕೋಚಗೊಳಿಸಿದರೆ ಸರ್ವಾಂಗರೋಗವೆಂದು ತಿಳಿಯಬೇಕು. || ೫೩|| ||

ಗೃಧ್ರಸಿಗಳನ್ನು ಹೇಳುತ್ತಾರೆ—

**ಸ್ಫಿಕ್‌ಪೂರ್ವಾ ಕಟಿಪೃಷ್ಠೋರುಜಾನುಜಂಘಾಪದಂ ಕ್ರಮಾತ್ ||೫೪||**
**ಗೃಧ್ರಸೀ ಸ್ತಂಭರುಕ್‌ತೋದೈರ್ಗೃಹ್ಣಾತಿ ಸ್ಪಂದತೇ ಮುಹುಃ ||**
**ವಾತಾದ್ ವಾತಕಫಾತ್ ತಂದ್ರಾ ಗೌರವಾರೋಚಕಾನ್ವಿತಾ ||೫೫||**

**ಅರ್ಥ—** ವಾಯುವು ಮೊದಲು ತಿಗದಲ್ಲಿ ಸ್ತಬ್ಧತೆ, ನೋವು, ಚುಚ್ಚುವಿಕೆಗಳನ್ನುಂಟುಮಾಡಿ, ಆಮೇಲೆ ಅವನ್ನು ಟೊಂಕ–ಬೆನ್ನು–ತೊಡಿ ಮೊಳಕಾಲು–ಪಿಂಡರಿಗಳಲ್ಲಿ ಕ್ರಮದಿಂದ ಉಂಟುಮಾಡುವದು.||೫೪|| ಮತ್ತು ಆವುಗಳಲ್ಲಿ ಆಗಾಗ ಸ್ಪಂದನವು ಆಗುವದು. ಇದಕ್ಕೆ 'ಗೃಧ್ರಸಿ' ಎಂಬ ಹೆಸರು. ಇದು ಕೇವಲ ವಾತದಿಂದ ಒಂದು, ಮತ್ತು ವಾತಕಫಗಳಿಂದ ಒಂದು ಹೀಗೆ ಎರಡು ತರದವಿರುತ್ತವೆ. ಹಿಂದೆ ಹೇಳಿದ ಲಕ್ಷಣಗಳು ಕೇವಲ ವಾತದ ಗೃಧ್ರಸಿಯಲ್ಲಿ ಇರುವವು. ವಾತಕಫದ ಗೃಧ್ರಸಿಯಲ್ಲಿ ಈ ಲಕ್ಷಣಗಳಲ್ಲದೆ ತಂದ್ರಾ, ಜಡತ್ವ, ಅರುಚಿಗಳೂ ಇರುವವು. ||೫೫||

ಖಲ್ಲೀರೋಗವನ್ನು ಹೇಳುತ್ತಾರೆ—

**ಖಲ್ಲೀ ತು ಪಾದಜಂಘೋರುಕರಮೂಲಾವಮೋಟನೀ || ೫೬|| ||**

**ಅರ್ಥ—** ಪಾದ, ಜಂಘೆ, ತೊಡೆ, ಕೈ ಇವುಗಳ ಮೂಲವನ್ನು ಒತ್ತಿದಂತೆ ಹಿಡಿಯುವದು ' ಖಲ್ಲೀ ' ಎಂಬ ರೋಗವು. ||೫೬|| ||

ಅನುಕ್ತ ವಾತರೋಗಗಳ ಲಕ್ಷಣಗಳನ್ನು ಹೇಳುತ್ತಾರೆ—

**ಸ್ಥಾನನಾಮಾನುರೂಪೈಃ ಸ್ವೈರ್ಲಿಂಗೈಃ ಶೇಷಾನ್ ವಿನಿರ್ದಿಶೇತ್ ||೫೬||**
**ಸರ್ವೇಷ್ವೇತೇಷು ಸಂಸರ್ಗಂ ಪಿತ್ತಾದ್ಯೈರುಪಲಕ್ಷಯೇತ್ ||**

**ಅರ್ಥ—** ಉಳಿದ ವಾತರೋಗಗಳಲ್ಲಿ ಅವುಗಳ ಸ್ಥಾನ ಮತ್ತು ಹೆಸರುಗಳಿಗೆ ಅನುರೂಪವಾದ ಲಕ್ಷಣಗಳು ಇರುತ್ತವೆ. ||೫೬|| ಈ ಎಲ್ಲ ರೋಗಗಳಲ್ಲಿ ಪಿತ್ತಕಫಾದಿಗಳ ಸಂಸರ್ಗವನ್ನು ಕಂಡು ಹಿಡಿಯಬೇಕು. || ೫೬|| ||

ವಾಯುವಿನ ಆವರಣದಿಂದುಂಟಾಗುವ ರೋಗಗಳನ್ನು ಹೇಳುತ್ತಾರೆ—

**ವಾಯೋರ್ಧಾತುಕ್ಷಯಾತ್ ಕೋಪೋ ಮಾರ್ಗಸ್ಯಾವರಣೇನ ಚ ||೫೭||**
**ವಾತಪಿತ್ತಕಫಾ ದೇಹೇ ಸರ್ವಸ್ರೋತೋಽನುಗಾಮಿನಃ ||**
**ವಾಯುರೇವ ಹಿ ಸೂಕ್ಷ್ಮತ್ವಾದ್ ದ್ವಯೋಸ್ತತ್ರಾಪ್ಯುದೀರಣಃ ||೫೮||**
**ಕುಪಿತಸ್ತೌ ಸಮುದ್ಧೂಯ ತತ್ರ ತತ್ರಾಕ್ಷಿಪನ್ ಗದಾನ್ ||**
**ಕರೋತ್ಯಾವೃತಮಾರ್ಗತ್ವಾದ್ ರಸಾದೀಂಶ್ಚೋಪಶೋಷಯೇತ್ ||೫೯||**

**ಅರ್ಥ—** ವಾಯುವು ಧಾತು ಕ್ಷಯದಿಂದಲೂ ಮಾರ್ಗದ ಆವರಣದಿಂದಲೂ ಕುಪಿತವಾಗುತ್ತದೆ. ||೫೭|| ವಾತ ಪಿತ್ತ ಕಫಗಳು ದೇಹದ ಎಲ್ಲ ಸ್ರೋತಸ್ಸುಗಳನ್ನು ವ್ಯಾಪಿಸಿರುತ್ತವೆ. ಆದರೆ ಅವುಗಳಲ್ಲಿ ವಾಯುವೇ — ಸೂಕ್ಷ್ಮವಿರುವದರಿಂದ — ಉಳಿದ ಎರಡೂ ದೋಷಗಳ ಪ್ರೇರಕವಾಗಿದೆ. ||೫೮|| ಕುಪಿತವಾದ ಅದು ಅವೆರಡನ್ನೂ ಅಲ್ಲಲ್ಲಿ ಚಲ್ಲುತ್ತ ಮಾರ್ಗವನ್ನು ಪ್ರತಿಬಂಧಿಸಿ ರೋಗವನ್ನುಂಟುಮಾಡುತ್ತದೆ. ಮಾರ್ಗವು ಬಂದಾಗುವದರಿಂದ ರಸಾದಿಧಾತುಗಳನ್ನು ಒಣಗಿಸುತ್ತದೆ. ||೫೯||

ಯಾತರಿಂದ ಆವೃತವಾಗಲು ಯಾವ ಲಕ್ಷಣವುಂಟಾಗುತ್ತವೆಯೆಂಬುದನ್ನು ಹೇಳುತ್ತಾರೆ—

**ಲಿಂಗಂ ಪಿತ್ತಾವೃತೇ ದಾಹಸ್ತೃಷ್ಣಾ ಶೂಲಂ ಭ್ರಮಃ ಕ್ಲಮಃ ||**
**ಕಟ್ವಮ್ಲಲವಣೋಷ್ಣೈಶ್ಚ ವಿದಾಹಃ ಶೀತಕಾಮಿತಾ ||೬೦||**

ಶೈತ್ಯಗೌರವಶೂಲಾನಿ ಕಟ್ವಾದ್ಯುಪರಯೋಽಧಿಕಮ್ ||
ಲಂಘನಾಯಾಸರೂಕ್ಷೋಷ್ಣಕಾಮತಾ ಚ ಕಫಾವೃತೇ ||೬೧||

ರಕ್ತಾವೃತೇ ಸದಾಹಾರ್ತಿಸ್ತ್ವಙ್ಮಾಂಸಾಂತರಯೋರ್ಭೃಶಮ್ ||
ಭವೇತ್ ಸರಾಗಃ ಶ್ವಯಥುರ್ಜಾಯಂತೇ ಮಂಡಲಾನಿ ಚ ||೬೨||

ಕಠಿನಾಶ್ಚ ವಿವರ್ಣಾಶ್ಚ ಪಿಡಕಾಃ ಶ್ವಯಥುಸ್ತಥಾ ||
ಹರ್ಷಃ ಪಿಪೀಲಿಕಾನಾಂ ಚ ಸಂಚಾರ ಇವ ಮಾಂಸಗೇ ||೬೩||

ಚಲಃ ಸ್ನಿಗ್ಧೋ ಮೃದುಃ ಶೀತಃ ಶೋಫೋಂಗೇಷ್ವರುಚಿಸ್ತಥಾ ||
ಆಢ್ಯವಾತ ಇತಿ ಜ್ಞೇಯಃ ಸ ಕೃಚ್ಛ್ರೋ ಮೇದಸಾವೃತಃ ||೬೪||

ಸ್ಪರ್ಶಮಸ್ಥ್ಯಾವೃತೇ ತೂಷ್ಣಂ ಪೀಡನಂ ಚಾಭಿನಂದತಿ ||
ಸಂಭಜ್ಯತೇ ಸೀದತಿ ಚ ಸೂಚಿಭಿರಿವ ತುದ್ಯತೇ ||೬೫||

ಮಜ್ಜಾವೃತೇ ವಿನಮನಂ ಜೃಂಭಣಂ ಪರಿವೇಷ್ಟನಮ್ ||
ಶೂಲಂ ಚ ಪೀಡ್ಯಮಾನೇ ಚ ಪಾಣಿಭ್ಯಾಂ ಲಭತೇ ಸುಖಮ್ ||೬೬||

ಶುಕ್ರಾವೇಗೋಽತಿವೇಗೋ ವಾ ನಿಷ್ಫಲತ್ವಂ ಚ ಶುಕ್ರಗೇ ||
ಭುಕ್ತೇ ಕುಕ್ಷೌ ರುಜಾ ಜೀರ್ಣೇ ಶಾಮ್ಯತ್ಯನ್ನಾವೃತೇಽನಿಲೇ ||೬೭||

ಮೂತ್ರಾಪ್ರವೃತ್ತಿರಾಧ್ಮಾನಂ ಬಸ್ತೌ ಮೂತ್ರಾವೃತೇಽನಿಲೇ ||
ವರ್ಚಸೋಽತಿವಿಬಂಧೋಽಧಃ ಸ್ವೇ ಸ್ಥಾನೇ ಪರಿಕೃಂತತಿ ||೬೮||

ವ್ರಜತ್ಯಾಶು ಜರಾಂ ಸ್ನೇಹೋ ಭುಕ್ತೇ ಚಾನಹ್ಯತೇ ನರಃ ||
ಚಿರಾತ್ ಪೀಡಿತಮನ್ನೇನ ದುಃಖಂ ಶುಷ್ಕಂ ಶಕೃತ್ ಸೃಜೇತ್ ||೬೯||

ಶ್ರೋಣಿವಂಕ್ಷಣಪೃಷ್ಠೇಷು ರುಗ್ವಿಲೋಮಶ್ಚ ಮಾರುತಃ ||
ಅಸ್ವಸ್ಥಂ ಹೃದಯಂ ಚೈವ ವರ್ಚಸಾ ತ್ವಾವೃತೇಽನಿಲೇ ||೭೦||

**ಅರ್ಥ—** ವಾಯುವು ಪಿತ್ತದಿಂದ ಆವೃತವಾಗಲು ದಾಹ, ನೀರಡಿಕೆ, ಶೂಲ, ಭ್ರಮ, ದಣುವು, ಕಾರ ಹುಳಿ ಉಪ್ಪು ಉಷ್ಣಪದಾರ್ಥ ತಿನ್ನುವದರಿಂದ ದಾಹ, ಶೀತದ ಇಚ್ಛೆ, ಈ ಲಕ್ಷಣಗಳುಂಟಾಗುವವು ||೬೦|| ವಾಯುವು ಕಫದಿಂದ ಆವೃತವಾಗಲು ಶೈತ್ಯ, ಜಡತ್ವ, ಶೂಲಗಳು ಉಂಟಾಗುವವು. ಕಾರ, ಹುಳಿ, ಉಪ್ಪು, ಉಷ್ಣ ಪದಾರ್ಥಗಳಿಂದ ಬೇನೆಯು ಕಡಿಮೆಯಾಗುವದು. ಉಪವಾಸ, ಶ್ರಮ, ಋಕ್ಷ ಉಷ್ಣ ಪದಾರ್ಥಗಳ ಇಚ್ಛೆಯಾಗುವದು. ||೬೧|| ವಾಯುವು **ರಕ್ತದಿಂದ** ಆವೃತವಾಗಲು ತ್ವಚೆ, ಮಾಂಸಗಳಲ್ಲಿ

ಬಹಳ ದಾಹ ಮತ್ತು ನೋವು ಉಂಟಾಗುವದು. ಕೆಂಪುಬಾವು ಬರುವದು. ಮೈಮೇಲೆ ಗಾದರಿಗಳು ಏಳುವವು. ||೬೨|| ವಾಯುವು **ಮಾಂಸದಿಂದ ಆವೃತ**ವಾಗಲು ಬಿರಸು, ಬಣ್ಣಗೆಟ್ಟ ಬಕ್ಕೆಗಳು ಆದರಂತೆ ಬಾವು, ಮೈಮೇಲೆ ಇರಿವು ಓಡಾಡಿದಂತೆ ಮತ್ತು ರೋಮ ಹರ್ಷ ಆಗುತ್ತದೆ. ||೬೩|| ವಾಯುವು **ಮೇದದಿಂದ ಆವೃತ**ವಾಗಲು ಮೈಮೇಲೆ ಅತ್ತಿತ್ತ ಹರಿದಾಡುವ, ಹೊಳೆಯುವ, ಮೃದು, ಶೀತ, ಬಾವು ಮತ್ತು ಅರುಚಿಯು ಉಂಟಾಗುತ್ತದೆ. ಇದು **ಆಢ್ಯವಾತ**ವೆಂದು ತಿಳಿಯಬೇಕು. ಇದು ಕಷ್ಟ ಸಾಧ್ಯವಾಗಿದೆ. ||೬೪|| ವಾಯುವು **ಅಸ್ಥಿಯಿಂದ** ಆವೃತವಾಗಲು ಬಿಸಿ ಪದಾರ್ಥವನ್ನು, ಒತ್ತೋಣವನ್ನು ಬಯಸುತ್ತಾನೆ. ಮುರಿದಂತೆ ಮೈ ನೊಯ್ಯುತ್ತದೆ. ನಿತ್ರಾಣವಾಗುತ್ತದೆ. ಸೂಜಿಯಿಂದ ಚುಚ್ಚಿದಂತೆ ದುಃಖವಾಗುತ್ತದೆ. || ೬೫ || ವಾಯುವು **ಮಜ್ಜದಿಂದ ಆವೃತವಾಗಲು** ಶರೀರವು ಮಣಿಯುವದು. ಆಕಳಿಕೆ ಬರುವದು. ಬಿಗಿದಂತೆ ಆಗುವದು, ಶೂಲವಿರುವದು, ಕೈಯಿಂದ ಒತ್ತಲು ಸುಖವಾಗುವದು ||೬೬|| ವಾಯುವು **ಶುಕ್ರದಿಂದ** ಆವೃತವಾಗಲು ಶುಕ್ರಕ್ಕೆ ವೇಗವೇ ಇರುವದಿಲ್ಲ. ಅಥವಾ ಅತಿವೇಗವಿರುವದು. ಅಥವಾ ಗರ್ಭವನ್ನುಂಟುಮಾಡದು. ವಾಯುವು **ಅನ್ನದಿಂದ** ಆವೃತವಾಗಲು ಊಟ ಮಾಡಲು ಹೊಟ್ಟೆಯಲ್ಲಿ ನೋವುಂಟಾಗುವದು. ಅನ್ನವು ಜೀರ್ಣವಾಗಲು ಆ ನೋವು ಶಾಂತವಾಗುವದು. ||೬೭|| ವಾಯುವು **ಮೂತ್ರದಿಂದ ಆವೃತವಾಗಲು** ಮೂತ್ರವಾಗುವದಿಲ್ಲ. ಮೂತ್ರಾಶಯವು ಉಬ್ಬುವದು. ವಾಯುವು **ಮಲದಿಂದ ಆವೃತ**ವಾಗಲು ಕೆಳಭಾಗಕ್ಕೆ ಪ್ರತಿಬಂಧವಾಗುವದು. ಮಲಸ್ಥಾನದಲ್ಲಿ ನೋಯುವದು. || ೬೮ || ತಿಂದ ಸ್ನೇಹವು ತೀವ್ರ ಪಚನವಾಗುವದು. ಊಟಮಾಡಲು ಹೊಟ್ಟೆಯುಬ್ಬುವದು. ಅನ್ನದ ಭಾರದಿಂದ ಬಹಳ ಹೊತ್ತಿಗೆ ಒಣಗಿದ ಮಲವನ್ನು ಬಹಳ ಕಷ್ಟದಿಂದ ಬಿಡುವನು. || ೬೯ || ಆಗ ಗೆಜ್ಜೆ ಬೆನ್ನುಗಳಲ್ಲಿ ನೋಯುವದು. ವಾಯುವು ಪ್ರತಿಲೋಮವಾಗುವದು. ಮನಸ್ಸು ಅಸ್ವಸ್ಥವಿರುವದು. || ೭೦ ||

ಸಾಧ್ಯಾಸಾಧ್ಯತೆಗಳನ್ನು ಹೇಳುತ್ತಾರೆ—

**ಗಾತ್ರಶ್ಲೇಷೋ ಹನುಸ್ತಂಭಃ ಕುಂಚನಂ ಕುಬ್ಜತಾರ್ದಿತಮ್ ||**
**ಸಂಧಿಚ್ಯುತಿಃ ಪಕ್ಷವಧಃ ಪಾಂಗುಲ್ಯಂ ಖುಡವಾತತಾ || ೭೧ ||**

ಸ್ತಂಭನಂ ಚಾಢ್ಯವಾತಶ್ಚ ರೋಗಾ ಮಜ್ಜಸ್ಥಿಗಾಶ್ಚ ಯೇ ||
ಏತೇ ಸ್ಥಾನಸ್ಯ ಗಾಂಭೀರ್ಯಾತ್ ಯತ್ನಾತ್ ಸಿಧ್ಯಂತಿ ವಾ ನ ವಾ
|| ೭೨ ||

ನವಾನ್ ಬಲವತಸ್ತ್ವೇತಾನ್ ಸಾಧಯೇನ್ನಿರುಪದ್ರವಾನ್ ||
ಕ್ರಿಯಾಮತಃ ಪರಂ ಸಿದ್ಧಾಂ ವಾತರೋಗಾಪಹಾಂ ಶೃಣು || ೭೩ ||

**ಅರ್ಥ—** ಗಾತ್ರಶ್ಲೇಷ, ಹನುಸ್ತಂಭ, ಆಕುಂಚನ, ಗೂನು, ಅರ್ದಿತ, ಸಂಧಿಭ್ರಂಶ, ಅರ್ಧಾಂಗವಾತ, ಪಂಗುತ್ವ, ಖುಡವಾತ, || ೭೧ || ಸ್ತಂಭ, ಆಢ್ಯವಾತ ಮತ್ತು ಮಜ್ಜಧಾತುವಿನಲ್ಲಾಗುವ ರೋಗಗಳು, ಅವುಗಳ ಸ್ಥಾನವು ಗಂಭೀರವಿರುವವರಿಂದ ಬಹಳ ಪ್ರಯತ್ನದಿಂದ ಸಾಧ್ಯವಾಗುವವು. ಅಥವಾ ಸಾಧ್ಯವಾಗುವದೇ ಇಲ್ಲ. || ೭೨ || ರೋಗಿಯು ಬಲಿಷ್ಠನಿದ್ದು ರೋಗವು ಹೊಸದು ಮತ್ತು ಉಪದ್ರವರಹಿತವಿದ್ದರೆ ಅದನ್ನು ಚಿಕಿತ್ಸಿಸಬೇಕು. ಇನ್ನು ಮೇಲೆ ವಾತರೋಗ ನಾಶಕವಾದ ಅನುಭೂತ ಚಿಕಿತ್ಸೆಯನ್ನು ಹೇಳುವೆವು ಕೇಳಿರಿ. || ೭೩ ||

ವಾತರೋಗದ ಸಾಮಾನ್ಯ ಚಿಕಿತ್ಸೆಯನ್ನು ಹೇಳುತ್ತಾರೆ—

ಕೇವಲಂ ನಿರುಪಸ್ತಂಭಮಾದೌ ಸ್ನೇಹೈರುಪಾಚರೇತ್ ||
ವಾಯುಂ ಸರ್ಪಿರ್ವಸಾತೈಲಮಜ್ಜಪಾನೈರ್ನರಂ ತತಃ ||೭೪||

ಸ್ನೇಹಕ್ಲಾಂತಂ ಸಮಾಶ್ವಾಸ್ಯ ಪಯೋಭಿಃ ಸ್ನೇಹಯೇತ್ ಪುನಃ ||
ಯೂಷೈರ್ಗ್ರಾಮ್ಯಾಂಬುಜಾನೂಪರಸೈರ್ವಾ ಸ್ನೇಹಸಂಯುತೈಃ ||೭೫||

ಕೃಶರಾಪಾಯಸೈಃ ಸಾಮ್ಲಲವಣೈಃ ಸಾನುವಾಸನೈಃ ||
ನಾವನೈಸ್ತರ್ಪಣೈಶ್ಚಾನ್ಯೈಃ ಸುಸ್ನಿಗ್ಧಂ ಸ್ವೇದಯೇತ್ತು ತಮ್ ||೭೬||

ಸ್ವಭ್ಯಕ್ತಂ ಸ್ನೇಹಸಂಯುಕ್ತೈರ್ನಾಡೀಪ್ರಸ್ತರಸಂಕರೈಃ ||
ತಥಾನ್ಯೈರ್ವಿವಿಧೈರ್ಯೋಗೈರ್ಯಥಾಯೋಗಮುಪಾಚರೇತ್ ||೭೭||

ಸ್ನೇಹಾಕ್ತಂ ಸ್ವಿನ್ನಮಂಗಂ ತು ವಕ್ರಂ ಸ್ತಬ್ಧಮಥಾಪಿ ವಾ ||
ಶನೈರ್ನಾಮಯಿತುಂ ಶಕ್ಯಂ ಯಥೇಷ್ಟಂ ಶುಷ್ಕದಾರುವತ್ ||೭೮||

ಹರ್ಷತೋದರುಗಾಯಾಮಶೋಥಸ್ತಂಭಗ್ರಹಾದಯಃ ||
ಸ್ವಿನ್ನಸ್ಯಾಶು ಪ್ರಶಾಮ್ಯಂತಿ ಮಾರ್ದವಂ ಚೋಪಜಾಯತೇ ||೭೯||

ಸ್ನೇಹಶ್ಚ ಧಾತೂನ್ ಸಂಶುಷ್ಕಾನ್ ಪುಷ್ಣಾತ್ಯಾಶು ಪ್ರಯೋಜಿತಃ ||
ಬಲಮಗ್ನಿಬಲಂ ಪುಷ್ಟಿಂ ಪ್ರಾಣಾಂಶ್ಚಾಪ್ಯತಿವರ್ಧಯೇತ್ ||೮೦||

ಅಸಕೃತ್ತಂ ಪುನಃ ಸ್ನೇಹೈಃ ಸ್ವೇದೈಶ್ಚಾಪ್ಯುಪಪಾದಯೇತ್ ||
ತಥಾ ಸ್ನೇಹಮೃದೌ ಕೋಷ್ಠೇ ನ ತಿಷ್ಠಂತ್ಯನಿಲಾಮಯಾಃ ||೮೧||

ಯದ್ಯನೇನ ಸದೋಷತ್ವಾತ್ ಕರ್ಮಣಾ ನ ಪ್ರಶಾಮ್ಯತಿ ||
ಮೃದುಭಿಃ ಸ್ನೇಹಯುಕ್ತೈರ್ಭೇಷಜೈಸ್ತಂ ವಿಶೋಧಯೇತ್ ||೮೨||

ಘೃತಂ ತಿಲ್ವಕಸಿದ್ಧಂ ವಾ ಸಾತಲಾಸಿದ್ಧಮೇವ ವಾ ||
ಪಯಸ್ಯೈರಂಡತೈಲಂ ವಾ ಪಿಬೇದ್ ದೋಷಹರಂ ಶಿವಮ್ ||೮೩||

ಸ್ನಿಗ್ಧಾಮ್ಲಲವಣೋಷ್ಣಾದ್ಯೈರಾಹಾರೈರ್ಹಿ ಮಲಶ್ಚಿತಃ ||
ಸ್ರೋತೋಬಧ್ವಾಽನಿಲಂ ರುಂಧ್ಯಾತ್ ತಸ್ಮಾತ್ತಮನುಲೋಮಯೇತ್ ||೮೪||

ದುರ್ಬಲೋ ಯೋಽವಿರೇಚ್ಯಃ ಸ್ಯಾತ್ ತಂ ನಿರೂಹೈರುಪಾಚರೇತ್ ||
ಪಾಚನೈರ್ದೀಪನೀಯೈರ್ವಾ ಭೋಜನೈಸ್ತದ್ಯುತೈರ್ನರಮ್ ||೮೫||

ಸಂಶುದ್ಧಸ್ಯೋತ್ಥಿತೇ ಚಾಗ್ನೌ ಸ್ನೇಹಸ್ವೇದೌ ಪುನರ್ಹಿತೌ ||
ಸ್ವಾದ್ವಮ್ಲಲವಣೈಃ ಸ್ನಿಗ್ಧೈರಾಹಾರೈಃ ಸತತಂ ಪುನಃ ||೮೬||

ನಾವನೈರ್ಧೂಮಪಾನೈಶ್ಚ ಸರ್ವಾನೇವೋಪಪಾದಯೇತ್ ||
ಇತಿ ಸಾಮಾನ್ಯತಃ ಪ್ರೋಕ್ತಂ ವಾತರೋಗಚಿಕಿತ್ಸಿತಮ್ ||೮೭||

**ಅರ್ಥ—** ಬೇರೆ ದೋಷಗಳಿಂದ ಕೂಡದ, ಆವೃತವಾಗದ ವಾತ ರೋಗಿಯನ್ನು ತುಪ್ಪ, ನೆಣ, ತೈಲ, ಮಜ್ಜಗಳಲ್ಲಿ ಯೋಗ್ಯವಾದ ಸ್ನೇಹ ಪಾನಗಳಿಂದ ಉಪಚರಿಸಬೇಕು. ||೭೪|| ಆ ಮೇಲೆ ಸ್ನೇಹದಿಂದ ಉದ್ವಿಗ್ನ ನಾದ ಅವನಿಗೆ ಹಾಲುಕೊಟ್ಟು ಆರಾಮಗೊಳಿಸಿ ಪುನಃ ಸ್ನೇಹ ಹಾಕಿದ ಕಟ್ಟುಗಳಿಂದಲೂ ಗ್ರಾಮ್ಯ, ಜಲಜ, ಅನೂಪದೇಶದ ಪ್ರಾಣಿಗಳ ಮಾಂಸ ರಂಸ ||೭೫|| ಮತ್ತು ಸ್ನೇಹಯುಕ್ತ ಹುಗ್ಗಿ ಪಾಯಸಗಳಿಂದಲೂ ಹುಳಿ ಮತ್ತು ಉಪ್ಪು ಇದ್ದ ಅನುವಾಸನ ಬಸ್ತಿಗಳಿಂದಲೂ ನಸ್ಯ ತರ್ಪಣಗಳಿಂ ದಲೂ ಮತ್ತೆ ಬೇರೆ ದ್ರವ್ಯಗಳಿಂದಲೂ ಅವನನ್ನು ಚೆನ್ನಾಗಿ ಸ್ನಿಗ್ಧಮಾಡಿ ಸ್ವೇದಮಾಡಬೇಕು. ||೭೬|| ಮೈಗೆ ಎಣ್ಣೆ ತೊಡೆದು ಸ್ನೇಹದಿಂದ ಕೂಡಿದ ನಾಡೀಸ್ವೇದ, ಪ್ರಸ್ತರಸ್ವೇದ, ಸಂಕರಸ್ವೇದ ಕೊಡಬೇಕು. ಮತ್ತು ಬೇರೆ

ಅನೇಕ ಯೋಗ್ಯ ಉಪಾಯುಗಳನ್ನು ಮಾಡಬೇಕು ||೭೭|| ಒಣ ಕಟ್ಟಿಗೆಯನ್ನು ಎಣ್ಣೆಯಲ್ಲಿ ಹಾಕಿ ಆಮೇಲೆ ಬಿಸಿನೀರಿನಲ್ಲಿ ನೆನೆಸಲು ಅದು ಹೇಗೆ ಬೇಕಾದಂತೆ ಮಣಿಯುವದೋ ಅದರಂತೆ ಸ್ನೇಹಸ್ವೇದಗಳನ್ನು ಕೊಟ್ಟ ಅವಯವವು ಡೊಂಕು ಇರಲಿ ಅಥವಾ ಸೆಟೆದಿರಲಿ ಸಾವಕಾಶವಾಗಿ ಬೇಕಾದಂತೆ ಮಣಿಸಲು ಶಕ್ಯವಾಗುವದು. ||೭೮|| ಸ್ವೇದಕೊಡಲು ಹರ್ಷ ಚುಚ್ಚುವಿಕೆ, ನೋವು, ಜಗ್ಗುವಿಕೆ, ಬಾವು, ಸೆಟೆ ಹಿಡಕೊಳ್ಳೋಣ, ಇವು ತೀವ್ರ ನಷ್ಟವಾಗಿ ಅದು ಮೆತ್ತಗಾಗುತ್ತದೆ. ||೭೯|| ಸ್ನೇಹವನ್ನು ಉಪಯೋಗಿಸಲು ಅದು ತೀವ್ರವಾಗಿ ಒಣಗಿದ ಧಾತುಗಳನ್ನು ಪೋಷಿಸುವದು. ಶಕ್ತಿ, ಅಗ್ನಿ, ಪುಷ್ಟಿ, ಪ್ರಾಣಗಳನ್ನು ಬೆಳೆಸುವದು. ||೮೦|| ಮೇಲಿಂದ ಮೇಲೆ ಅನೇಕ ಸಾರೆ ಸ್ನೇಹ ಸ್ವೇದಗಳನ್ನು ಕೊಡಬೇಕು. ಹೀಗೆ ಸ್ನೇಹದಿಂದ ಮೃದುವಾದ ಕೋಷ್ಠದಲ್ಲಿ ವಾತರೋಗಗಳು ನಿಲ್ಲುವದಿಲ್ಲ ||೮೧|| ಈ ಚಿಕಿತ್ಸೆಯಿಂದಲೂ ರೋಗವು ಶಮನವಾಗದಿದ್ದರೆ ದೋಷವು ಇನ್ನೂ ಉಂಟೆಂದು ತಿಳಿದು ಸ್ನೇಹ ಯುಕ್ತವಾದ ಮೃದು ಔಷಧಗಳನ್ನು ಕೊಟ್ಟು ( ಮುಂದೆ ಹೇಳಿದಂತೆ ) ಶೋಧನ ಕೊಡಬೇಕು. ||೮೨|| ಲೋಧ್ರದಿಂದ ಅಥವಾ ಸಪ್ತಲಾದಿಂದ ಸಿದ್ಧಮಾಡಿದ ಘೃತವನ್ನು ( ತಿಲ್ವಕ ಘೃತ ಅಥವಾ ಸಾತಲಾ ಘೃತವನ್ನು ) ಅಥವಾ ಹಾಲಿನೊಡನೆ ಔಡಲ ಎಣ್ಣೆಯನ್ನು ಕುಡಿಯಬೇಕು. ಇದು ದೋಷ ನಾಶಕ ಮತ್ತು ಮಂಗಲಕರವಾಗಿದೆ. ||೮೩|| ಸ್ನಿಗ್ಧ, ಹುಳಿ, ಉಪ್ಪು, ಉಷ್ಣ, ಮುಂತಾದ ಆಹಾರಗಳಿಂದ ಸಂಚಿತವಾದ ಮಲವು ಸ್ರೋತಸ್ಸನ್ನು ತಡೆದು ವಾಯುವನ್ನು ಪ್ರತಿಬಂಧಿಸುತ್ತದೆ. ಆದ್ದರಿಂದ (ಮೇಲಿನ ವಿರೇಚನ ಔಷಧಗಳಿಂದ) ಅದರ ಅನುಲೋಮನ ಮಾಡಬೇಕು. ||೮೪|| ದುರ್ಬಲನಿದ್ದದರಿಂದ ಯಾವನು ವಿರೇಚನಕ್ಕೆ ಅನರ್ಹನಿರುವನೋ ಅವನಿಗೆ ನಿರೂಹ ಬಸ್ತಿಯನ್ನು ಕೊಡಬೇಕು. ಅಥವಾ ಪಾಚನ, ದೀಪನ ಔಷಧಗಳನ್ನು ಅಥವಾ ಅವುಗಳಿಂದ ಕೂಡಿದ ಆಹಾರವನ್ನು ಕೊಡಬೇಕು. ||೮೫|| ಶೋಧನ ಕೊಟ್ಟ ನಂತರ ಅಗ್ನಿಯು ಪ್ರಜ್ವಲಿತವಾಗಲು ಪುನಃ ಸ್ನೇಹ ಸ್ವೇದಗಳನ್ನು ಕೊಡುವದು ಒಳ್ಳೇದು. ಎಲ್ಲ ವಾತರೋಗಗಳಲ್ಲಿ ಯಾವಾಗಲೂ ಮಧುರ, ಹುಳಿ, ಉಪ್ಪು, ಸ್ನಿಗ್ಧ ಆಹಾರಗಳನ್ನು ||೮೬|| ನಸ್ಯ ಧೂಮಪಾನಗಳನ್ನು ಮೇಲಿಂದ ಮೇಲೆ ಕೊಡಬೇಕು. ಈ ಪ್ರಕಾರ ವಾತರೋಗದ ಸಾಮಾನ್ಯ ಚಿಕಿತ್ಸೆಯು ಹೇಳಲ್ಪಟ್ಟಿತು. ||೮೭||

ಬೇರೆ ಬೇರೆ ಸ್ಥಾನಗಳಲ್ಲಿ ಉಂಟಾಗುವ ವಾತರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ—

ವಿಶೇಷತಸ್ತು ಕೋಷ್ಠಸ್ಥೇ ವಾತೇ ಕ್ಷಾರಂ ಪಿಬೇನ್ನರಃ ||
ಪಾಚನೈರ್ದೀಪನೈರ್ಯುಕ್ತೈರಮ್ಲೈರ್ವಾ ಪಾಚಯೇನ್ಮಲಾನ್ ||೮೮||

ಗುದಪಕ್ವಾಶಯಸ್ಥೇ ತು ಕರ್ಮೋದಾವರ್ತನುದ್ಧಿತಮ್ ||
ಆಮಾಶಯಸ್ಥೇ ಶುದ್ಧಸ್ಯ ಯಥಾ ದೋಷಹರೀ ಕ್ರಿಯಾ ||೮೯||

ಸರ್ವಾಂಗಕುಪಿತೇಽಭ್ಯಂಗೋ ಬಸ್ತಯಃ ಸಾನುವಾಸನಾಃ ||
ಸ್ವೇದಾಭ್ಯಂಗಾವಗಾಹಾಶ್ಚ ಹೃದ್ಯಂ ಚಾನ್ನಂ ತ್ವಗಾಶ್ರಿತೇ ||೯೦||

ಶೀತಾಃ ಪ್ರದೇಹಾ ರಕ್ತಸ್ಥೇ ವಿರೇಕೋ ರಕ್ತಮೋಕ್ಷಣಮ್ ||
ವಿರೇಕೋ ಮಾಂಸಮೇದಃಸ್ಥೇ ನಿರೂಹಾಃ ಶಮನಾನಿ ಚ ||೯೧||

ಬಾಹ್ಯಾಭ್ಯಂತರತಃ ಸ್ನೇಹೈರಸ್ಥಿಮಜ್ಜಗತಂ ಜಯೇತ್ ||
ಹರ್ಷೋಽನ್ನಪಾನಂ ಶುಕ್ರಸ್ಥೇ ಬಲಶುಕ್ರಕರಂ ಹಿತಮ್ ||೯೨||

ವಿಬದ್ಧಮಾರ್ಗಂ ದೃಷ್ಟ್ವಾ ಚ ಶುಕ್ರಂ ದದ್ಯಾದ್ ವಿರೇಚನಮ್ ||
ವಿರಿಕ್ತಪ್ರತಿಭುಕ್ತಸ್ಯ ಪೂರ್ವೋಕ್ತಾಂ ಕಾರಯೇತ್ ಕ್ರಿಯಾಮ್ ||೯೩||

ಗರ್ಭೇ ಶುಷ್ಕೇ ತು ವಾತೇನ ಬಾಲಾನಾಂ ಚಾಪಿ ಶುಷ್ಯತಾಮ್ ||
ಸಿತಾಮಧುಕಕಾಶ್ಮರ್ಯೈರ್ಹಿತಮುತ್ಥಾಪನೇ ಪಯಃ ||೯೪||

ಹೃದಿ ಪ್ರಕುಪಿತೇ ಸಿದ್ಧಮಂಶುಮತ್ಯಾ ಪಯೋ ಹಿತಮ್ ||
ಮತ್ಸ್ಯಾನ್ ನಾಭಿಪ್ರದೇಶಸ್ಥೇ ಸಿದ್ಧಾನ್ ಬಿಲ್ವಶಲಾಟುಭಿಃ ||೯೫||

ವಾಯುನಾ ವೇಷ್ಟ್ಯಮಾನೇ ತು ಗಾತ್ರೇ ಸ್ಯಾದುಪನಾಹನಮ್ ||
ತೈಲಂ ಸಂಕುಚಿತೇಽಭ್ಯಂಗೋ ಮಾಷಸೈಂಧವಸಾಧಿತಮ್ ||೯೬||

ಬಾಹುಶೀರ್ಷಗತೇ ನಸ್ಯಂ ಪಾನಂ ಚೋತ್ತರಭಕ್ತಿಕಮ್ ||
ಬಸ್ತಿಕರ್ಮ ತ್ವಧೋ ನಾಭೇಃ ಶಸ್ಯತೇ ಚಾವಪೀಡಕಃ ||೯೭||

ಅರ್ದಿತೇ ನಾವನಂ ಮೂರ್ಧ್ನಿ ತೈಲಂ ತರ್ಪಣಮೇವ ಚ ||
ನಾಡೀಸ್ವೇದೋಪನಾಹಾಶ್ಚಾಪ್ಯಾನೂಪಪಿಶಿತೈರ್ಹಿತಾಃ ||೯೮||

ಸ್ವೇದನಂ ಸ್ನೇಹಸಂಯುಕ್ತಂ ಪಕ್ಷಾಘಾತೇ ವಿರೇಚನಮ್ ||
ಅಂತರಾಕಂಡರಾಂಗುಲ್ಯೋಃ ಶಿರಾವೇಧೋಗ್ನಿಕರ್ಮ ಚ ||೯೯||

**ಗೃಧ್ರಸೀಷು ಪ್ರಯುಂಜೀತ ಖಲ್ಲ್ಯಾಂ ತೂಷ್ಣೋಪನಾಹನಮ್॥**
**ಪಾಯಸೈಃ ಕೃಶರೈಶ್ಚೈವ ಶಸ್ತೈಸ್ತೈಲ ಘೃತಾನ್ವಿತೈಃ ॥೧೦೦॥**

**ವ್ಯಾದಿತಾಸ್ಯೇ ಹನುಂ ಸ್ವಿನ್ನಮಂಗುಷ್ಠಾಭ್ಯಾಂ ಪ್ರಪೀಡಯೇತ್ ॥**
**ಪ್ರದೇಶಿನೀಭ್ಯಾಂ ಚೋನ್ನಾಮ್ಯ ಚಿಬುಕೋನ್ನಮನಂಹಿತಮ್ ॥೧೦೧॥**

**ಸ್ರಸ್ತಂ ಸ್ವಂ ಗಮಯೇತ್ ಸ್ಥಾನಂ ತಥಾ ಸ್ವಿನ್ನಂ ಚ ನಾಮಯೇತ್ ॥**
**ಪ್ರತ್ಯೇಕಂ ಸ್ಥಾನದೂಷ್ಯಾದಿಕ್ರಿಯಾಂ ಸರ್ವತ್ರ ಕಾರಯೇತ್ ॥೧೦೨॥**

**ಅರ್ಥ—** ವಾತವು **ಕೋಷ್ಠ**ದಲ್ಲಿ ಇದ್ದರೆ ವಿಶೇಷವಾಗಿ ರೋಗಿಯು ಕ್ಷಾರವನ್ನು ಕುಡಿಯಬೇಕು. ಅಥವಾ ಪಾಚನ ದೀಪನ ಔಷಧಗಳಿಂದ ಅಥವಾ ಆಮ್ಲ ದ್ರವ್ಯಗಳಿಂದ ಮಲವನ್ನು ಪಚನಮಾಡಬೇಕು. ॥೮೮॥ ವಾತವು **ಗುದ ಪಕ್ವಾಶಯ**ಗಳಲ್ಲಿದ್ದರೆ ಉದಾವರ್ತನಾಶಕ ಚಿಕಿತ್ಸೆಯು ಹಿತಕರವು. ಆಮಾಶಯದಲ್ಲಿದ್ದರೆ ಶೋಧನಕೊಟ್ಟು ವಾತದೋಷನಾಶಕ ಚಿಕಿತ್ಸೆಯನ್ನು ಮಾಡಬೇಕು. ॥೮೯॥ **ಸರ್ವಾಂಗದಲ್ಲಿ** ಕುಪಿತವಾಗಿದ್ದರೆ ಅಭ್ಯಂಗ, ನಿರೂಹ, ಅನುವಾಸನ ಬಸ್ತಿಗಳು ಹಿತಕಾರಕಗಳು. **ತ್ವಚೆಯಲ್ಲಿ** ಇದ್ದರೆ, ಸ್ವೇದ, ಅಭ್ಯಂಗ, ಅವಗಾಹನ, ಮನೋಹರವಾದ ಅನ್ನವು ಹಿತಕರವು. ॥೯೦॥ ವಾತವು **ರಕ್ತದಲ್ಲಿದ್ದರೆ** ಶೀತವಾದ ಲೇಪ, ವಿರೇಚನ, ರಕ್ತಮೋಕ್ಷಗಳು ಹಿತಕರವು. **ಮಾಂಸ ಮೇದಗಳಲ್ಲಿ** ಇದ್ದರೆ ವಿರೇಚನ, ನಿರೂಹ ಬಸ್ತಿ, ಮತ್ತು ಶಮನೌಷಧಗಳು ಹಿತಕರವು. ॥೯೧॥ **ಅಸ್ಥಿಮಜ್ಜಗಳಲ್ಲಿ** ಇದ್ದರೆ, ಅಭ್ಯಂಗ ಸ್ನೇಹಪಾನಗಳಿಂದ ಅದನ್ನು ಕಳೆಯಬೇಕು. **ಶುಕ್ರದಲ್ಲಿರಲು** ಆನಂದದಿಂದ ಇರೋಣ, ಬಲ ಮತ್ತು ಶುಕ್ರವರ್ಧಕ ಅನ್ನಪಾನಗಳನ್ನು ಮಾಡಬೇಕು. ॥೯೨॥ **ಶುಕ್ರದ ಮಾರ್ಗದ ಪ್ರತಿಬಂಧವಿದ್ದರೆ,** ವಿರೇಚನ ಕೊಟ್ಟು, ಉಳಿಸಿ, ಹಿಂದೆ ಹೇಳಿದ (ಆನಂದ, ಬಲ, ಶುಕ್ರವರ್ಧಕ ಅನ್ನಪಾನ) ಚಿಕಿತ್ಸೆಯನ್ನು ಮಾಡಬೇಕು. ॥೯೩॥ **ವಾತದಿಂದ ಗರ್ಭವು** ಶುಷ್ಕವಾದರೆ ಅಥವಾ ಹುಡುಗರು ಒಣಗಹತ್ತಿದರೆ ಸಕ್ಕರೆ, ಜೇಷ್ಠಮಧು, ಶಿವನೀ ಫಲ ಗಳಿಂದ ಸಿದ್ಧಮಾಡಿದ ಹಾಲು ಪೋಷಕವಾಗುವದು. ॥೯೪॥ **ವಾಯುವು ಹೃದಯದಲ್ಲಿ** ಕುಪಿತವಾದರೆ, ಒಂದೆಲೆ ಹೊನ್ನೆಯಿಂದ ಸಿದ್ಧಮಾಡಿದ ಹಾಲು ಹಿತಕರವು. **ಹೊಕ್ಕಳ ಸ್ಥಾನದಲ್ಲಿ** ಕುಪಿತವಾದ ವಾತಕ್ಕೆ ಎಳೆ ಬಿಲ್ವ ಗಳ ಕಷಾಯದಲ್ಲಿ ಕುದಿಸಿದ ಮೀನಗಳನ್ನು ಕೊಡಬೇಕು. ॥೯೫॥ **ವಾಯುವಿ ನಿಂದ ಸುತ್ತಲ್ಪಡುವ ಶರೀರಕ್ಕೆ** ಉಪಹಾನ (ಪೋಟೀಸ) ವನ್ನು ಕಟ್ಟಿ

ಬೇಕು. **ಅವಯುವವು ಸಂಕುಚಿತವಾದರೆ,** ಉದ್ದು ಸೈಂಧವಗಳಿಂದ ಸಿದ್ಧ ವಾಡಿದ ತೈಲವನ್ನು ತಿಕ್ಕಬೇಕು. ||೯೬|| **ಬಾಹು ಮತ್ತು ತಲೆಗಳಲ್ಲಿ ವಾತ ವಿದ್ದರೆ** ( ಸ್ನೈಹಿಕ ) ನಸ್ಯ ಮತ್ತು ಊಟದ ನಂತರ ಕೂಡಲೇ ಸ್ನೇಹಪಾನ ಗಳನ್ನು ಕೊಡಬೇಕು. **ಹೊಕ್ಕಳಿನ ಕೆಳಭಾಗದಲ್ಲಿಯ** ವಾತಕ್ಕೆ ಬಸ್ತಿ ಮತ್ತು ಅವಪೀಡಕ ( ಊಟಕ್ಕಿಂತ ಮೊದಲು ಅಥವಾ ಅನ್ನ ಜೀರ್ಣವಾದ ಮೇಲೆ ಸ್ನೇಹಪಾನ ಮಾಡೋಣ ) ಕೊಡಬೇಕು. ||೯೭|| **ಅರ್ದಿತ ರೋಗ ದಲ್ಲಿ** ತರ್ಪಣ, ನಸ್ಯ, ತಲೆಯಲ್ಲಿ ಎಣ್ಣೆ ಉಣಿಸೋಣ, ಅನೂಪ ದೇಶದ ಮಾಂಸಗಳಿಂದ ನಾಡೀ ಸ್ವೇದ ಉಪನಾಹಗಳನ್ನು ಮಾಡಬೇಕು. ||೯೮|| **ಪಕ್ಷಾಘಾತದಲ್ಲಿ** ಸ್ನೇಹಯುಕ್ತ ಸ್ವೇದ, ವಿರೇಚನಗಳನ್ನು **ಗೃಧ್ರಸಿಯಲ್ಲಿ** ಕಂಡರಾ ( ಹಗ್ಗದಂತಿರುವ ಮಾಂಸ ) ಮತ್ತು ಬೆರಳುಗಳ ಮಧ್ಯದಲ್ಲಿ ಸಿರಾ ವೇಧ ಮತ್ತು ದಾಹಗಳನ್ನು ಮಾಡಬೇಕು. ||೯೯|| **ಖಲ್ಲೀವಾತದಲ್ಲಿ** ತೈಲ ಘೃತಗಳನ್ನು ಹಾಕಿ ಹಾಲಿನಿಂದ ಮಾಡಿದ ಅಥವಾ ಬಿಸಿ ಬಿಸಿ ಹುಗ್ಗಿಯ ಪೋಟೀಸುಗಳನ್ನು ಕಟ್ಟಬೇಕು. ||೧೦೦|| **ಹನುಸ್ತಂಭದಲ್ಲಿ ಬಾಯಿ ತೆರೆ ದಿದ್ದರೆ,** ಅದಕ್ಕೆ ಸ್ವೇದ ಕೊಟ್ಟು ಎರಡೂ ಕಡೆಗೆ ಹನುಸಂಧಿಯನ್ನು ಹೆಬ್ಬೆಟ್ಟು ಗಳಿಂದ ಒತ್ತಬೇಕು. ಮತ್ತು ಆಗೆಯೇ ಹೆಬ್ಬೆಟ್ಟಿನ ಹತ್ತರ ಇರುವ ( ಪ್ರದೇ ಶಿನೀ ) ಬೊಟ್ಟುಗಳಿಂದ ಗದ್ದವನ್ನು ಮೇಲಕ್ಕೆ ಎತ್ತಿ, ಒತ್ತಿ, ಅದನ್ನು ಕೂಡಿಸ ಬೇಕು. ||೧೦೧|| ಕೆಳಗೆ ಸರಿದಿದ್ದರೆ ಅದಕ್ಕೆ ಸ್ವೇದಕೊಟ್ಟು, ಅದರ ಸ್ಥಾನಕ್ಕೆ ಒಯ್ಯಬೇಕು. ಮೇಲಕ್ಕೆ ಸರಿದಿದ್ದರೆ ಸ್ವೇದಕೊಟ್ಟು ಕೆಳಗೆ ಇಳಿಸಬೇಕು. ಎಲ್ಲ ವಾತರೋಗಗಳಲ್ಲಿ ಸ್ಥಾನದೂಷ್ಯ ಮುಂತಾದವುಗಳ ಚಿಕಿತ್ಸೆಯನ್ನು ಬೇರೆ ಬೇರೆಯಾಗಿ ಮಾಡಬೇಕು. ||೧೦೨||

**ವಾತದ ಔಷಧಗಳನ್ನು ಹೇಳುತ್ತಾರೆ.**

**ಸರ್ಪಿಸ್ತೈಲವಸಾಮಜ್ಜಪಾನಾಭ್ಯಂಜನಬಸ್ತಯಃ ||**
**ಸ್ವೇದಃ ಸ್ನಿಗ್ಧೋ ನಿವಾತಂ ಚ ಸ್ಥಾನಂ ಪ್ರಾವರಣಾನಿ ಚ || ೧೦೩ ||**

**ರಸಾಃ ಪಯಾಂಸಿ ಭೋಜ್ಯಾನಿ ಸ್ವಾದ್ವಮ್ಲಲವಣಾನಿ ಚ ||**
**ಬೃಂಹಣಂ ಯಚ್ಚ ತತ್ ಸರ್ವಂ ಪ್ರಶಸ್ತಂ ವಾತರೋಗಿಣಾಮ್ ||೧೦೪||**

**ಬಲಾಯಾಃ ಪಂಚಮೂಲಸ್ಯ ದಶಮೂಲಸ್ಯ ವಾ ರಸೇ ||**
**ಅಜಶೀರ್ಷಾಂಬುಜಾನೂಪಕ್ರವ್ಯಾದಪಿಶಿತೈಃ ಸಮಮ್ || ೧೦೫ ||**

ಸಾಧಯಿತ್ವಾ ರಸಾನ್ ಸ್ನಿಗ್ಧಾನ್ ದಧ್ಯಮ್ಲವ್ಯೋಷಸಂಸ್ಕೃತಾನ್ ||
ಭೋಜಯೇತ್ ವಾತರೋಗಾರ್ತಂ ತೈರ್ವ್ಯಕ್ತಲವಣೈರ್ನರಮ್ ||೧೦೬||

ಏತೈರೇವೋಪನಾಹಾಂಶ್ಚ ಪಿಶಿತೈಃ ಸಂಪ್ರಕಲ್ಪಯೇತ್ ||
ಘೃತತೈಲಯುತೈಃ ಸಾಮ್ಲೈಃ ಸ್ವಿನ್ನಕ್ಷುಣ್ಣೈರಸಸ್ಥಿಭಿಃ || ೧೦೭ ||

ಪತ್ರೋತ್ಕ್ವಾಥಪಯಸ್ತೈಲದ್ರೋಣ್ಯಃ ಸ್ಯುರವಗಾಹನೇ ||
ಸ್ವಭ್ಯಕ್ತಾನಾಂ ಪ್ರಶಸ್ಯಂತೇ ಸೇಕಾಶ್ಚಾನಿಲರೋಗಿಣಾಮ್ || ೧೦೮ ||

ಆನೂಪೌದಕಮಾಂಸಾನಿ ದಶಮೂಲಂ ಶತಾವರೀಮ್ ||
ಕುಲತ್ಥಾನ್ ಬದರಾನ್ ಮಾಷಾನ್ ತಿಲಾನ್ ರಾಸ್ನಾಬಲಾಯವಾನ್ || ೧೦೯ ||

ವಸಾದಧ್ಯಾರನಾಲಾಮ್ಲೈಃ ಸಹ ಕುಂಭ್ಯಾಂ ವಿಪಾಚಯೇತ್ ||
ನಾಡೀಸ್ವೇದಂ ಪ್ರಯುಂಜೀತ ಪಿಷ್ಟೈಶ್ಚಾಪ್ಯುಪನಾಹನಮ್ || ೧೧೦ ||

ತೈಶ್ಚ ಸಿದ್ಧಂ ಘೃತಂ ತೈಲಮಭ್ಯಂಗಂ ಪಾನಮೇವ ಚ ||
ಮುಸ್ತಂ ಕುಷ್ಠಂ ತಿಲಾಃ ಕಿಣ್ವಂ ಸುರಾಹ್ವಂ ಲವಣಂ ನತಮ್ ||೧೧೧||

ದಧಿಕ್ಷೀರಚತುಃಸ್ನೇಹೈಃ ಶಸ್ತಂ ಸ್ಯಾದುಪನಾಹನಮ್ ||
ಉತ್ಕಾರಿಕಾವೇಶವಾರಕ್ಷೀರಮಾಷತಿಲೌದನೈಃ || ೧೧೨ ||

ಏರಂಡಬೀಜಗೋಧೂಮಯವಕೋಲಸ್ಥಿರಾದಿಭಿಃ ||
ಸಸ್ನೇಹೈಃ ಸರುಜಂ ಗಾತ್ರಮಾಲಿಪ್ಯ ಬಹಲಂ ಭಿಷಕ್ || ೧೧೩ ||

ಏರಂಡಪತ್ರೈರ್ಬಧ್ನೀಯಾತ್ ರಾತ್ರೌ ಕಲ್ಯಂ ವಿಮೋಕ್ಷಯೇತ್ ||
ಕ್ಷೀರಾಂಬುನಾ ತತಃ ಸಿಕ್ತಂ ಪುನಶ್ಚೈವೋಪನಾಹಿತಮ್ || ೧೧೪ ||

ಮುಂಚೇದ್ ರಾತ್ರೌ ದಿವಾಬದ್ಧಂ ಚರ್ಮಭಿಸ್ತಂ ಸಲೋಮಭಿಃ ||
ಫಲಾನಾಂ ತೈಲಯೋನೀನಾಮಮ್ಲಪಿಷ್ಟಾನ್ ಸುಶೀತಲಾನ್ ||೧೧೫||

ಪ್ರದೇಹಾನುಪನಾಹಾಂಶ್ಚ ಗಂಧೈರ್ವಾತಹರೈರಪಿ ||
ಕೃಶರಾಪಾಯಸೈಶ್ಚೈವ ಕಾರಯೇತ್ ಸ್ನೇಹಸಂಯುತೈಃ || ೧೧೬ ||
ರೂಕ್ಷಶುದ್ಧಾನಿಲಾರ್ತಾನಾಮತಃ ಸ್ನೇಹಾನ್ ಪ್ರವಕ್ಷ್ಯತಿ ||
ವಿವಿಧಾನ್ ವಿವಿಧವ್ಯಾಧಿಪ್ರಶಮಾಯಾಮೃತೋಪಮಾನ್ || ೧೧೭ ||

ದ್ರೋಣೇಽಂಭಸಃ ಪಚೇದ್ ಭಾಗಾನ್ ದಶಮೂಲಚತುಷ್ಪಲಾನ್ ||
ಯವಕೋಲಕುಲತ್ಥಾನಾಂ ಭಾಗೈಃ ಪ್ರಸ್ಥೋನ್ಮಿತೈಃ ಸಹ || ೧೧೮ ||

ಪಾದಶೇಷರಸೈಃ ಪಿಷ್ಟೈರ್ಜೀವನೀಯೈಃ ಸಶರ್ಕರೈಃ ||
ತಥಾ ಕಾಶ್ಮರ್ಯಖರ್ಜೂರದ್ರಾಕ್ಷಾಬದರಫಲ್ಗುಭಿಃ || ೧೧೯ ||

ಸಕ್ಷೀರೈಃ ಸರ್ಪಿಷಃ ಪ್ರಸ್ಥಃ ಸಿದ್ಧಃ ಕೇವಲವಾತನುತ್ ||
ನಿರತ್ಯಯಃ ಪ್ರಯೋಕ್ತವ್ಯಃ ಪಾನಾಭ್ಯಂಜನಬಸ್ತಿಷು || ೧೨೦ ||

ಚಿತ್ರಕಂ ನಾಗರಂ ರಾಸ್ನಾಂ ಪೌಷ್ಕರಂ ಪಿಪ್ಪಲೀಂ ಶಟೀಮ್ ||
ಪಿಷ್ಟ್ವಾ ವಿಪಾಚಯೇತ್ ಸರ್ಪಿರ್ವಾತರೋಗಹರಂ ಪರಮ್ || ೧೨೧ ||

ಬಲಾಬಿಲ್ವಶೃತೇ ಕ್ಷೀರೇ ಘೃತಮಂಡಂ ವಿಪಾಚಯೇತ್ ||
ತಸ್ಯ ಶುಕ್ತಿಃ ಪ್ರಕುಂಚೋ ವಾ ನಸ್ಯಂ ಶೀರ್ಷಗತೇಽನಿಲೇ || ೧೨೨ ||

ಗ್ರಾಮ್ಯಾನೂಪೌದಕಾನಾಂ ಚ ಭಿತ್ವಾಸ್ಥೀನಿ ಪಚೇಜ್ಜಲೇ ||
ತಂ ಸ್ನೇಹಂ ದಶಮೂಲಸ್ಯ ಕಷಾಯೇಣ ಪುನಃ ಪಚೇತ್ || ೧೨೩ ||

ಜೀವಕರ್ಷಭಕಾಸ್ಫೋತಾವಿದಾರೀಕಪಿಕಚ್ಛುಭಿಃ ||
ವಾತಘ್ನೈರ್ಜೀವನೀಯೈಶ್ಚ ಕಲ್ಕೈರ್ದ್ವಿಕ್ಷೀರಭಾಗಿಕಮ್ || ೧೨೪ ||

ತತ್ ಸಿದ್ಧಂ ನಾವನಾಭ್ಯಂಗಾತ್ ತಥಾ ಪಾನಾನುವಾಸನಾತ್ ||
ಸಿರಾಪರ್ವಾಸ್ಥಿಕೋಷ್ಠಸ್ಥಂ ಪ್ರಣುದತ್ಯಾಶು ಮಾರುತಮ್ ||೧೨೫||

ಯೇ ಸ್ಯುಃ ಪ್ರಕ್ಷೀಣಮಜ್ಜಾನಃ ಕ್ಷೀಣಶುಕ್ರೌಜಸಶ್ಚ ಯೇ ||
ಬಲಪುಷ್ಟಿಕರಂ ತೇಷಾಮೇತತ್ ಸ್ಯಾದಮೃತೋಪಮಮ್ ||೧೨೬||

ಪ್ರಸ್ಥಃ ಸ್ಯಾತ್ ತ್ರಿಫಲಾಯಾಸ್ತು ಕುಲತ್ಥಕುಡವದ್ವಯಮ್ ||
ಕೃಷ್ಣಗಂಧಾತ್ವಗಾಢಕ್ಯೋಃ ಪೃಥಕ್ ಪಂಚಫಲಂ ಭವೇತ್ ||೧೨೭||

ರಾಸ್ನಾಚಿತ್ರಕಯೋರ್ದ್ವೇ ದ್ವೇ ದಶಮೂಲಂ ಪಲೋನ್ಮಿತಮ್ ||
ಜಲದ್ರೋಣೇ ಪಚೇತ್ ಪಾದಶೇಷೇ ಪ್ರಸ್ಥೋನ್ಮಿತಂ ಪೃಥಕ್ ||೧೨೮||

ಸುರಾರನಾಲದಧ್ಯಮ್ಲಸೌವೀರಕತುಷೋದಕಮ್ ||
ಕೋಲದಾಡಿಮವೃಕ್ಷಾಮ್ಲರಸಾಂಸ್ತೈಲಂ ಘೃತಂ ವಸಾಮ್ ||೧೨೯||

ಮಜ್ಜಾನಂ ಚ ಪಯಶ್ಚೈವ ಜೀವನೀಯಪಲಾನಿ ಷಟ್ ||
ಕಲ್ಕಾನ್ ದತ್ವಾ ಮಹಾಸ್ನೇಹಂ ಸಮ್ಯಗೇನಂ ವಿಪಾಚಯೇತ್ ||೧೩೦||

ಶಿರಾಮಜ್ಜಾಸ್ಥಿಗೇವಾತೇ ಸರ್ವಾಂಗೈಕಾಂಗರೋಗಿಷು ||
ವೇಪನಾಕ್ಷೇಪಶೂಲೇಷು ತದಭ್ಯಂಗಂ ಪ್ರದಾಪಯೇತ್ ||೧೩೧||

ಸಮೂಲಪತ್ರಾಂ ನಿರ್ಗುಂಡೀಂ ಪೀಡಯಿತ್ವಾ ರಸೇನ ತು ||
ತೇನ ಸಿದ್ಧಂ ಸಮಂ ತೈಲಂ ನಾಡೀಕುಷ್ಠಾನಿಲಾರ್ತಿಷು ||೧೩೨||
ಹಿತಂ ಪಾಮಾಪಚೀನಾಂ ತು ಪಾನಾಭ್ಯಂಜನಪೂರಣಮ್ ||
ಕಾರ್ಪಾಸಾಸ್ಥಿ ಫಲೋತ್ಥಾನಾಂ ರಸೇ ಸಿದ್ಧಂ ಚ ವಾತನುತ್ ||೧೩೩||

ಮೂಲಕಸ್ವರಸೇ ಕ್ಷೀರಸಮೇ ಸ್ಥಾಪ್ಯಂ ತ್ರ್ಯಹಂ ದಧಿ ||
ತಸ್ಯಾಮ್ಲಸ್ಯ ತ್ರಿಭಿಃ ಪ್ರಸ್ಥೈಸ್ತೈಲಪ್ರಸ್ಥಂ ವಿಪಾಚಯೇತ್ || ೧೩೪ ||
ಯಷ್ಟ್ಯಾಹ್ವಶರ್ಕರಾರಾಸ್ನಾಲವಣಾರ್ದ್ರಕನಾಗರೈಃ ||
ಸುಪಿಷ್ಟೈಃ ಪಲಿಕೈಃ ಪಾನಾತ್ ತದಭ್ಯಂಗಾಚ್ಚ ವಾತನುತ್ || ೧೩೫ ||
ಪಂಚಮೂಲಿಕಷಾಯೇಣ ಪಿಣ್ಯಾಕಂ ಬಹುವಾರ್ಷಿಕಮ್ ||
ಪಕ್ತ್ವಾಂಭಸಿ ರಸೇ ತಸ್ಮಿಂಸ್ತೈಲಪ್ರಸ್ಥಂ ವಿಪಾಚಯೇತ್ || ೧೩೬ ||
ಪಯಸಾಷ್ಟಗುಣೇನೈತತ್ ಸರ್ವವಾತವಿಕಾರನುತ್ ||
ಸಂಸೃಷ್ಟೇ ಶ್ಲೇಷ್ಮಣಾ ಚೈತತ್ ವಾತೇ ಶಸ್ತಂ ವಿಶೇಷತಃ || ೧೩೭ ||

ಯವಕೋಲಕುಲತ್ಥಾನಾಂ ಶ್ರೇಯಸ್ಯಾಃ ಶುಷ್ಕಮೂಲಕಾತ್ ||
ಬಿಲ್ವಾಚ್ಚಾಂಜಲಿಮೇಕೈಕಂ ದ್ರವೈರಮ್ಲೈರ್ವಿಪಾಚಯೇತ್ || ೧೩೮ ||

ತೇನ ತೈಲಂ ಕಷಾಯೇಣ ಫಲಾಮ್ಲೈಃ ಕಟುಭಿಸ್ತಥಾ ||
ಪಿಷ್ಟೈಃ ಸಿದ್ಧಂ ಮಹಾವಾತೈರಾರ್ತೇ ಶೀತೇ ಪ್ರಯೋಜಯೇತ್
|| ೧೩೯ ||

**ಅರ್ಥ—** ವಾತರೋಗಿಗಳಿಗೆ ಘೃತ, ತೈಲ, ನೆಣ, ಮಜ್ಜಗಳ ಪಾನವು ಅಭ್ಯಂಗ, ಬಸ್ತಿ, ಸ್ನಿಗ್ಧವಾದ ಸ್ವೇದ, ಗಾಳಿಬಾರದ ಸ್ಥಳ, ಬೆಚ್ಚನ್ನಹೊದಿಕೆಗಳು ||೧೦೩|| ಮಾಂಸರಸ, ಹಾಲು, ಮಧುರ, ಹುಳಿ, ಉಪ್ಪು ರಸಗಳ ಆಹಾರ, ಪೌಷ್ಟಿಕವಾದ ಎಲ್ಲ ಪದಾರ್ಥಗಳು ಹಿತಕರವಾಗಿವೆ. ||೧೦೪|| ಕಳ್ಳಂಗಡ್ಲೆಯ ಅಥವಾ ಮಹಾ ಪಂಚಮೂಲದ ಅಥವಾ ದಶಮೂಲದ ಕಷಾಯದಲ್ಲಿ ಆಡಿನ ತಲೆಯ ಮತ್ತು ನೀರಿನಲ್ಲಿಯ ಪ್ರಾಣಿಗಳ, ಮಲೆನಾಡಿನ ಪ್ರಾಣಿಗಳ, ಮಾಂಸಭಕ್ಷಕ ಪ್ರಾಣಿಗಳ ಮಾಂಸವನ್ನು ಹಾಕಿ ಕುದಿಸಿ ||೧೦೫|| ರಸವನ್ನು ಮಾಡಿ, ಅದರಲ್ಲಿ ಸ್ನೇಹ, ಮೊಸರು, ಹುಳಿ, ತ್ರಿಕಟುಗಳ ಚೂರ್ಣವನ್ನು ಕೂಡಿಸಿ, ಸಾಕಷ್ಟು ಉಪ್ಪುಹಾಕಿ, ಅದರೊಡನೆ ಅನ್ನವನ್ನು ವಾತರೋಗಿಗೆ ತಿನ್ನಿಸಬೇಕು. ||೧೦೬|| ಇವೇ ಮಾಂಸಗಳನ್ನು ಕುದಿಸಿ ಒಳಗಿನ

ಎಲಬು ತೆಗೆದು ಜಜ್ಜಿ, ಅದರಲ್ಲಿ ತುಪ್ಪ, ಎಣ್ಣೆ, ಹುಳಿ ದ್ರವ್ಯಗಳನ್ನು ಹಾಕಿ ಉಪನಾಹ ( ಪೋಟೀಸ ) ಗಳನ್ನು ಮಾಡಬೇಕು. ||೧೦೭|| ವಾತನಾಶಕ ಎಲೆಗಳ ಕಷಾಯ, ಹಾಲು, ಎಣ್ಣೆಗಳ ಡೋಣಿಗಳಲ್ಲಿ ವಾತರೋಗಿಯನ್ನು ಕೂಡಿಸಬೇಕು. ಮತ್ತು ಅಭ್ಯಂಗ ಮಾಡಿಸಿ, ವಾತನಾಶಕ ಕಷಾಯವನ್ನು ಮೈಮೇಲೆ ಸುರುವಬೇಕು. ||೧೦೮|| ಮಲೆನಾಡು ಪ್ರಾಣಿಗಳ, ನೀರಿನಲ್ಲಿ ರುವ ಪ್ರಾಣಿಗಳ ಮಾಂಸ, ದಶಮೂಲ, ಶತಾವರೀ, ಹುರಳಿ, ಬೋರೆ, ಉದ್ದು, ಎಳ್ಳು, ರಾಸ್ನಾ, ಕಳ್ಳಂಗಡ್ಲೆ, ಜವೆಗಳನ್ನು ||೧೦೯|| ನೆಣ, ಮೊಸರು, ಗಂಜಿ, ಹುಳಿ, ದ್ರವ್ಯಗಳೊಡನೆ ಒಂದು ಕೊಡದಲ್ಲಿ ಕುದಿಸಬೇಕು. ಅದ ರಿಂದ ನಾಡಿ ಸ್ವೇದ ಕೊಡಬೇಕು. ಇವುಗಳ ಚೂರ್ಣಮಾಡಿ ಅವುಗಳ ಪೋಟೀಸು ಮಾಡಬೇಕು. ||೧೧೦|| ಅವುಗಳಿಂದ ಮಾಡಿದ ಘೃತ, ತೈಲ ಗಳನ್ನು ಅಭ್ಯಂಗಪಾನಗಳಲ್ಲಿ ಉಪಯೋಗಿಸಬೇಕು. ಜೇಕು, ಕೋಷ್ಠ, ಎಳ್ಳು, ಸುರಾಬೀಜ, ದೇವದಾರು, ಸೈಂಧವ, ತಗರ ಇವುಗಳ ಚೂರ್ಣದಲ್ಲಿ ||೧೧೧|| ಮೊಸರು, ಹಾಲು, ತುಪ್ಪ, ಎಣ್ಣೆ, ನೆಣ, ಮಜ್ಜಗಳನ್ನು ಕೂಡಿಸಿ ಉಪನಾಹ ಮಾಡಬೇಕು. (ಜವೆ ಮುಂತಾದವುಗಳ) ರೊಟ್ಟಿ, ಜಜ್ಜಿ ಕುದಿ ಸಿದ ಮಾಂಸ, ಹಾಲು, ಉದ್ದು, ಎಳ್ಳು, ಅಕ್ಕಿಯ ಅನ್ನ ||೧೧೨|| ಔಡಲ ಬೀಜ, ಗೋದಿ, ಜವೆ, ಬೋರೆ, ಒಂದೆಲೆ ಹೊನ್ನೆ ಮುಂತಾದವುಗಳ ಚೂರ್ಣ ಗಳಿಂದ ಸ್ನೇಹಹಾಕಿ ಸಿದ್ಧಮಾಡಿದ ಉಪನಾಹವನ್ನು ನೋವುಳ್ಳ ಅವ ಯವಕ್ಕೆ ದಪ್ಪಾಗಿ ತೊಡೆದು ವೈದ್ಯನು ||೧೧೩|| ಮೇಲೆ ಔಡಲ ಎಲೆಗಳನ್ನು ಹಾಕಿ ರಾತ್ರಿಯಲ್ಲಿ ಕಟ್ಟಿ ಮುಂಜಾನೆ ತೆಗೆಯಬೇಕು. ಆ ಮೇಲೆ ನೀರು ಕೂಡಿದ ಬಿಸಿಹಾಲಿನಿಂದ ಸೇಚನಮಾಡಿ ಹಗಲು ಮತ್ತೆ ಮೊದಲಿನಂತೆ ಅದರ ಗಟ್ಟಿ ಲೇಪಮಾಡಿ ||೧೧೪|| ಮೇಲೆ ಕೂದಲುಳ್ಳ ತೊಗಲನ್ನು ಹೊಚ್ಚಿ, ರಾತ್ರಿಯವರೆಗೆ ಇಟ್ಟು, ಆ ಮೇಲೆ ಅದನ್ನು ತೆಗೆಯಬೇಕು. (ಎಳ್ಳು, ಅಗಸಿ, ಮುಂತಾದ) ಎಣ್ಣೆಯ ಫಲಗಳನ್ನು ಹುಳಿಯ ದ್ರವದಲ್ಲಿ ಅರೆದು ಅದರಿಂದ ||೧೧೫|| ಅಥವಾ ಸ್ನೇಹಕೂಡಿಸಿದ ವಾತನಾಶಕ ಗಂಧದ್ರವ್ಯಗಳಿಂದ, ಅದ ರಂತೆ ಸ್ನೇಹ ಕೂಡಿಸಿದ ಹುಗ್ಗಿ ಪಾಯಸಗಳಿಂದ ಶೀತಲೇಪ ಮತ್ತು ಉಪ ನಾಹಗಳನ್ನು ಮಾಡಬೇಕು. ||೧೧೬|| ಕೇವಲ ವಾತ ರೋಗದಿಂದ ಪೀಡಿತ ರಾದ ರುಕ್ಷರೋಗಿಗಳಿಗೆ ಅವರ ಅನೇಕ ರೋಗಗಳ ಶಮನಕ್ಕಾಗಿ ಅಮೃತ ದಂತಿರುವ ವಿವಿಧ ಸ್ನೇಹಗಳನ್ನು ಇನ್ನು ಮುಂದೆ ಹೇಳುತ್ತಾರೆ. ||೧೧೭||

ದಶಮೂಲಾದಿ ಘೃತ:— ದಶಮೂಲಗಳನ್ನು ಬೇರೆ ಬೇರೆ ಯಾಗಿ ೪-೪

ಫಲ ಮತ್ತು ಜವೆ, ಬೋರೆ ಹುರಳಿಗಳನ್ನು ೬೪-೬೪ ತೊಲಿ ತಕ್ಕೊಂಡು, ೨೦೪೮ ತೊಲಿ ನೀರಿನಲ್ಲಿ ಕುದಿಸಬೇಕು. ||೧೧೮|| ¼ ಉಳಿಯಲು ಅದರಷ್ಟೇ ಹಾಲು ಮತ್ತು ಜೀವನೀಯ ದ್ರವ್ಯ, ಸಕ್ಕರೆ, ಶಿವನ್ನಿ, ಉತ್ತತ್ತಿ, ದ್ರಾಕ್ಷಿ, ಬೋರೆ, ಫಲ್ಗು ( ಅತ್ತೀಜಾತಿ ) ಗಳ ಚೂರ್ಣವನ್ನು ಘೃತದ ¼ ಹಾಕಿ ||೧೧೯|| ೧೨೮ ತೊಲಿ ಘೃತವನ್ನು ಸಿದ್ಧಮಾಡಬೇಕು. ಇದನ್ನು ಪಾನ, ಅಭ್ಯಂಗ, ಬಸ್ತಿಗಳಲ್ಲಿ ನಿರ್ಭಯವಾಗಿ ಉಪಯೋಗಿಸಬೇಕು. ಇದು ಶುದ್ಧ ವಾತವನ್ನು ಕಳೆಯುವದು. ||೧೨೦|| ಚಿತ್ರಕಾದಿ ಘೃತ:— ಚಿತ್ರಕ, ಶುಂಠಿ, ರಾಸ್ನಾ, ಪುಷ್ಕರಮೂಲ, ಹಿಪ್ಪಲಿ, ಕಚೋರ, ಇವುಗಳ ಕಲ್ಕದಿಂದ ನೀರಿನಲ್ಲಿ ಸಿದ್ಧಮಾಡಿದ ಘೃತವು ಒಳ್ಳೇ ವಾತರೋಗ ನಾಶಕವಾಗಿದೆ. ||೧೨೧|| ಬಲಾದಿ ಘೃತ:— ತಲೆಯಲ್ಲಿಯ ವಾತಕ್ಕೆ ಕಳ್ಳಂಗಡ್ಲೆ ಬಿಲ್ವಗಳ ಚೂರ್ಣದಲ್ಲಿ ೮ ಪಾಲು ಹಾಲು ಅದರ ೪ ಪಾಲು ನೀರು ಹಾಕಿ ಕುದಿಸಿ ಹಾಲು ಮಾತ್ರ ಉಳಿಯಲು ಅದರಲ್ಲಿ ¼ ತುಪ್ಪ ಕೆನೆಯನ್ನು ಹಾಕಿ, ಕಲ್ಕವಿಲ್ಲದೆ ಅದನ್ನು ಸಿದ್ಧಮಾಡಬೇಕು. ಅದನ್ನು ಒಂದು ಶುಕ್ತಿ ( ೨ ತೊಲಿ ) ಅಥವಾ ಪ್ರಕುಂಚ ( ೪ ತೊಲಿ ) ದಷ್ಟು ಮೂಗಿನಲ್ಲಿ ಹಾಕಬೇಕು. ||೧೨೨|| ಮಜ್ಜ ಸ್ನೇಹ ಗ್ರಾಮ್ಯ ಪ್ರಾಣಿ, ಮಲೆನಾಡಿನ ಪ್ರಾಣಿ, ನೀರಿನಲ್ಲಿರುವ ಪ್ರಾಣಿ, ಇವುಗಳ ಎಲವುಗಳನ್ನು ಜಜ್ಜಿ ನೀರಿನಲ್ಲಿ ಕುದಿಸಬೇಕು. (ಅದರ ಮೇಲೆ ತೇಲಿಬರುವ) ಆ ಮಜ್ಜದ ಸ್ನೇಹವನ್ನು ದಶಮೂಲದ ಕಷಾಯದಲ್ಲಿ ಪುನಃ ಬೇಯಿಸಬೇಕು. ||೧೨೩|| ಅದರಲ್ಲಿ ೨ ಪಾಲು ಹಾಲು ೨ ಪಾಲು ದಶಮೂಲದ ಕಷಾಯ ಕೂಡಿಸಿ, ಅದರಲ್ಲಿ ಜೀವಕ, ಋಷಭಕ, ಆಸ್ಫೋತ, ಉತ್ತರಾಣಿ, ನೆಲಗುಂಬಳ, ನಸಗುನ್ನಿ ಬೀಜಗಳ ಅಥವಾ ವಾತನಾಶಕ ಜೀವನೀಯ ದ್ರವ್ಯಗಳ ಕಲ್ಕವನ್ನು ಘೃತದ ¼ ಹಾಕಿ ಅದನ್ನು ಸಿದ್ಧಮಾಡಬೇಕು. ||೧೨೪|| ಇದನ್ನು ನಸ್ಯ, ಅಭ್ಯಂಗ, ಪಾನ, ಅನುವಾಸನ ಬಸ್ತಿಗಳಲ್ಲಿ ಉಪಯೋಗಿಸಿದರೆ ಅದು ಶಿರೆ, ಸಂಧಿ, ಅಸ್ಥಿ, ಕೋಷ್ಠಗಳಲ್ಲಿರುವ ವಾತವನ್ನು ತೀವ್ರವಾಗಿ ಕಳೆಯುವದು. ||೧೨೫|| ಮಜ್ಜ, ಶುಕ್ರ, ಓಜಸ್ಸುಗಳ ಕ್ಷಯವಿದ್ದ ರೋಗಿಗಳಿಗೆ ಅಮೃತದಂತೆ ಬಲ ಪುಷ್ಟಿಗಳನ್ನು ಕೊಡುವದು. ||೧೨೬|| ಚತುಃಸ್ನೇಹ:— ತ್ರಿಫಳೆ ೬೪ ತೊಲಿ, ಹುರಳಿ ೩೨ ತೊಲಿ, ನುಗ್ಗಿಯ ತೊಗಟೆ ೨೦ ತೊಲಿ, ಕೊಗರಿ ೨೦ ತೊಲಿ ||೧೨೭|| ರಾಸ್ನಾ ೮ ತೊಲಿ, ಚಿತ್ರಕ ೮ ತೊಲಿ, ದಶಮೂಲ ಪ್ರತ್ಯೇಕವಾಗಿ ೪-೪ ತೊಲಿ, ಇವುಗಳನ್ನು ೨೦೪೮ ತೊಲಿ ನೀರಿನಲ್ಲಿ ಕುದಿಸಿ, ¼ ಉಳಿಯಲು ಅದರಲ್ಲಿ ||೧೨೮||

ಸುರೆ ೧೨೮ ತೊಲಿ, ಗಂಜಿ, ಹುಳಿಮೊಸರು, ಹೊಟ್ಟು ತೆಗೆಯದ ಜವೆಯ ಗಂಜಿ, ಹೊಟ್ಟು ತೆಗೆದ ಜವೆಯ ಗಂಜಿ, ಬೋರೆಯ ರಸ, ದಾಳಿಂಬ ರಸ, ಆಮಸೂಲ ರಸ, ಇವುಗಳನ್ನು ಪ್ರತ್ಯೇಕವಾಗಿ ೧೨೮–೧೨೮ ತೊಲಿ, ತೈಲ ೧೨೮ ತೊಲಿ, ಘೃತ ೧೨೮ ತೊಲಿ, ನೆಣ ೧೨೮ ತೊಲಿ ||೧೨೯|| ಮಜ್ಜ ೧೨೮ ತೊಲಿ, ಹಾಲು ೧೨೮ ತೊಲಿ, ಹತ್ತು ಜೀವನೀಯ ದ್ರವ್ಯಗಳ ಕಲ್ಕ ೬–೬ ಪಲ ಹಾಕಿ ಮಹಾಸ್ನೇಹವನ್ನು ಸಿದ್ಧಮಾಡಬೇಕು. ||೧೩೦|| ಶಿರೆ, ಮಜ್ಜೆ, ಅಸ್ಥಿಗಳಲ್ಲಿರುವ ವಾತದಲ್ಲಿ ಸರ್ವಾಂಗ ಏಕಾಂಗ ರೋಗಗಳಲ್ಲಿ ನಡಗು ಆಕ್ಷೇಪಶೂಲಗಳಲ್ಲಿ ಇದರ ಅಭ್ಯಂಗವನ್ನು ಮಾಡಬೇಕು. ||೧೩೧|| ನಿರ್ಗುಂಡೀ ತೈಲ:— ಬೇರು ಎಲೆ ಸಹಿತವಾಗಿ ಲಕ್ಕಿಯ ರಸವನ್ನು ತೆಗೆದು ತೈಲದ ೪ ಪಾಲು ಹಾಕಿ, ಅದರಿಂದ ಸಿದ್ಧಮಾಡಿದ ತೈಲವನ್ನು ಪಾನ ಅಭ್ಯಂಗ ಪೂರಣಗಳಿಂದ ಉಪಯೋಗಿಸಿದರೆ, ಅದು ಹುರುಕು, ಗಂಡಮಾಲೆ, ನಾಡೀ ವ್ರಣ, ಕುಷ್ಟ, ವಾತರೋಗಗಳನ್ನು ಕಳೆಯುವದು. ||೧೩೨|| ಕಾರ್ಪಾಸಿಬೀಜ ತೈಲ:— ಬೀಜ ಸಹಿತ ಹತ್ತೀಕಾಯಿಗಳನ್ನು ಕುಟ್ಟಿ ತೆಗೆದ ರಸದಲ್ಲಿ ಸಿದ್ಧ ಮಾಡಿದ ತೈಲವೂ ವಾತರೋಗವನ್ನು ಕಳೆಯುವದು. ||೧೩೨|| ಮೂಲಕ ತೈಲ:— ಹಾಲಿನಲ್ಲಿ ಅಷ್ಟೇ ಮೂಲಂಗಿಯ ರಸವನ್ನು ಕೂಡಿಸಿ ಮೊಸರಿನ ಹೆಪ್ಪು ಹಾಕಿ ೩ ದಿವಸ ಇಡಬೇಕು. ಹುಳಿಯಾದ ಅದನ್ನು ೬ ಪ್ರಸ್ಥ (೩೮೪ ತೊಲಿ) ತಕ್ಕೊಂಡು ||೧೩೪|| ಅದರಲ್ಲಿ ಜೇಷ್ಠಮಧು, ಸಕ್ಕರೆ, ರಾಸ್ನಾ ಸೈಂಧವ, ಶುಂಠಿ, ಹಸಿಶುಂಠಿ ಕಲ್ಕವನ್ನು ೪–೪ ತೊಲಿ ಹಾಕಿ ೧೨೮ ತೊಲಿ ತೈಲವನ್ನು ಸಿದ್ಧ ಮಾಡಬೇಕು ಆದರ ಅಭ್ಯಂಗದಿಂದ ವಾತರೋಗವು ಹೋಗುವದು. ||೧೩೫|| ಪಣ್ಯಾಕ ತೈಲ— ಬಹಳ ವರ್ಷದ ಹಳೇ ಎಳ್ಳು ಹಿಂಡಿಯನ್ನು ನಾಲ್ಕು ಪಾಲು ನೀರಿನಲ್ಲಿ ಕುದಿಸಿ ¼ ಉಳಿಯಲು ಅದರಷ್ಟೇ ಲಘುಪಂಚಮೂಲ ಕಷಾಯವನ್ನು ||೧೩೬|| ಮತ್ತು ಸ್ನೇಹದ ೮ ಪಾಲು ಹಾಲನ್ನು ಹಾಕಿ, ೧೨೮ ತೊಲಿ ತೈಲವನ್ನು ಸಿದ್ಧಪಡಿಸಬೇಕು. ಇದು ಎಲ್ಲ ವಾತ ವಿಕಾರಗಳನ್ನು ಕಳೆಯುವದು. ವಿಶೇಷವಾಗಿ ಕಫದಿಂದ ಕೂಡಿದ ವಾತದಲ್ಲಿ ಇದು ಹೆಚ್ಚು ಉಪಯುಕ್ತವಾಗಿದೆ. ||೧೩೭|| ಮಷಾದಿ ತೈಲ:— ಜವೆ, ಬೋರೆ, ಹುರಳಿ, ರಾಸ್ನಾ, ಒಣಗಿದ ಮೂಲಂಗಿ, ಬಿಲ್ವಮೂಲ ಇವುಗಳನ್ನು ೧೬–೧೬ ತೊಲಿ ತಕ್ಕೊಂಡು (ಗಂಜಿ ಮುಂತಾದ) ಹುಳಿ ದ್ರವ್ಯಗಳಲ್ಲಿ ಕುದಿಸಿ ||೧೩೮|| ¼ ಉಳಿಯಲು ಅದರಲ್ಲಿ ಹುಳಿ ಫಲಗಳ ಮತ್ತು ಕಾರ ದ್ರವ್ಯಗಳ ಕಲ್ಕವನ್ನು ಹಾಕಿ ಸಿದ್ಧ ಮಾಡಿದ ತೈಲವನ್ನು ಮಹಾ ವಾತಗಳಿಂದ ಪೀಡಿತವಾದ ಶೀತ ಅವಯವದಲ್ಲಿ ಉಪಯೋಗಿಸಬೇಕು. ||೧೩೯||

ಬೇರೆ ಮಹತ್ವದ ತೈಲಗಳನ್ನು ಹೇಳುತ್ತಾರೆ.

ಸರ್ವವಾತವಿಕಾರಾಣಾಂ ತೈಲಾನ್ಯನ್ಯಾನ್ಯತಃ ಶೃಣು ||
ಚತುಃಪ್ರಯೋಗಾಣ್ಯಾಯುಷ್ಯಬಲವರ್ಣಕರಾಣಿ ಚ ||೧೪೦||

ರಜಃಶುಕ್ರಪ್ರದೋಷಘ್ನಾನ್ಯಪತ್ಯಜನನಾನಿ ಚ ||
ನಿರತ್ಯಯಾನಿ ಸಿದ್ಧಾನಿ ಸರ್ವದೋಷಹರಾಣಿ ಚ ||೧೪೧||

ಸಹಾಚರತುಲಾಯಾಸ್ತು ರಸೇ ತೈಲಾಢಕಂ ಪಚೇತ್ ||
ಮೂಲಕಲ್ಕಾದ್ ದಶಪಲಂ ಪಯೋ ದತ್ವಾ ಚತುರ್ಗುಣಮ್ ||೧೪೨||

ಸಿದ್ಧೇಽಸ್ಮಿನ್ ಶರ್ಕರಾಚೂರ್ಣಾದಷ್ಟಾದಶಪಲಂ ಭಿಷಕ್ ||
ವಿನೀಯ ದಾರುಣೇಷ್ವೇತದ್ ವಾತವ್ಯಾಧಿಷು ಯೋಜಯೇತ್||೧೪೩||

ಶ್ವದಂಷ್ಟ್ರಾಸ್ವರಸಪ್ರಸ್ಥೌ ದ್ವೌ ಸಮೌ ಪಯಸಾ ಸಹ ||
ಷಟ್‌ಪಲಂ ಶೃಂಗವೇರಸ್ಯ ಗುಡಸ್ಯಾಷ್ಟಪಲಂ ತಥಾ ||೧೪೪||

ತೈಲಪ್ರಸ್ಥಂ ವಿಪಕ್ವಂ ತೈರ್ದದ್ಯಾತ್ ಸರ್ವಾನಿಲಾರ್ತಿಷು ||
ಜೀರ್ಣೇ ತೈಲೇ ಚ ದುಗ್ಧೇನ ಪೇಯಾಕಲ್ಪಃ ಪ್ರಶಸ್ಯತೇ ||೧೪೫||

**ಅರ್ಥ—** ಎಲ್ಲ ವಾತವಿಕಾರಗಳಲ್ಲಿ ಪಾನ, ಅಭ್ಯಂಗ, ಅನುವಾಸನ ಬಸ್ತಿ, ನಸ್ಯಗಳಲ್ಲಿ, ಉಪಯುಕ್ತವಾದ ಬೇರೆ ತೈಲಗಳನ್ನು ಹೇಳುತ್ತೇನೆ; ಕೇಳಿರಿ. ಇವು ಆಯುಷ್ಯ, ಬಲ, ವರ್ಣಗಳನ್ನು ಹೆಚ್ಚಿಸುವವು. ||೧೪೦|| ರಜ, ಶುಕ್ರದೋಷಗಳನ್ನು ಕಳೆಯುವವು. ಅಪತ್ಯಗಳನ್ನು ಕೊಡುವವು. ಅಪಾಯ ಮಾಡದೆ ಎಲ್ಲ ದೋಷನಾಶದಲ್ಲಿ ಅನುಭೂತವಾಗಿರುವವು. ||೧೪೧|| ಸಹಾಚರ ತೈಲ:— ೪೦೦ ತೊಲಿ ಮುಳ್ಳಜಾಜಿಯ ರಸ, ತೈಲ ೫೧೨ ತೊಲಿ, ಮುಳ್ಳುಜಾಜಿಬೇರಿನ ಕಲ್ಕ ೪೦ ತೊಲಿ, ಹಾಲು ೫೧೨ ತೊಲಿ ಹಾಕಿ ಕುದಿಸ ಬೇಕು. ||೧೪೨|| ತೈಲವು ಸಿದ್ಧವಾಗಲು ಅದರಲ್ಲಿ ೭೨ ತೊಲಿ ಸಕ್ಕರೆಯನ್ನು ಕೂಡಿಸಬೇಕು. ಇದನ್ನು ವೈದ್ಯನು ಭಯಂಕರ ವಾತರೋಗಗಳಲ್ಲಿ ಉಪ ಯೋಗಿಸಬೇಕು. ||೧೪೩|| ಶ್ವದಂಷ್ಟ್ರಾ ತೈಲ:— ನೆಗ್ಗಿಲದ ಸ್ವರಸ ೨೫೬ ತೊಲಿ, ಅದರಷ್ಟೇ ಹಾಲು, ಶುಂಠಿಯ ಚೂರ್ಣ ೨೪ ತೊಲಿ, ಬೆಲ್ಲ ೩೨ ತೊಲಿ, ||೧೪೪|| ಹಾಕಿ, ಅವುಗಳಿಂದ ೧೨೮ ತೊಲಿ ತೈಲವನ್ನು ಸಿದ್ಧಮಾಡಿ ಎಲ್ಲ ವಾತರೋಗಗಳಲ್ಲಿ ಉಪಯೋಗಿಸಬೇಕು. ತೈಲವು ಪಚನವಾಗಲು ಹಾಲು ಹಾಕಿ ಮಾಡಿದ ಪೇಯವನ್ನು ಕೊಡಬೇಕು. ||೧೪೫||

ಬಲಾ ತೈಲವನ್ನು ಹೇಳುತ್ತಾರೆ.

ಬಲಾಶತಂ ಗುಡೂಚ್ಯಾಶ್ಚ ಪಾದಂ ರಾಸ್ನಾಷ್ಟಭಾಗಿಕಮ್ ||
ಜಲಾಢಕಶತೇ ಪಕ್ತ್ವಾ ದಶಭಾಗ ಸ್ಥಿತೇ ರಸೇ ||೧೪೬||

ದಧಿಮಸ್ತ್ವಿಕ್ಷುನಿರ್ಯಾಸಶುಕ್ತೈಸ್ತೈಲಾಢಕಂ ಸಮೈಃ ||
ಪಚೇತ್ ಸಾಜಪಯೋಽರ್ಧಾಂಶೈಃ ಕಲ್ಕೈರೇಭಿಃ ಪಲೋನ್ಮಿತೈಃ ||೧೪೭||

ಶಟೀಸರಲದಾರ್ವೇಲಾಮಂಜಿಷ್ಠಾಗರುಚಂದನೈಃ ||
ಪದ್ಮಕಾತಿವಿಷಾಮುಸ್ತಸೂರ್ಪ್ಯಪರ್ಣೀಹರೇಣುಭಿಃ ||೧೪೮||

ಯಷ್ಟ್ಯಾಹ್ವಸುರಸವ್ಯಾಘ್ರನಖರ್ಷಭಕಜೀವಕೈಃ ||
ಪಲಾಶರಸಕಸ್ತೂರಿನಲಿಕಾಜಾತಿಕೋಷಕೈಃ ||೧೪೯||

ಪೃಕ್ಕಾಕುಂಕುಮಶೈಲೇಯಜಾತಿಕಟುಫಲಾಂಬುಭಿಃ ||
ತ್ವಕ್ ಚಂದನೈಲಾಕರ್ಪೂರತುರುಷ್ಕಶ್ರೀನಿವಾಸಕೈಃ ||೧೫೦||

ಲವಂಗನತಕಕ್ಕೋಲಕುಷ್ಠಗಂಧಪ್ರಿಯಂಗುಭಿಃ ||
ಸ್ಥೌಣೇಯತಗರಧ್ಯಾಮವಚಾಮದನಕಪ್ಲವೈಃ ||೧೫೧||

ಸನಾಗಕೇಶರೈಃ ಸಿದ್ಧೇ ದದ್ಯಾಚ್ಚಾತ್ರಾವತಾರಿತೇ ||
ಪತ್ರಕಲ್ಕಂ ತತಃ ಪೂತಂ ವಿಧಿನಾ ತತ್ ಪ್ರಯೋಜಯೇತ್ ||೧೫೨||

ಕಾಸಂ ಶ್ವಾಸಂ ಜ್ವರಂ ಮೂರ್ಚ್ಛಾಛರ್ದಿಗುಲ್ಮಾನ್ ಕ್ಷತಂ ಕ್ಷಯಮ್||
ಪ್ಲೀಹಶೋಷಾವಪಸ್ಮಾರಮಲಕ್ಷ್ಮೀಂ ಚ ವಿನಾಶಯೇತ್ ||೧೫೩||

ಬಲಾತೈಲಮಿದಂ ಶ್ರೇಷ್ಠಂ ವಾತವ್ಯಾಧಿವಿನಾಶನಮ್ ||
ಅಗ್ನಿವೇಶಾಯ ಗುರುಣಾ ಕೃಷ್ಣಾತ್ರೇಯೇಣ ಭಾಷಿತಮ್ ||೧೫೪||

**ಅರ್ಥ—** ಕಳ್ಳಂಗಡ್ಲೆ ೪೦೦ ತೊಲಿ, ಅಮೃತಬಳ್ಳಿ ೧೦೦ ತೊಲಿ, ರಾಸ್ನಾ ೫೦ ತೊಲಿ, ಇವುಗಳನ್ನು ೫೧೨೦೦ ತೊಲಿ, ನೀರಿನಲ್ಲಿ ಕುದಿಸಿ ೧/೧೦ ಉಳಿಯಲು ||೧೪೬|| ಅದರಲ್ಲಿ ಮೊಸರಿನ ಮೇಲಿನ ನೀರು, ಕಬ್ಬಿನ ರಸ, ಶುಕ್ತ ೫೧೨–೫೧೨ ತೊಲಿ, ಆಡಿನ ಹಾಲು ೨೫೬ ತೊಲಿ, ತೈಲ ೫೧೨ ತೊಲಿ ||೧೪೭|| ಮತ್ತು ಕಚೋರ, ಸರಲ, ದೇವದಾರು, ಯಾಲಕ್ಕಿ, ಮಂಜಿಷ್ಠ, ಅಗುರು, ಚಂದನ, ಪದ್ಮಕಾಷ್ಠ, ಅತಿವಿಷ, ಜೇಕು, ಅಡವೀ ಉದ್ದು, ಅಡವೀ ಹೆಸರು, ರೇಣುಕಬೀಜ ||೧೪೮|| ಜೇಷ್ಠಮಧು, ತುಳಸಿ, ವಾಘ್ರನಖ,

ಋಷಭಕ, ಜೀವಕ, ಮುತ್ತಲ ಗಿಡದರಸ, ಕಸ್ತೂರಿ, ನಲಿಕೆ (ಸುಗಂಧ ದ್ರವ್ಯ) ಮಲ್ಲಿಗೆಯ ಮೊಗ್ಗೆ ||೧೪೯|| ಸ್ಪೃಕ್ಕಾ (ಸುಗಂಧಿ ದ್ರವ್ಯ ಭೇದ) ಕೇಶರ, ಕಲ್ಲುಹೂವು, ಜಾಜೀಕಾಯಿ, ಲತಾಕಸ್ತೂರಿ, ಬಾಳದಬೇರು, ದಾಲಚಿನ್ನಿ, ಚಂದನ, ಯಾಲಕ್ಕಿ, ಕರ್ಪೂರ, ಶಿಲ್ಲಕ ವೃಕ್ಷದ ಅಂಟು, ಗಂಧಾಭಿರೋಜಾ (ಗಂಧ ಪ್ರಿಯಂಗು) ||೧೫೦|| ಲವಂಗ, ನಖಲಾ, ಕಂಕೋಲ, ಕೋಷ್ಠ, ಜಟಾಮಾಂಸಿ, ಗನ್ಧಲಾ, ಸ್ಥೌಣೇಯ, (ಗ್ರಂಥಿಪರ್ಣಿ) ತಗರ, ರೋಹಿನ ಹುಲ್ಲು, ಬಜಿ, ಮದನ ಫಲ, ಪ್ಲವ, (ಕೈವರ್ತ ಮುಸ್ತ), ನಾಗಕೇಶರ, ಇವು ಗಳ ೪-೪ ತೊಲಿ, ಕಲ್ಕವನ್ನು ಹಾಕಿ, ||೧೫೧|| ತೈಲವು ಸಿದ್ಧವಾಗಲು ಇಳಿಸಿ, ಆದರಲ್ಲಿ ಸಣ್ಣಾಗಿ ಅರೆದ ಪತ್ರಕಲ್ಕವನ್ನು ಹಾಕಿ ಸೋಸಿ ವಿಧಿಯಂತೆ ಪ್ರಯೋಗಿಸಬೇಕು. ||೧೫೨|| (ಪತ್ರಕಲ್ಕವೆಂದರೆ— ಸುವಾಸ ಹೆಚ್ಚುವದ ಕ್ಕಾಗಿ, ಇಳಿಸಿದ ಕೂಡಲೇ ಬಿಸಿ ಇದ್ದಾಗ ಮುಖ್ಯ ಸುಗಂಧ ದ್ರವ್ಯಗಳ ಕಲ್ಕ ವನ್ನು ಕೂಡಿಸುವದು) ಇದು ಕೆಮ್ಮು, ದಮ್ಮು, ಜ್ವರ, ಮೂರ್ಛೆ, ವಾಂತಿ, ಗುಲ್ಮ, ಉರಃಕ್ಷತ, ಕ್ಷಯ, ಪ್ಲೀಹ, ಶೋಷ, ಅಪಸ್ಮಾರ, ದಾರಿದ್ರ್ಯಗಳನ್ನು ಕಳೆಯುವದು. ||೧೫೩|| ವಾತವ್ಯಾಧಿ ನಾಶಕವಾದ ಈ ಶ್ರೇಷ್ಠ ಬಲಾ ತೈಲ ವನ್ನು ಗುರುಗಳಾದ ಕೃಷ್ಣಾತ್ರೇಯರು ಅಗ್ನಿವೇಶರಿಗೆ ಹೇಳಿದ್ದಾರೆ. ||೧೫೪||

ಅಮೃತಾ ತೈಲವನ್ನು ಹೇಳುತ್ತಾರೆ.

**ಅಮೃತಾಯಾಸ್ತುಲಾಃ ಪಂಚ ದ್ರೋಣೇಷ್ವಷ್ಟಸ್ವಪಾಂ ಪಚೇತ್ ||**
**ಪಾದಶೇಷೇ ಸಮಕ್ಷೀರಂ ತೈಲಸ್ಯಾರ್ಧಾಢಕಂ ಪಚೇತ್ ||೧೫೫||**

**ಏಲಾಮಾಂಸೀನತೋಶೀರಸಾರಿವಾಕುಷ್ಠಚಂದನೈಃ ||**
**ಶತಪುಷ್ಪಾಬಲಾಮೇದಾಮಹಾಮೇದರ್ದ್ಧಿಜೀವಕೈಃ ||೧೫೬||**

**ಕಾಕೋಲೀಕ್ಷೀರಕಾಕೋಲೀಶ್ರಾವಣ್ಯತಿಬಲಾನಖೈಃ ||**
**ಮಹಾಶ್ರಾವಣಿಜೀವಂತೀವಿದಾರೀಕಪಿಕಚ್ಛುಭಿಃ ||೧೫೭||**

**ಶತಾವರೀತಾಮಲಕೀಕರ್ಕಟಾಖ್ಯಾಹರೇಣುಭಿಃ ||**
**ವಚಾಗೋಕ್ಷುರಕೈರಂಡರಾಸ್ನಾಕಾಲಾಸಹಾಚರೈಃ ||೧೫೮||**

**ವೀರಾಸಹೈಲರ್ಷಭಕತ್ರಿದಶಾಹ್ವೈಶ್ಚ ಕಾರ್ಷಿಕೈಃ ||**
**ಮಂಜಿಷ್ಠಾಯಾಸ್ತ್ರಿಕರ್ಷೇಣ ಮಧುಕಾಷ್ಟಪಲೇನ ಚ ||೧೫೯||**

**ಕಲ್ಕೈಸ್ತತ್ ಕ್ಷೀಣವೀರ್ಯಾಗ್ನಿಬಲಸಮ್ಮೂಢಚೇತಸಃ ||**
**ಉನ್ಮಾದಾರತ್ಯಪಸ್ಮಾರೈರಾರ್ತಾಂಶ್ಚ ಪ್ರಕೃತಿಂ ನಯೇತ್ ||೧೬೦||**
**ವಾತವ್ಯಾಧಿಹರಂ ಶ್ರೇಷ್ಠಂ ತೈಲಾಗ್ರ್ಯಮಮೃತಾಹ್ವಯಮ್ ||**
**ಕೃಷ್ಣಾತ್ರೇಯೇಣಗುರುಣಾಭಾಷಿತಂವೈದ್ಯಪೂಜಿತಮ್ ||೧೬೧||**

**ಅರ್ಥ—** ಅಮೃತ ಬಳ್ಳಿ ೨೦೦೦ ತೊಲಿ, ೧೬ ದ್ರೋಣ ನೀರಿನಲ್ಲಿ ಕುದಿಯುಬೇಕು. ¼ ಉಳಿಯಲು ಅದರಲ್ಲಿ ೨೫೬ ತೊಲಿ ಹಾಲು, ೨೫೬ ತೊಲಿ ತೈಲ, ಹಾಕಿ ಕುದಿಯಲು ಇಡಬೇಕು. ||೧೫೫|| ಅದರಲ್ಲಿ ಯಾಲಕ್ಕಿ, ಜಟಾಮಾಂಸಿ, ತಗರ, ಬಾಳದಬೇರು, ಅನಂತಮೂಲ, ಕೋಷ್ಠ, ಚಂದನ, ಸಬಸಿಗೆ ಕಳ್ಳಂಗಡಲೆ, ಮೇದೆ, ಮಹಾಮೇದೆ, ಋದ್ಧಿ, ಜೀವಕ ||೧೫೬|| ಕಾಕೋಲಿ, ಕ್ಷೀರಕಾಕೋಲಿ, ಶ್ರಾವಣಿ, ಅತಿಬಲಾ, ನಖಲಾ, ಮಹಾ ಶ್ರಾವಣೀ, ಜೀವಂತೀ, ನೆಲಗುಂಬಳ, ನಸುಗುನ್ನಿಕಾಯಿ ||೧೫೭|| ಶತಾವರಿ, ನೆಲನೆಲ್ಲಿ, ಕಾಕಡಸಿಂಗಿ, ರೇಣುಕಬೀಜ, ಬಜಿ, ನೆಗ್ಗಿಲು, ಏರಂಡ ಮೂಲ, ರಾಸ್ನಾ, ಕಾಲಾ ( ಕರೇ ಅನಂತ ಮೂಲ ) ಮಳ್ಳಜಾಜೀ ||೧೫೮|| ವೀರಾ (ಕ್ಷೀರವಿದಾರೀ), ಯಾಲಕ್ಕಿ, ಋಷಭಕ, ದೇವದಾರು, ಇವುಗಳ ಕಲ್ಕವನ್ನು ೧—೧ ತೊಲಿ, ಮಂಜಿಷ್ಟೆ ಕಲ್ಕ ೩ ತೊಲಿ, ಜೇಷ್ಠಮಧು ಕಲ್ಕ ೩೨ ತೊಲಿ, ಹಾಕಿ ತೈಲವನ್ನು ಸಿದ್ಧಮಾಡಬೇಕು. ||೧೫೯|| ಇದು ವೀರ್ಯ, ಅಗ್ನಿ, ಬಲಗಳ ಕ್ಷೀಣತೆ, ಚಿತ್ತಭ್ರಮ, ಉನ್ಮಾದ, ಮನಸಿನ ಅಸ್ವಾಸ್ಥ್ಯ, ಅಪಸ್ಮಾರಗಳಿಂದ ಪೀಡಿತರಾದವರ ಪ್ರಕೃತಿಯನ್ನು ಸರಿಪಡಿಸುವದು ||೧೬೦|| ಗುರುಗಳಾದ ಕೃಷ್ಣಾತ್ರೇಯರಿಂದ ಹೇಳಲ್ಪಟ್ಟ, ವೈದ್ಯರಿಗೆ ಮಾನ್ಯವಾದ ಈ ಅಮೃತಾತೈಲವು ಎಲ್ಲ ವಾತವ್ಯಾಧಿನಾಶಕ ಶ್ರೇಷ್ಠ ಔಷಧವಾಗಿದೆ. ||೧೬೧||

**ರಾಸ್ನಾ ತೈಲವನ್ನು ಹೇಳುತ್ತಾರೆ.**

**ರಾಸ್ನಾಸಹಸ್ರನಿರ್ಯೂಹೇ ತೈಲದ್ರೋಣಂ ವಿಪಾಚಯೇತ್ ||**
**ಗಂಧೈರ್ಹೈಮವತೈಃ ಪಿಷ್ಟೈರೇಲಾದ್ಯೈಶ್ಚಾನಿಲಾರ್ತಿನುತ್ ||೧೬೨||**

**ಅರ್ಥ—** ೪೦೦೦ ತೊಲಿ ರಾಸ್ನೆಯ ೨೦ ದ್ರೋಣ ನೀರು ಹಾಕಿ ¼ ಉಳಿಯಿತು ಅದರಲ್ಲಿ ಅಮೃತಾ ತೈಲದಲ್ಲಿ ಹೇಳಿದ ಯಾಲಕ್ಕಿ ಮುಂತಾದವುಗಳ ಮತ್ತು ಹಿಮಾಲಯ ಪರ್ವತದಲ್ಲಿ ಉಂಟಾದ ಬಜಿ ಮುಂತಾದ ಗಂಧ ದ್ರವ್ಯಗಳ ಕಲ್ಕವನ್ನು ¼ ಹಾಕಿ ೨ ದ್ರೋಣ ತೈಲವನ್ನು ಕುದಿಸಬೇಕು. ಅದು ವಾತಶೂಲವನ್ನು ಕಳೆಯುವದು. ||೧೬೨||

ಬಲಾದಿ ತೈಲ, ಪ್ರಸಾರಣ್ಯಾದಿ ತೈಲ, ಅಶ್ವಗಂಧಾದಿ ತೈಲಗಳನ್ನು ಹೇಳುತ್ತಾರೆ.

**ಏಷ ಕಲ್ಪಸ್ತು ಬಲಯೋಃ ಪ್ರಸಾರಣ್ಯಶ್ವಗಂಧಯೋಃ ||**
**ಕ್ವಾಥಕಲ್ಕಪಯೋಭಿರ್ವಾ ಬಲಾದಿನಾಂ ಪಚೇತ್ ಪೃಥಕ್ ||೧೬೩||**

**ಅರ್ಥ—** ಇದರಂತೆ ಕಳ್ಳಂಗಡ್ಲೆ, ಹಸರಾಣಿ, ಅಶ್ವಗಂಧ ಇವುಗಳ ತೈಲವನ್ನು ಸಿದ್ಧಮಾಡಬೇಕು. ಹೇಗಂದರೆ:— ಇವುಗಳನ್ನು ಬೇರೆ ಬೇರೆಯಾಗಿ ೪೦೦೦ ತೊಲಿ ತಕ್ಕೊಂಡು ೨೦ ದ್ರೋಣ ನೀರಿನಲ್ಲಿ ಕುದಿಸಿ ¼ ಉಳಿಯಲು ಅದರಲ್ಲಿ ಅಮೃತಾ ತೈಲದಲ್ಲಿ ಹೇಳಿದ ಏಲಾದಿಗಳ ಕಲ್ಕವನ್ನು ಮತ್ತು ಹಿಮಾಲಯದಲ್ಲಿ ಹುಟ್ಟುವ ಗಂಧದ್ರವ್ಯಗಳ ಕಲ್ಕವನ್ನು ಹಾಕಿ ೨ ದ್ರೋಣ ತೈಲವನ್ನು ಸಿದ್ಧಮಾಡಬೇಕು. ಅಂದರೆ ಬಲಾತೈಲ, ಪ್ರಸಾರಣೀ ತೈಲ, ಅಶ್ವಗಂಧಾ ತೈಲಗಳು ಸಿದ್ಧವಾಗುವವು. ಅಥವಾ ಇವುಗಳ ಕಷಾಯದಲ್ಲಿ ಅವುಗಳದೇ ಕಲ್ಕವನ್ನೂ ತೈಲದ ಸಮ ಹಾಲನ್ನೂ ಹಾಕಿ ತೈಲವನ್ನು ಸಿದ್ಧಮಾಡಬೇಕು. ||೧೬೩||

ಮೂಲಕಾದಿ ತೈಲವನ್ನು ಹೇಳುತ್ತಾರೆ.

**ಮೂಲಕಸ್ವರಸಂ ಕ್ಷೀರಂ ತೈಲಂ ದಧ್ಯಮ್ಲಕಾಂಜಿಕಮ್ ||**
**ತುಲ್ಯಂ ವಿಪಾಚಯೇತ್‌ಕಲ್ಕೈರ್ಬಲಾಚಿತ್ರಕಸೈಂಧವೈಃ ||೧೬೪||**
**ಪಿಪ್ಪಲ್ಯತಿವಿಷಾರಾಸ್ನಾಚವಿಕಾಗುರುಚಿತ್ರಕೈಃ ||**
**ಭಲ್ಲಾತಕವಚಾಕುಷ್ಠಶ್ವದಂಷ್ಟ್ರಾವಿಶ್ವಭೇಷಜೈಃ ||೧೬೫||**
**ಪುಷ್ಕರಾಹ್ವಶಟೀಬಿಲ್ವಶತಾಹ್ವಾನತದಾರುಭಿಃ ||**
**ತತ್ ಸಿದ್ಧಂ ಪೀತಮತ್ಯುಗ್ರಾನ್ ಹಂತಿ ವಾತಾತ್ಮಕಾನ್‌ಗದಾನ್ ||೧೬೬||**

**ಅರ್ಥ—** ಮೂಲಂಗಿಯ ರಸ, ಹಾಲು, ತೈಲ, ಹುಳಿಮೊಸರು, ಹುಳಿಗಂಜಿ ಇವುಗಳನ್ನು ಸಮನಾಗಿ ತಕ್ಕೊಂಡು ಅದರಲ್ಲಿ ಕಳ್ಳಂಗಡ್ಲೆ, ಚಿತ್ರಕ, ಸೈಂಧವ ||೧೬೪|| ಹಿಪ್ಪಲಿ, ಅತಿವಿಷ, ರಾಸ್ನಾ, ಚವಕ, ಅಗುರು, ಚಿತ್ರಕ, ಕೇರು, ಬಜೆ, ಕೋಷ್ಠ, ನೆಗ್ಗಿಲು, ಶುಂಠಿ ||೧೬೫|| ಪುಷ್ಕರಮೂಲ, ಕಚೋರಾ, ಬಿಲ್ವ, ಬಡೀಶೇಪ, ಅಗರ, ದೇವದಾರುಗಳ ಕಲ್ಕವನ್ನು ತೈಲದ

¼ ಹಾಕಿ ತೈಲವನ್ನು ಸಿದ್ಧಮಾಡಬೇಕು. ಇದನ್ನು ಕುಡಿದರೆ ಅತ್ಯುಗ್ರವಾದ ವಾತದ ರೋಗಗಳು ಹೋಗುವವು. ||೧೬೬||

ವೃಷಮೂಲಾದಿ ತೈಲವನ್ನು ಹೇಳುತ್ತಾರೆ.

**ವೃಷಮೂಲಗುಡೂಚ್ಯೋಶ್ಚ ದ್ವಿಶತಸ್ಯ ಶತಸ್ಯ ಸು ||**
**ಚಿತ್ರಕಾತ್ ಸಾಶ್ವಗಂಧಾಚ್ಚ ಕ್ವಾಥೇ ತೈಲಾಢಕಂ ಪಚೇತ್ ||೧೬೭||**

**ಸಕ್ಷೀರಂ ವಾಯುನಾ ಭಗ್ನೇ ದದ್ಯಾತ್ ಜರ್ಜರಿತೇ ತಥಾ ||**
**ಪ್ರಾಕ್‌ತೈಲಾವಾಪಸಿದ್ಧಂ ಚ ಭವೇದೇತದ್ ಗುಣೋತ್ತರಮ್ ||೧೬೮||**

**ಅರ್ಥ—** ಆಡಸಲಬೇರು ೪೦೦ ತೊಲಿ, ಅಮೃತಬಳ್ಳಿ ೪೦೦ ತೊಲಿ, ಚಿತ್ರಕ ೪೦೦ ತೊಲಿ, ಅಶ್ವಗಂಧ ೪೦೦ ತೊಲಿ, ಇವುಗಳನ್ನು ಬೇರೆ ಬೇರೆಯಾಗಿ ತಕ್ಕೊಂಡು ೧-೧ ದ್ರೋಣ ನೀರು ಹಾಕಿ, ¼ ಉಳಿಸಿ, ೫೧೨-೫೧೨ ತೊಲಿ ಎಣ್ಣೆಗಳನ್ನು ಕಲ್ಕಹಾಕದಲೇ ಅಷ್ಟೇ ಹಾಲು ಹಾಕಿ ಸಿದ್ಧಮಾಡಬೇಕು. ||೧೬೭|| ಇದನ್ನು ವಾತದಿಂದ ಮುರಿದಂತೆ ಆದ, ಜರ್ಜರವಾದ ರೋಗಿಗೆ ಕೊಡಬೇಕು. ಹಿಂದಿನ ತೈಲಕ್ಕಾಗಿ ಹೇಳಿದ ಬಲಾದಿಗಳ ಕಲ್ಕವನ್ನು ಹಾಕಿ, ಇವುಗಳನ್ನು ಮಾಡಿದರೆ ಹೆಚ್ಚು ಗುಣಕೊಡುವದು.

ರಾಸ್ನಾದಿ ತೈಲವನ್ನು ಹೇಳುತ್ತಾರೆ.

**ರಾಸ್ನಾಶಿರೀಷಯಷ್ಟ್ಯಾಹ್ವಶುಂಠೀಸಹಚರಾಮೃತಾಃ ||**
**ಶ್ಯೋಣಾಕಂ ದಾರುಕಂ ಮಾಂಸೀಹಯಗಂಧಾತ್ರಿಕಂಟಕಾಃ ||೧೬೯||**

**ವಿಷಾಂ ದಶಪಲಾನ್ ಭಾಗಾನ್ ಕಷಾಯಮುಪಕಲ್ಪಯೇತ್ ||**
**ತತಸ್ತೇನ ಕಷಾಯೇಣ ಸರ್ವಗಂಧೈಶ್ಚ ಕಾರ್ಷಿಕೈಃ ||೧೭೦||**

**ದಧ್ಯಾರನಾಲಮಾಷಾಂಬು ಮೂಲಕೇಕ್ಷುರಸೈಃ ಶುಭೈಃ ||**
**ಪೃಥಕ್‌ಪ್ರಸ್ಥೋನ್ಮಿತೈಃ ಸಾರ್ಧಂ ತೈಲಪ್ರಸ್ಥಂ ವಿಪಾಚಯೇತ್ ||೧೭೧||**

**ಪ್ಲೀಹಮೂತ್ರಗ್ರಹಶ್ವಾಸ ಕಾಸಮಾರುತಕೋಪನುತ್ ||**
**ರಾಸ್ನಾತೈಲಮಿತಿಖ್ಯಾತಂ ಪುನರ್ವಸುನಿದರ್ಶಿತಮ್ ||೧೭೨||**

ಮೂಲಕತೈಲವನ್ನು ಹೇಳುತ್ತಾರೆ—

**ಯವಕೋಲಕುಲತ್ಥಾನಾಂ ಮತ್ಸ್ಯಾನಾಂ ಶಿಗ್ರುಬಿಲ್ವಯೋಃ ||**
**ರಸೇನ ಮೂಲಕಾನಾಂ ಚ ತೈಲಂ ದಧಿಪಯೋನ್ವಿತಮ್ ||೧೭೩||**

ಸಾಧಯಿತ್ವಾ ಭಿಷಕ್ ದದ್ಯಾತ್ ಸರ್ವವಾತಮಯಾಪಹಮ್ ||

ಲಶುನಾದಿ ತೈಲವನ್ನು ಹೇಳುತ್ತಾರೆ—

ಲಶುನಸ್ಯ ರಸೇ ಸಿದ್ಧಂ ತೈಲಮೇಭಿಶ್ಚ ವಾತನುತ್ || ||೧೭೪||
ತೈಲಾನ್ಯೇತಾನ್ಯೃತುಸ್ನಾತಾಮಂಗನಾಂ ಪಾಯಯೇತ ಚ ||
ಪೀತ್ವಾನ್ಯತಮಮೇತೇಷಾಂ ವಂಧ್ಯಾಪಿ ಜನಯೇತ್ ಸುತಮ್ ||೧೭೫||
ಯಚ್ಚ ಶಿತಜ್ವರೇ ತೈಲಮಗುರ್ವಾದ್ಯಮುದಾಹೃತಮ್ ||
ಅನೇಕಶತಶಸ್ತಚ್ಚ ಸಿದ್ಧಂ ಸ್ಯಾದ್ ವಾತರೋಗನುತ್ ||೧೭೬||
ವಕ್ಷ್ಯಂತೆ ಯಾಲಿ ತೈಲಾನಿ ವಾತಶೋಣಿತಕೇಽಪಿ ಚ ||
ತಾನಿ ತಾನಿ ಚ ಶಾಂತ್ಯರ್ಥಂ ಸಿದ್ಧಿಕಾಮಃ ಪ್ರಯೋಜಯೇತ್ ||೧೭೭||
ನಾಸಿ ತೈಲಾತ್ಪರಂ ಕಿಂಚಿದೌಷಧಂ ಮಾರುತಾಪಹಮ್ ||
ವ್ಯವಾಯ್ಯುಷ್ಣಗುರುಸ್ನೇಹಾತ್ ಸಂಸ್ಕಾರಾದ್ಬಲವತ್ತರಮ್ ||೧೭೮||
ಗಣೈರ್ವಾತಹರೈಸ್ತಸ್ಮಾಚ್ಛತಶೋಽಥ ಸಹಸ್ರಶಃ ||
ಸಿದ್ಧಂ ಕ್ಷಿಪ್ರತರಂ ಹಂತಿ ಸೂಕ್ಷ್ಮಮಾರ್ಗಸ್ಥಿತಾನ್ ಗದಾನ್ ||೧೭೯||

**ಅರ್ಥ—** ರಾಸ್ನಾ, ಶಿರೀಷ, ಜೇಷ್ಠಮಧು, ಶುಂಠಿ, ಮುಳ್ಳುಜಾಜಿ, ಅಮೃತಬಳ್ಳಿ, ಹೆಮ್ಮರ, ದೇವದಾರು, ಜಟಾಮಾಂಸಿ, ಅಶ್ವಗಂಧ, ಸೆಗ್ಗಿಲು ||೧೬೯|| ಇವುಗಳನ್ನು ೪೦-೪೦ ತೊಲಿ ತಕ್ಕೊಂಡು ೨ ದ್ರೋಣ ನೀರು ಹಾಕಿ ¼ ಕಷಾಯ ಮಾಡಬೇಕು. ಅದರಲ್ಲಿ ದಾಲಚಿನ್ನಿ, ಯಾಲಕ್ಕಿ

ಚತುರ್ಜಾತಕಕರ್ಪೂರಕಕ್ಕೋಲಾಗುರುಶಿಲ್ಹಕಲಮ್ ||
ಲವಂಗಸಹಿತಶ್ಚೈವ ಸರ್ವಗಂಧಂ ವಿನಿರ್ದಿಶೇತ್ ||೧೮೦||

ಮುಂತಾದ ಎಲ್ಲ ಗಂಧದ್ರವ್ಯಗಳ ಕಲ್ಕವನ್ನು ೧-೧ ತೊಲಿ ||೧೮೦|| ಮೊಸರು, ಗಂಜಿ, ಉದ್ದಿನಕಷಾಯ, ಮೂಲಂಗಿಕಷಾಯ, ಕಬ್ಬಿನರಸ, ಇವುಗಳನ್ನು ಬೇರೆ ಬೇರೆ ೧೨೮ತೊಲಿ ಹಾಕಿ, ೧೨೮ತೊಲಿ ತೈಲವನ್ನು ಸಿದ್ಧಮಾಡಬೇಕು. ||೧೮೧|| ಪುನರ್ವಸುಗಳಿಂದ ಹೇಳಲ್ಪಟ್ಟ ಪ್ರಸಿದ್ಧವಾದ ರಾಸ್ನಾತೈಲವು ಪ್ಲೀಹ, ಮೂತ್ರಘಾತ, ಶ್ವಾಸ, ಕಾಸ, ವಾತಕೋಪಗಳನ್ನು ಕಳೆಯುವದು.||೧೮೨|| ಜವೆ, ಬೋರೆ ಹುರಳಿ, ಮೀನು, ನುಗ್ಗಿ, ಬಿಲ್ವ, ಮೂಲಂಗಿಗಳ ಬೇರೆಬೇರೆ ಕಷಾಯದಲ್ಲಿ ಹಾಲು ಮೊಸರುಗಳನ್ನು ಹಾಕಿ ಬೇರೆ ಬೇರೆ ತೈಲಗಳನ್ನು ಸಿದ್ಧಮಾಡಬೇಕು. ||೧೮೩|| ಇವು ಎಲ್ಲ ವಾತರೋಗಗಳನ್ನು ಕಳೆಯುವವು. ಇವುಗಳನ್ನು ಬಳ್ಳೊಳ್ಳಿ ರಸವನ್ನು

ಹಾಕಿ, ಸಿದ್ಧಮಾಡಿದ ತೈಲವು ವಾತನಾಶಕವಾಗಿದೆ. ||೧೭೪|| ಈ ಬಲಾದಿ ತೈಲಗಳಲ್ಲಿ ಒಂದನ್ನು ಋತುಸ್ನಾತ ಹೆಂಗಸರಿಗೆ ಕುಡಿಸಿದರೆ ಬಂಜೆಯು ಮಕ್ಕಳನ್ನು ಹೆರುವಳು. ||೧೭೫|| ಶೀತ ಜ್ವರದಲ್ಲಿ ಹೇಳಿದ ಅಗುರ್ವಾದಿ ತೈಲವನ್ನು ನೂರಾರು ಸಾರಿ ಸಿದ್ಧಮಾಡಿದರೆ ಅದು ವಾತರೋಗನಾಶಕವಾಗುವದು. ||೧೭೬|| ವಾತರಕ್ತ ಅಧ್ಯಾಯದಲ್ಲಿ ಮುಂದೆ ಹೇಳಲ್ಪಡುವ ತೈಲಗಳನ್ನು ವಾತರೋಗದ ನಾಶನವನ್ನು ಬಯಸುವವನು ಅವುಗಳ ನಾಶಕ್ಕಾಗಿ ಉಪಯೋಗಿಸಬೇಕು. ||೧೭೭|| ವ್ಯವಾಯಿ (ದೇಹದಲ್ಲೆಲ್ಲ ವ್ಯಾಪಿಸಿ ಪಚನವಾಗುವದು) ಉಷ್ಣ, ಜಡ, ಸ್ನಿಗ್ಧ ಗುಣವುಳ್ಳದ್ದರಿಂದ ತೈಲದಂಥ ವಾತನಾಶಕವಾದ ಬೇರೆ ಯಾವ ಔಷಧವೂ ಇರುವದಿಲ್ಲ. ಸಂಸ್ಕಾರ ಕೊಟ್ಟರಂತೂ ಅದು ಹೆಚ್ಚು ಬಲಿಷ್ಠವಾಗುತ್ತದೆ. ||೧೭೮|| ಆದ್ದರಿಂದ ವಾತಹರ ಗಣಗಳಿಂದ ನೂರಾರು ಅಥವಾ ಸಾವಿರಾರು ಸಾರೆ ಅದನ್ನು ಸಿದ್ಧಮಾಡಿದರೆ ಅದು ಸೂಕ್ಷ್ಮಮಾರ್ಗವಲ್ಲಿರುವ ರೋಗಗಳನ್ನು ಕೂಡ ಕಳೆಯುವದು.||೧೭೯||

ಬೇರೆ ದೋಷಗಳಿಂದ ಕೂಡಿದ ವಾತಕ್ಕೆ ಚಿಕಿತ್ಸೆಯನ್ನು ಹೇಳುತ್ತಾರೆ.

ಕ್ರಿಯಾ ಸಾಧಾರಣೀ ಸರ್ವಾ ಸಂಸೃಷ್ಟಾ ಚಾಪಿ ಶಸ್ಯತೆ ||
ವಾತಪಿತ್ತಾದಿಭಿಃ ಸ್ರೋತಃ ಸ್ವಾವೃತೇಷು ವಿಶೇಷತಃ ||೧೮೦||

ಪಿತ್ತಾವೃತೇ ವಿಶೇಷೇಣ ಶೀತಾಮುಷ್ಣಾಂ ತಥಾ ಕ್ರಿಯಾಂ ||
ವ್ಯತ್ಯಾಸಾತ್ ಕಾರಯೇತ್ ಸರ್ಪಿರ್ಜೀವನೀಯಂ ಚ ಶಸ್ಯತೇ ||೧೮೧||

ಧನ್ವಮಾಂಸಂ ಯವಾಃ ಶಾಲಿರ್ಯಾಪನಾಃ ಕ್ಷೀರಬಸ್ತಯಃ ||
ವಿರೇಕಃ ಕ್ಷೀರಪಾನಂ ಚ ಪಂಚಮೂಲೀ ಬಲಾಶೃತಮ್ ||೧೮೨||

ಮಧುಯಷ್ಟೀಬಲಾತೈಲಘೃತಕ್ಷೀರೈಶ್ಚ ಸೇಚನಮ್ ||
ಪಂಚಮೂಲೀಕಷಾಯೇಣ ಕುರ್ಯಾದ್ ವಾ ಶೀತವಾರಿಣಾ ||೧೮೩||

ಕಫಾವೃತೇ ಯವಾನ್ನಾನಿ ಜಾಂಗಲಾ ಮೃಗಪಕ್ಷಿಣಃ ||
ಸ್ವೇದಾ ನಿರೂಹಾಸ್ತೀಕ್ಷ್ಣಂ ಚ ವಮನಂ ಸವಿರೇಚನಮ್ ||೧೮೪||

ಪುರಾಣಸರ್ಪಿಸ್ತೈಲಂ ಚ ತಿಲಸರ್ಷಪಜಂ ಹಿತಮ್ ||
ಸಂಸೃಷ್ಟೇ ಕಫಪಿತ್ತಾಭ್ಯಾಂ ಪಿತ್ತಮಾದೌ ವಿನಿರ್ಜಯೇತ್ ||೧೮೫||

ಆಮಾಶಯಗತಂ ಮತ್ವಾ ಕಫಂ ವಮನಮಾದಿಶೇತ್ ||
ಪಕ್ವಾಶಯೇ ವಿರೇಕಂ ತು ಪಿತ್ತೇಸರ್ವತ್ರಗೇ ತಥಾ ||೧೮೬||

ಸ್ವೇದೈರ್ವಿಷ್ಯಂದಿತಃ ಶ್ಲೇಷ್ಮಾ ಯದಾ ಪಕ್ವಾಶಯಸ್ಥಿತಃ ||
ಪಿತ್ತಂ ವಾ ದರ್ಶಯೇಲ್ಲಿಂಗಂ ಬಸ್ತಿಭಿಸ್ತೌ ವಿನಿರ್ಹರೇತ್ ||೧೮೭||

ಶ್ಲೇಷ್ಮಣಾನುಗತಂ ವಾತಮುಷ್ಣೈರ್ಗೋಮೂತ್ರಸಂಯುತೈಃ ||
ನಿರೂಹೈಃ ಪಿತ್ತಸಂಸೃಷ್ಟಂ ನಿರ್ಹರೇತ್ಕ್ಷೀರಸಂಯುತೈಃ ||೧೮೮||

ಮಧುರೌಷಧಸಿದ್ಧೈಶ್ಚ ತೈಲೈಸ್ತಮನುವಾಸಯೇತ್ ||
ಶಿರೋಗತೇ ತು ಸಕಫೇ ಧೂಮನಸ್ಯಾದಿ ಕಾರಯೇತ್ ||೧೮೯||

ಹೃತೇ ಪಿತ್ತೇ ಕಫೇ ಚ ಸ್ಯಾದುರಃ ಸ್ರೋತೋಽನುಗೋಽನಿಲಃ ||
ಸಶೇಷಃ ಸ್ಯಾತ್ ಕ್ರಿಯಾ ತತ್ರ ಕಾರ್ಯಾ ಕೇವಲವಾತಿಕೀ ||೧೯೦||

ಕಾರಯೇತ್ ರಕ್ತಸಂಸೃಷ್ಟೇ ವಾತಶೋಣಿತಿಕೀಕ್ರಿಯಾಮ್ ||
ಪ್ರಮೇಹವಾತಮೇದೋಘ್ನೀಮಾಮವಾತೇಪ್ರಯೋಜಯೇತ್ ||೧೯೧||

ಸ್ವೇದಾಭ್ಯಂಗರಸಕ್ಷೀರಸ್ನೇಹಾ ಮಾಂಸಾವೃತೇ ಹಿತಾಃ ||
ಮಹಾಸ್ನೇಹೋಸ್ಥಿಮಜ್ಜಸ್ಥೇ ಪೂರ್ವವದ್ರೇತಸಾವೃತೇ ||೧೯೨||

ಅನ್ನಾವೃತೇ ತದುಲ್ಲೇಖಃ ಪಾಚನಂ ದೀಪನಂ ಲಘು ||
ಮೂತ್ರಲಾನಿ ಚ ಮೂತ್ರಸ್ಥೇ ಸ್ವೇದಾಃ ಸೋತ್ತರಬಸ್ತಯಃ ||೧೯೩||

ಏರಂಡತೈಲಂ ವರ್ಚಃಸ್ಥೇ ಬಸ್ತಿಃ ಸ್ನೇಹಾಶ್ಚ ಭೇದಿನಃ ||
ಸ್ವಸ್ಥಾನಸ್ಥೋ ಬಲೀ ದೋಷಃ ಪ್ರಾಕ್ ತಂ ಸ್ವೈರೌಷಧೈರ್ಜಯೇತ್ ||೧೯೪||

ವಮನೈರ್ವಾ ವಿರೇಕೈರ್ವಾ ಬಸ್ತಿಭಿಃ ಶಮನೇನ ವಾ ||
ಇತ್ಯುಕ್ತಮಾವೃತೇ ವಾತೇ ಪಿತ್ತಾದಿಭಿರ್ಯಥಾಯಥಮ್ ||೧೯೫||

**ಅರ್ಥ—** ವಾತ ಪಿತ್ತ ಮುಂತಾದವುಗಳಿಂದ ಸ್ರೋತಃಸ್ಸುಗಳು ಮುಚ್ಚಿಕೊಂಡಿದ್ದರೆ, ವಾತದ ಸಾಮಾನ್ಯ ಚಿಕಿತ್ಸೆಯನ್ನೂ ಒಮ್ಮೊಮ್ಮೆ ಮಿಶ್ರ ಚಿಕಿತ್ಸೆಯನ್ನೂ ವಿಶೇಷವಾಗಿ ಮಾಡಬೇಕು. ||೧೮೦|| ವಾಯುವು ಪಿತ್ತದಿಂದ ಮುಚ್ಚಿರಲು ವಿಶೇಷವಾಗಿ ಮೊದಲು ಶೀತ, ಆಮೇಲೆ ಉಷ್ಣ, ಮೊದಲು ಉಷ್ಣ, ಆಮೇಲೆ ಶೀತ, ಹೀಗೆ ವ್ಯತ್ಯಾಸದಿಂದ ಚಿಕಿತ್ಸೆಯನ್ನು ಮಾಡಬೇಕು. ಜೀವನೀಯ ಔಷಧಗಳಿಂದ ಸಿದ್ಧಮಾಡಿದ ಘೃತವನ್ನು (ವಾತರಕ್ತ ಚಿಕಿತ್ಸೋಕ್ತ) ಕೊಡಬೇಕು. ||೧೮೧|| ಜಾಂಗಲಮಾಂಸ, ಜವೆ, ಅಕ್ಕಿ (ಸಿದ್ಧಿ ಸ್ಥಾನದಲ್ಲಿ

ಮುಂದೆ ಹೇಳುವ) ಯಾಪನಬಸ್ತಿ, ಕ್ಷೀರಬಸ್ತಿ, ವಿರೇಚನ, ಕ್ಷೀರಪಾನ, ಲಘು ಪಂಚಮೂಲ, ಕಳ್ಳಿಗಂಡ್ಲಿಗಳ ಕಷಾಯ, ||೧೮೨|| ಗಳನ್ನು ಕೊಡಬೇಕು. ಶ್ಲೇಷ್ಮಘ್ನ, ಕಳ್ಳಿಂಗಡಲಿಗಳ ಕಷಾಯದಿಂದ ಸಿದ್ಧಮಾಡಿದ ತೈಲ, ಘೃತ ಕ್ಷೀರಗಳಿಂದಲೂ ಲಘುಪಂಚಮೂಲದ ಕಷಾಯದಿಂದ ಅಥವಾ ತಣ್ಣೀರಿನಿಂದ ಸೇಚನ ಮಾಡಬೇಕು. ||೧೮೩|| ವಾಯುವು ಕಫದಿಂದ ಆವೃತವಾಗಲು ಜವೆಯ ಅನ್ನ, ಜಾಂಗಲದೇಶದ ಮೃಗಪಕ್ಷಿಗಳ ಮಾಂಸ, ಸ್ವೇದ, ನಿರೂಹಬಸ್ತಿ ತೀಕ್ಷ್ಣವಾದ ವಮನ ಮತ್ತು ವಿರೇಚನ ||೧೮೪|| ಹಳೇತುಪ್ಪ, ಎಳ್ಳು, ಮತ್ತು ಸಾಸಿವೆಗಳು ಎಣ್ಣೆಗಳು ಹಿತಕರವಾಗಿವೆ. ವಾತವು ಕಫಪಿತ್ತದಿಂದ ಕೂಡಿದ್ದರೆ, ಮೊದಲು ಪಿತ್ತವನ್ನು ಕಳೆಯಬೇಕು. ||೧೮೫|| ಕಫವು ಆಮಾಶಯದಲ್ಲಿ ಇದ್ದರೆ ವಮನವನ್ನು, ಪಕ್ವಾಶಯದಲ್ಲಿದ್ದರೆ ವಿರೇಚನವನ್ನು ಕೊಡಬೇಕು. ಸ್ವೇದದಿಂದ ಕರಗಿದ ಕಫವು ಪಕ್ವಾಶಯದಲ್ಲಿದ್ದರೆ ಅಥವಾ ಅಲ್ಲಿ ಪಿತ್ತದ ಲಕ್ಷಣಗಳು ಕಂಡು ಬಂದರೆ ಬಸ್ತಿಗಳನ್ನು ಕೊಟ್ಟು ಅವುಗಳನ್ನು ಹೊರಗೆ ಹಾಕಬೇಕು. ||೧೮೭|| ಕಫದಿಂದ ಕೂಡಿದ ವಾತವನ್ನು ಉಷ್ಣ ದ್ರವ್ಯಗಳಿಂದ ಮಾಡಿದ ಗೋಮೂತ್ರ ಹಾಕಿದ ನಿರೂಹ ಬಸ್ತಿಗಳಿಂದಲೂ ಪಿತ್ತದಿಂದ ಕೂಡಿದ ವಾತವನ್ನು ಹಾಲುಹಾಕಿದ ನಿರೂಹಗಳಿಂದಲೂ ತೆಗೆಯಬೇಕು. ||೧೮೮|| ಮಧುರ ಔಷಧಗಳಿಂದ ಮಾಡಿದ ತೈಲಗಳಿಂದ ಅನುವಾಸನ ಬಸ್ತಿಯನ್ನು ಕೊಡಬೇಕು. ಕಫ ಯುಕ್ತವಾತವು ತಲೆಯಲ್ಲಿದ್ದರೆ ಧೂಮನಸ್ಯ ಮುಂತಾದವುಗಳನ್ನು ಮಾಡಬೇಕು. ||೧೮೯|| ಪಿತ್ತ ಕಫಗಳು ಹೋಗಲು ವಾತವು ಹೃದಯ ಸ್ರೋತಸ್ಸಿನಲ್ಲಿ ಉಳಿದರೆ ಅಲ್ಲಿ ಕೇವಲ ವಾತದ ಚಿಕಿತ್ಸೆಯನ್ನು ಮಾಡಬೇಕು. ||೧೯೦|| ವಾತವು ರಕ್ತದಿಂದ ಕೂಡಿದ್ದರೆ ವಾತರಕ್ತದ ಚಿಕಿತ್ಸೆಯನ್ನು ಮಾಡಬೇಕು. ಆಮ ವಾತದಲ್ಲಿ ಪ್ರಮೇಹ ವಾತ ಮೇದೋನಾಶಕ ಚಿಕಿತ್ಸೆಯನ್ನು ಮಾಡಬೇಕು. ||೧೯೧|| ವಾತವು ಮಾಂಸದಿಂದ ಆವೃತವಾಗಿರಲು ಸ್ವೇದ, ಅಭ್ಯಂಗ, ಮಾಂಸರಸ, ಹಾಲು, ಮತ್ತು ಸ್ನೇಹಗಳು ಹಿತಕರವು. ವಾತವು ಅಸ್ಥಿ ಮಜ್ಜಗಳಲ್ಲಿರಲು ಮಹಾ ಸ್ನೇಹವನ್ನು ಕೊಡಬೇಕು. ಶುಕ್ರದಿಂದ ಆವೃತವಾಗಲು ಹಿಂದೆ ಹೇಳಿದ ಶುಕ್ರಗತ ವಾತ ಚಿಕಿತ್ಸೆಯನ್ನು ಮಾಡಬೇಕು. ||೧೯೨|| ವಾಯುವು ಅನ್ನದಿಂದ ಆವೃತವಾಗಿರಲು ವಮನವನ್ನೂ ಪಾಚನ, ದೀಪನ, ಔಷಧ ಲಘು ಆಹಾರವನ್ನು ಮಾಡಿಸಬೇಕು. ವಾತವು ಮೂತ್ರದಲ್ಲಿ ಇರಲು ಮೂತ್ರಲ ಔಷಧ, ಸ್ವೇದ, ಉತ್ತರ ಬಸ್ತಿಗಳನ್ನು ಕೊಡಬೇಕು. ||೧೯೩|| ವಾಯುವು ಮಲದಲ್ಲಿ ಇದ್ದರೆ

ಓಡಲ ಎಣ್ಣೆ, ಬಸ್ತಿ, ವಿರೇಚಕ ಸ್ನೇಹಗಳನ್ನು ಕೊಡಬೇಕು. ದೋಷಗಳು ತಮ್ಮ ಸ್ಥಾನದಲ್ಲಿಯೇ ಇದ್ದು, ಬಲಿಷ್ಠವಾಗಿಯೇ ಇದ್ದರೆ ಅವುಗಳನ್ನು ಅವುಗಳ ಶೋಧನ, ಶಮನ ಔಷಧಗಳಿಂದಲೇ ||೯೪|| ಅಂದರೆ ಕಫವು ತನ್ನ ಸ್ಥಾನದಲ್ಲಿದ್ದರೆ ವಮನವನ್ನು ಅಥವಾ ಜೇನು ತುಪ್ಪವನ್ನೂ, ಪಿತ್ತವು ತನ್ನ ಸ್ಥಾನದಲ್ಲಿ ಇದ್ದರೆ ವಿರೇಚನವನ್ನು ಅಥವಾ ಘೃತವನ್ನು, ವಾತವು ತನ್ನ ಸ್ಥಾನದಲ್ಲಿದ್ದರೆ ಬಸ್ತಿಯನ್ನು ಅಥವಾ ತೈಲವನ್ನು ಕೊಟ್ಟು ಕಳೆಯಬೇಕು. ಈ ಪ್ರಕಾರ ಪಿತ್ತ ಮುಂತಾದವುಗಳಿಂದ ಆವೃವಾದ ವಾತಕ್ಕೆ ಅವುಗಳಿಗೆ ಯೋಗ್ಯವಾದ ಚಿಕಿತ್ಸೆಯು ಹೇಳಲ್ಪಟ್ಟಿತು. ||೯೫||

ವಾತಗಳ ಪರಸ್ಪರಾವರಣವನ್ನು ಹೇಳುತ್ತಾರೆ.

**ಮಾರುತಾನಾಂ ಚ ಪಂಚಾನಾಮನ್ಯೋನ್ಯಾವರಣಂ ಶೃಣು ||**
**ಲಿಂಗಂ ವ್ಯಾಸಸಮಾಸಾಭ್ಯಾಮುಚ್ಯಮಾನಂ ಮಯಾನಘ ||೯೬||**

**ಅರ್ಥ—** ಇನ್ನು ಮೇಲೆ ಐದು ವಾಯುಗಳ ಪರಸ್ಪರಗಳಿಂದ ಆಗುವ ಆವರಣಗಳನ್ನೂ ಸಂಕ್ಷೇಪ ಮತ್ತು ವಿಸ್ತಾರದಿಂದ ಅವುಗಳ ಲಕ್ಷಣಗಳನ್ನೂ ಹೇಳುತ್ತೇನೆ; ಕೇಳಿರಿ. ||೯೬||

**ಪ್ರಾಣೋ ವೃಣೋತ್ಯುದಾನಾದೀನ್ ಪ್ರಾಣಂ ವೃಣ್ವಂತಿ ತೇಽಪಿ ಚ ||**
**ಉದಾನಾದ್ಯಾಸ್ತಥಾನ್ಯೋನ್ಯಂ ಸರ್ವ ಏವ ಯಥಾಕ್ರಮಮ್ ||೯೭||**
**ವಿಂಶತಿರ್ವರಣಾನ್ಯೇತಾನ್ಯುಲ್ಬಣಾನಾಂ ಪಸಸ್ಪರಮ್ ||**
**ಮಾರುತಾನಾಂ ಚ ಪಂಚಾನಾಂ ತಾನಿ ಸಮ್ಯಕ್ ಪ್ರತರ್ಕಯೇತ್ ||೯೮||**

**ಅರ್ಥ—** ಪ್ರಾಣ ವಾಯುವು ಉದಾನ ಮುಂತಾದವುಗಳನ್ನು ಆವರಿಸುವದು. ಅವಾದರೂ ಪ್ರಾಣವನ್ನು ಆವರಿಸುವವು. ಉದಾನಾದಿಗಳು ಎಲ್ಲವೂ ಪರಸ್ಪರವಾಗಿ ಕ್ರಮದಿಂದ ಆವರಿಸುವವು. ||೯೭|| ಪ್ರಬಲವಾದ ಈ ಐದು ವಾಯುಗಳ ಆವರಣಗಳು ೨೦ ಇರುತ್ತವೆ. ಅವುಗಳನ್ನು ಚೆನ್ನಾಗಿ ಆಲೋಚಿಸಬೇಕು. ||೯೮||

ಟಿಪ್ಪಣಿ:— ೧ ಪ್ರಾಣಾವೃತ ಉದಾನ ೨ ಪ್ರಾಣಾವೃತ ಸಮಾನ ೩ ಪ್ರಾಣಾವೃತ ವ್ಯಾನ ೪ ಪ್ರಾಣಾವೃತ ಅಪಾನ ೫ ಉದಾನಾವೃತ ಪ್ರಾಣ ೬ ಸಮಾನಾ

ವೃತ ಪ್ರಾಣ ೭ ವ್ಯಾನಾವೃತ ಪ್ರಾಣ ೮ ಅಪಾನಾವೃತ ಪ್ರಾಣ ೯ ಉದಾನಾವೃತ ಸಮಾನ ೧೦ ಉದಾನಾವೃತ ವ್ಯಾನ ೧೧ ಉದಾನಾವೃತ ಅಪಾನ ೧೨ ಸಮಾನಾವೃತ ಉದಾನ ೧೩ ವ್ಯಾನಾವೃತ ಉದಾನ ೧೪ ಅಪಾನಾವೃತ ಉದಾನ ೧೫ ಸಮಾನಾವೃತ ವ್ಯಾನ ೧೬ ಸಮಾನಾವೃತ ಅಪಾನ ೧೭ ವ್ಯಾನಾವೃತ ಸಮಾನ ೧೮ ಅಪಾನಾವೃತ ಸಮಾನ ೧೯ ವ್ಯಾನಾವೃತ ಅಪಾನ ೨೦ ಅಪಾನಾವೃತ ವ್ಯಾನ ಇವು ಇಪ್ಪತ್ತು ಆವರಣಗಳು) ||೧೯೮||

ಸರ್ವೇಂದ್ರಿಯಾಣಾಂ ಶೂನ್ಯತ್ವಂ ಜ್ಞಾತ್ವಾ ಸ್ಮೃತಿಬಲಕ್ಷಯಮ್ ||
ವ್ಯಾನೇ ಪ್ರಾಣಾವೃತೆ ಲಿಂಗಂ ಕರ್ಮ ತತ್ರೋರ್ಧ್ವಜತ್ರುಕಮ್ ||೧೯೯||

ಸ್ವೇದೋಽತ್ಯರ್ಥಂ ಲೋಮಹರ್ಷಗ್ದೋಷಃ ಸುಪ್ತಗಾತ್ರತಾ ||
ಪ್ರಾಣೆ ವ್ಯಾನಾವೃತೇ ತತ್ರ ಸ್ನೇಹಯುಕ್ತಂ ವಿರೇಚನಮ್ ||೨೦೦||

ಪ್ರಾಣಾವೃತೇ ಸಮಾನೇ ಸ್ಯುರ್ಜಡಗದ್ಗದಮೂಕತಾಃ ||
ಚತುಃಪ್ರಯೋಗಃ ಶಸ್ಯಂತೇ ಸ್ನೇಹಾಸ್ತತ್ರ ಸಯಾಪನಾಃ ||೨೦೧||

ಸಮಾನೇನಾವೃತೇ ಪ್ರಾಣೇ ಗ್ರಹಣೀಪಾರ್ಶ್ವ ಹೃದ್ಗದಾಃ ||
ಶೂಲಂ ಚಾಮಾಶಯೇ ತತ್ರ ದೀಪನಂ ಸರ್ಪಿರಿಷ್ಯತೇ ||೨೦೨||

ಶಿರೋಗ್ರಹಃ ಪ್ರತಿಶ್ಯಾಯೋ ನಿಶ್ವಾಸೋಚ್ಛ್ವಾಸಸಂಗ್ರಹಃ ||
ಹೃದ್ರೋಗೋ ಮುಖಶೋಷಶ್ಚಾಪ್ಯುದಾನೇ ಪ್ರಾಣಸಂವೃತೇ ||೨೦೩||

ತತ್ರೋರ್ಧ್ವಂ ಭಾಗಿಕಂ ಕರ್ಮ ಕಾರ್ಯಮಾಶ್ವಾಸನಂ ತಥಾ ||
ಕರ್ಮೌಜೋಬಲವರ್ಣಾನಾಂ ನಾಶೋ ಮೃತ್ಯುರಥಾಪಿ ಚ ||೨೦೪||

ಉದಾನೇನಾವೃತೇ ಪ್ರಾಣೇ ತಂ ಶನೈಃ ಶೀತವಾರಿಣಾ ||
ಸಿಂಚೇದಾಶ್ವಾಸಯೇಚ್ಚೈನಂ ಸುಖಂ ಚೈವೋಪಪಾದಯೇತ್ ||೨೦೫||

ಊರ್ಧ್ವಗೇನಾವೃತೇಽಪಾನೇ ಛರ್ದಿಃ ಶ್ವಾಸಾದಯೋ ಗದಾಃ ||
ಸ್ಯುರ್ವಾತೇ ತತ್ರ ಬಸ್ತ್ಯಾದಿ ಭೋಜ್ಯಂಚೈವಾನುಲೋಮನಮ್ ||೨೦೬||

ಮೋಹೋಽಲ್ಪಾಗ್ನಿರತೀಸಾರ ಊರ್ಧ್ವಗೇಽಪಾನಸಂವೃತೇ ||
ವಾತೇ ಸ್ಯುರ್ವಮನಂ ತತ್ರ ದೀಪನಂ ಗ್ರಾಹಿ ಚಾಸನಮ್ ||೨೦೭||

ಛರ್ದ್ಯಾಧ್ಮಾನಮುದಾವರ್ತೋ ಗುಲ್ಮಾರ್ತಿಃ ಪರಿಕರ್ತಿಕಾ ||
ಲಿಂಗಂ ವ್ಯಾನಾವೃತೇಽಪಾನೇ ತಂ ಸ್ನಿಗ್ಧೈರನುಲೋಮಯೇತ್ ||೨೦೮||

ಅಪಾನೇನಾವೃತೇ ವ್ಯಾನೇ ಭವೇದ್ ವಿಣ್ಮೂತ್ರರೇತಸಾಮ್ ॥
ಅತಿಪ್ರವೃತ್ತಿಸ್ತತ್ರಾಪಿ ಸರ್ವಂ ಸಂಗ್ರಹಣಂ ಹಿತಮ್ ॥೨೦೯॥
ಮೂರ್ಛಾತಂದ್ರಾಪ್ರಲಾಪೋಽಂಗಸಾದೋಽಗ್ನ್ಯೋಜೋಬಲ-
ಕ್ಷಯಃ ॥
ಸಮಾನೇನಾವೃತೇವ್ಯಾನೇ ವ್ಯಾಯಾಮೋ ಲಘುಭೋಜನಮ್
॥೨೧೦॥

ಸ್ತಬ್ಧತಾಲ್ಪಾಗ್ನಿತಾ ಸ್ವೇದಚೇಷ್ಟಾಹಾನಿರ್ನಿಮೀಲನಮ್ ॥
ಉದಾನೇನಾವೃತೇ ವ್ಯಾನೇ ತತ್ರ ಪಥ್ಯಂ ಮಿತಂ ಲಘು ॥೨೧೧॥
ಪಂಚಾನ್ಯೋಽನ್ಯಾವೃತಾನೇವಂ ವಾತಾನ್ ಬುಧ್ಯೇತ ಲಕ್ಷಣೈಃ ॥
ಏಷಾಂ ಸ್ವಕರ್ಮಣಾಂ ಹಾನಿರ್ವೃದ್ಧಿರ್ವಾ ವರಣೇ ಮತಾ ॥೨೧೨॥

**ಅರ್ಥ—** ವ್ಯಾನವಾಯುವು ಪ್ರಾಣವಾಯುವಿನಿಂದ ಆವೃತವಾಗಲು ಎಲ್ಲ ಇಂದ್ರಿಯಗಳು ಬಲಹೀನವಾಗುತ್ತವೆ. ಸ್ಮೃತಿ ಮತ್ತು ಬಲಗಳು ನಷ್ಟವಾಗುತ್ತವೆ. ಈ ಲಕ್ಷಣಗಳನ್ನು ನೋಡಿ ಜತ್ರುವಿನ ಊರ್ಧ್ವಭಾಗದಲ್ಲಿ ಚಿಕಿತ್ಸೆಯನ್ನು ಮಾಡಬೇಕು. ॥೧೯॥ **ಪ್ರಾಣವಾಯುವು ವ್ಯಾನವಾಯು** ವಿನಿಂದ ಆವೃತವಾಗಲು ಬಹಳ ಬೆವರು ಬರುವದು. ರೋಮಾಂಚಗಳೇಳು ವವು. ತ್ವಚೆಯು ದುಷ್ಟವಾಗುವದು. ಸ್ಪರ್ಶಜ್ಞಾನವು ಅಳಿಯುವದು. ಅದಕ್ಕೆ ಸ್ನೇಹ ಹಾಕಿದ ವಿರೇಚನವನ್ನು ಕೊಡಬೇಕು. ॥೨೦೦॥ **ಸಮಾನ ವಾಯುವು** ಪ್ರಾಣವಾಯುವಿನಿಂದ ಆವೃತವಾಗಲು ವಾಣಿಯು ಜಡವಾಗು ವದು; ಅಥವಾ ನಡಗುವದು; ಅಥವಾ ನಿಂತೇ ಹೋಗುವದು. ಅದಕ್ಕೆ ಪಾನ, ಅಭ್ಯಂಗ, ಅನುವಾಸನ ಬಸ್ತಿ, ನಸ್ಯಗಳಿಂದ ಸ್ನೇಹವನ್ನು ಪ್ರಯೋ ಗಿಸಬೇಕು. ಮತ್ತು ಯಾಪನ ಬಸ್ತಿಗಳನ್ನು ಕೊಡಬೇಕು. ॥೨೦೧॥ **ಪ್ರಾಣವಾಯುವು** ಸಮಾನ ವಾಯುವಿನಿಂದ ಆವೃತವಾಗಲು ಸಂಗ್ರಹಿಣಿ, ಪಾರ್ಶ್ವ ಹೃದಯಗಳಲ್ಲಿ ಶೂಲ ಉಂಟಾಗುವವು. ಆಮಾಶಯದಲ್ಲಿ ಶೂಲ ವಾಗುವದು. ಅದಕ್ಕೆ ದೀಪಕ ಔಷಧಗಳಿಂದ ಸಿದ್ಧಮಾಡಿದ ಘೃತವನ್ನು ಕೊಡಬೇಕು. ॥೨೦೨॥ **ಉದಾನ ವಾಯುವು ಪ್ರಾಣ ವಾಯುವಿನಿಂದ** ಸಂವೃತವಾಗಲು ತಲೆಹಿಡಿಯೋಣ, ನೆಗಡಿ, ಶ್ವಾಸೋಚ್ಛ್ವಾಸಕ್ಕೆ ತಡೆ ಯುಂಟಾಗೋಣ, ಹೃದ್ರೋಗ, ಮುಖಶೋಷಗಳುಂಟಾಗುವವು. ॥೨೦೩॥ ಇದಕ್ಕೆ ಊರ್ಧ್ವಭಾಗದ ಚಿಕಿತ್ಸೆ, ಆಶ್ವಾಸನಗಳು ಉಪಾಯಗಳು. **ಪ್ರಾಣವು**

**ಉದಾನದಿಂದ** ಸಂವೃತವಾಗಲು ಎಲ್ಲ ಕ್ರಿಯೆ, ಊರ್ಜ ( ಉತ್ಸಾಹ ), ಬಲವರ್ಣಗಳ ನಾಶವಾಗುವದು. ಅಥವಾ ಮೃತ್ಯುವು ಬರುವದು. ||೨೦೪|| ಅದಕ್ಕೆ ತಣ್ಣೀರಿನ ಸ್ನಾನ, ಆಶ್ವಾಸನ, ಸುಖಗಳನ್ನು ಕೊಡಬೇಕು. ||೨೦೫|| **ಉದಾನವಾಯುವಿನಿಂದ ಅಪಾನವಾಯುವು ಆವೃತವಾಗಲು** ವಾಂತಿ, ಶ್ವಾಸ ಮುಂತಾದ ರೋಗಗಳುಂಟಾಗುವವು. ಅದಕ್ಕೆ ಬಸ್ತಿ ಮುಂತಾದ ವುಗಳನ್ನು ವಾತಾನುಲೋಮನ ಅನ್ನವನ್ನು ಕೊಡಬೇಕು. ||೨೦೬|| **ಅಪಾನ ವಾಯುವಿನಿಂದ ಉದಾನವಾಯುವು ಆವೃತವಾಗಲು** ಮೋಹ, ಅಗ್ನಿ ಮಾಂದ್ಯ, ಅತಿಸಾರಗಳುಂಟಾಗುವವು. ಅದಕ್ಕೆ ವಮನ, ದೀಪಕ, ಸ್ತಂಭಕ ಆಹಾರವನ್ನು ಕೊಡಬೇಕು. ||೨೦೭|| **ಅಪಾನವಾಯುವು** ವ್ಯಾನವಾಯು ವಿನಿಂದ ಆವೃತವಾಗಲು ವಾಂತಿ, ಹೊಟ್ಟೆಯುಬ್ಬು, ಉದಾವರ್ತ, ಗುಲ್ಮ, ಶೂಲ, ಗುದದ್ವಾರದಲ್ಲಿ ಕತ್ತರಿಸಿದಂತೆ ಪೀಡೆ, ಈ ಲಕ್ಷಣಗಳಿರುವವು. ಅದಕೆ, ಸ್ನಿಗ್ಧ ಆಹಾರ ಔಷಧಗಳಿಂದ ಅನುಲೋಮನ ಮಾಡಬೇಕು. ||೨೦೮|| **ವ್ಯಾನ ವಾಯುವು ಅಪಾನ ವಾಯುವಿನಿಂದ** ಆವೃತವಾಗಲು ಮಲ, ಮೂತ್ರ, ಶುಕ್ರಗಳ ಅತಿ ಪ್ರವೃತ್ತಿಯಾಗುತ್ತದೆ. ಅದಕ್ಕೆ ಎಲ್ಲ ಸ್ತಂಭಕ ಚಿಕಿತ್ಸೆಯು ಹಿತಕರವು. ||೨೦೯|| ಅಪಾನವಾಯುವು ಸಮಾನದಿಂದ ಆವೃತ ವಾಗಲು ಮೂರ್ಛೆ, ತಂದ್ರೆ, ಬಡಬಡಿಸೋಣ, ನಿತ್ರಾಣ, ಅಗ್ನಿಮಾಂದ್ಯ, ಓಜ ಮತ್ತು ಶಕ್ತಿಗಳ ಕ್ಷಯ ಉಂಟಾಗುವದು. ಅದಕ್ಕೆ ವ್ಯಾಯಾಮ ಹಗುರು ಆಹಾರವನ್ನು ಮಾಡಬೇಕು. ||೨೧೦|| ವ್ಯಾನವು ಉದಾನದಿಂದ ಆವೃತವಾಗಲು ಶರೀರದಲ್ಲಿ ಸ್ತಬ್ಧತೆ, ಅಗ್ನಿಮಾಂದ್ಯ, ಬೆವರು, ನಿಶ್ಚೇಷ್ಟತೆ, ಕಣ್ಣುಮುಚ್ಚೋಣ ಈ ಲಕ್ಷಣಗಳಿರುವವು. ಅಲ್ಲಿ ಹಗುರು ಆಹಾರವನ್ನು ಸ್ವಲ್ಪ ಮಾಡಬೇಕು. ||೨೧೧|| ಈ ಲಕ್ಷಣಗಳಿಂದ ಪರಸ್ಪರವಾಗಿ ಆವೃತ ವಾದ ಐದು ವಾತಗಳನ್ನು ಕಂಡು ಹಿಡಿಯಬೇಕು. ಇವುಗಳ ಸಾಮಾನ್ಯ ಲಕ್ಷಣವೆಂದರೆ:— ಆವೃತವಾಯುಗಳ ಕಾರ್ಯಗಳು ನಷ್ಟವಾಗುವವು. ಆವ ರಕ ವಾಯುವಿನ ಕಾರ್ಯವು ಹೆಚ್ಚಿಗಿರುವದು. ||೨೧೨||

**ಯಥಾಸ್ಥೂಲಂ ಸಮುದ್ದಿಷ್ಟಮೇತದಾವರಣೇ ಪ್ರಥಕ್ ||**
**ಸ್ವಲಿಂಗಭೇಷಜಂಸಮ್ಯಕ್ ಶೃಣುಮೇಬುದ್ಧಿವೃದ್ಧಯೇ　　||೨೧೩||**

**ಸ್ಥಾನಾನ್ಯವೇಕ್ಷ್ಯ ವಾತಾನಾಂ ವೃದ್ಧಿಂ ಹಾನಿಂ ಚ ಕರ್ಮಣಾಮ್ ||**
**ದ್ವಾದಶಾವರಣಾನ್ಯನ್ಯಾನ್ಯುಪಲಕ್ಷ್ಯ ಭಿಷಗ್ ಜಿತಮ್　　||೨೧೪||**

ಕುರ್ಯಾದಭ್ಯಂಜನಸ್ನೇಹನಸ್ಯಪಾನಾದಿ ಸರ್ವಶಃ ||
ಉಷ್ಣಂ ಕ್ರಮಮನುಷ್ಣಂ ಚ ವ್ಯತ್ಯಾಸಾದವಚಾರಯೇತ್ || ೨೧೫ ||

ಉದಾನಂಯೋಜಯೇದೂರ್ಧ್ವ ಮಪಾನಂ ಚಾನುಲೋಮನಮ್||
ಸಮಾನಂ ಶಮಯೇಚ್ಚೈವ ತ್ರಿಧಾ ವ್ಯಾನಂ ಚ ಯೋಜಯೇತ್
|| ೨೧೬ ||

ಪ್ರಾಣೋ ರಕ್ಷ್ಯಶ್ಚತುರ್ಭ್ಯೋಽಪಿ ಸ್ಥಾನೇ ಹ್ಯಸ್ಯ ಸ್ಥಿತಿರ್ಧ್ರುವಮ್ ||
ಸ್ವಸ್ಥಾನಂ ಗಮಯೇದೇವಂ ವೃತಾನೇತಾನ್ ವಿಮಾರ್ಗಗಾನ್ ||೨೧೭||

ಮೂರ್ಛಾ ದಾಹೋ ಭ್ರಮಃ ಶೂಲಂ ವಿದಾಹಃ ಶೀತಕಾಮಿತಾ ||
ಛರ್ದನಂ ಚ ವಿದಗ್ಧಸ್ಯ ಪ್ರಾಣೇಪಿತ್ತಸಮಾವೃತೇ || ೨೧೮ ||

ಷ್ಠೀವನಂ ಕ್ಷವಥೂದ್ಗಾರೋ ನಿಶ್ವಾಸೋಚ್ಛ್ವಾಸಸಂಗ್ರಹಃ ||
ಪ್ರಾಣೇ ಕಫಾವೃತೇ ರೂಪಾಣ್ಯರುಚಿಶ್ಛರ್ದಿರೇವ ಚ || ೨೧೯ ||

ಮೂರ್ಛಾದ್ಯಾನಿ ಚ ರೂಪಾಣಿ ದಾಹೋ ನಾಭ್ಯುರಸೋಃ ಕ್ಲಮಃ ||
ಓಜೋಭ್ರಂಶಶ್ಚ ಶ್ವಾಸಶ್ಚಾಪ್ಯುದಾನೇ ಪಿತ್ತಸಂವೃತೇ || ೨೨೦ ||

ಆವೃತೇ ಶ್ಲೇಷ್ಮಣೋದಾನೇ ವೈವರ್ಣ್ಯಂ ವಾಕ್‌ಸ್ವರಗ್ರಹಃ ||
ದೌರ್ಬಲ್ಯಂ ಗುರುಗಾತ್ರತ್ವಮರುಚಿಶ್ಚೋಪಜಾಯತೇ || ೨೨೧ ||

ಅತಿಸ್ವೇದಸ್ತೃಷಾ ದಾಹೋ ಮೂರ್ಛಾಯೋಽರತಿರೇವ ಚ ||
ಪಿತ್ತಾವೃತೇ ಸಮಾನೇ ಸ್ಯುರುಪಘಾತಸ್ತಥೋಷ್ಮಣಃ || ೨೨೨ ||

ಅಸ್ವೇದೋ ವಹ್ನಿಮಾಂದ್ಯಂ ಚ ರೋಮಹರ್ಷಸ್ತಥೈವ ಚ ||
ಕಫಾವೃತೇ ಸಮಾನೇ ಸ್ಯುರ್ಗಾತ್ರಾಣಾಂ ಚಾತಿಶೀತತಾ || ೨೨೩ ||

ವ್ಯಾನೇ ಪಿತ್ತಾವೃತೇ ತು ಸ್ಯಾದ್ ದಾಹಃ ಸರ್ವಾಂಗಗಃ ಕ್ಲಮಃ ||
ಗಾತ್ರವಿಕ್ಷೇಪಸಂಗಶ್ಚ ಸಂತಾಪಶ್ಚ ಸವೇದನಃ || ೨೨೪ ||

ಗುರುತಾ ಸರ್ವಗಾತ್ರಾಣಾಂ ಪರ್ವಸಂಧ್ಯಸ್ಥಿಜಾ ರುಜಾ ||
ವ್ಯಾನೇ ಕಫಾವೃತೇ ಲಿಂಗಂ ಗತಿಸಂಗಸ್ತಥಾ ರುಜಃ || ೨೨೫ ||

ಹಾರಿದ್ರಮೂತ್ರವಚಸ್ತ್ವಂ ತಾಪಶ್ಚ ಗುದಶೇಫಸೋಃ ||
ಲಿಂಗಂಪಿತ್ತಾವೃತೇಽಪಾನೇ ರಜಸಶ್ಚಾಭಿವರ್ತನಮ್ || ೨೨೬ ||

ಭಿನ್ನಾಮಶ್ಲೇಷ್ಮಸಂಸೃಷ್ಟಗುರುವರ್ಚಃಪ್ರವರ್ತನಮ್ ||
ಶ್ಲೇಷ್ಮಣಾ ಸಂವೃತೇಽಪಾನೇ ಕಫಮೇಹಸ್ಯ ಚಾಗಮಃ || ೨೨೭ ||

**ಅರ್ಥ—** ಆವರಣವಾಗಲು ಉಂಟಾಗುವ ಲಕ್ಷಣಗಳನ್ನು ಸ್ಥೂಲ ರೂಪದಿಂದ ಬೇರೆ ಬೇರೆಯಾಗಿ ಹಿಂದೆ ಹೇಳಿದೆವು. ಚೆನ್ನಾಗಿ ಹೇಳುವೆನು; ||೨೧೩|| ವಾತಗಳ ಸ್ಥಾನಗಳನ್ನು ಕಾರ್ಯಗಳ ವೃದ್ಧಿಹ್ರಾಸಗಳನ್ನು ವಿಚಾರಿಸಿ ಬೇರೆ ಹನ್ನೆರಡು ಆವರಣಗಳುಂಟಾಮವವೆಂಬುದನ್ನು ಲಕ್ಷಕ್ಕೆ ತಂದು ||೨೧೪|| ಅಭ್ಯಂಗ, ಸ್ನೇಹಪಾನ, ನಸ್ಯ ಮುಂತಾದ ಎಲ್ಲ ಚಿಕಿತ್ಸೆಯನ್ನು ಮಾಡಬೇಕು. ಶೀತ ಉಷ್ಣ ಕ್ರಮವನ್ನು ವ್ಯತ್ಯಾಸದಿಂದ (ಒಂದಾದ ನಂತರ ಮತ್ತೊಂದು ಹೀಗೆ) ಮಾಡಬೇಕು. ||೨೧೫|| ಉದಾನ ವಾಯುವು ಆವೃತವಾಗಲು ಅದನ್ನು ಮೇಲಕ್ಕೆ ಒಯ್ಯುವ ಉಪಚಾರವನ್ನು ಮಾಡಬೇಕು. ಅಪಾನವಾಯುವು ಆವೃತವಾಗಲು ಅದನ್ನು ಅನುಲೋಮನ ಮಾಡಬೇಕು. ಆವೃತ ಸಮಾನವಾಯುವಿಗೆ ಶಮನ ಚಿಕಿತ್ಸೆಯನ್ನು ಮಾಡಬೇಕು. ವ್ಯಾನಕ್ಕೆ ಮೂರು ( ಊರ್ಧ್ವ, ಅನುಲೋಮನ, ಶಮನ ) ಚಿಕಿತ್ಸೆಯನ್ನು ಮಾಡಬೇಕು. ||೨೧೬|| ನಾಲ್ಕೂ ವಾಯುಗಳಿಂದ ಪ್ರಾಣವಾಯುವನ್ನು ಅದು ತನ್ನ ಸ್ಥಾನದಲ್ಲಿ ಗಟ್ಟಿಯಾಗಿ ನಿಲ್ಲುವಂತೆ ರಕ್ಷಿಸತಕ್ಕದ್ದು. ಈ ರೀತಿಯಾಗಿ ಹಾದಿಬಿಟ್ಟ ಆವೃತ ವಾಯುಗಳನ್ನು ತಮ್ಮ ಸ್ಥಾನಕ್ಕೆ ಒಯ್ಯಬೇಕು. ||೨೧೭|| ಪ್ರಾಣವಾಯುವು ಪಿತ್ತದಿಂದ ಆವೃತವಾಗಲು ಮೂರ್ಛೆ, ದಾಹ, ಭ್ರಮ, ಶೂಲ, ವಿದಾಹ, ಶೀತಪದಾರ್ಥಗಳ ಇಚ್ಛೆ, ವಿದಗ್ಧ, ಅನ್ನದ ವಾಂತಿ ಈ ಲಕ್ಷಣಗಳಿರುವವು. ||೨೧೮|| ಪ್ರಾಣವು ಕಫದಿಂದ ಆವೃತವಾಗಿರಲು ಆಗಾಗ್ಗೆ ಉಗುಳೋಣ, ಸೀನು, ತೇಗು, ಶ್ವಾಸೋಚ್ಛ್ವಾಸಗಳು ತಟ್ಟಿಸೋಣ, ಅರುಚಿ, ವಾಂತಿ ಈ ಲಕ್ಷಣಗಳಿರುವವು. ||೨೧೯|| ಉದಾನವು ಪಿತ್ತಸಂವೃತವಾಗಲು ಮೂರ್ಛೆ, ದಾಹ, ಭ್ರಮ ಮುಂತಾದ ಹಿಂದೆ ಹೇಳಿದ ಲಕ್ಷಣಗಳು ಹೊಕ್ಕಳು ಎದೆಗಳಲ್ಲಿ ದಾಹ, ನಿತ್ರಾಣ, ಓಜದನಾಶ, ಶ್ವಾಸಗಳುಂಟಾಗುವವು ||೨೨೦|| ಉದಾನವು ಕಫದಿಂದ ಆವೃತವಾಗಲು ವಿವರ್ಣತೆ, ವಾಣಿ ಮತ್ತು ಸ್ವರಗಳಿಗೆ ಪ್ರತಿಬಂಧ, ಅಶಕ್ತಿ, ಶರೀರವು ಜಡವಾಗೋಣ, ಅರುಚಿ ಈ ಲಕ್ಷಣಗಳುಂಟಾಗುವವು. ||೨೨೧|| ಸಮಾನವು ಪಿತ್ತಾವೃತವಾಗಲು ಬಹಳ ಬೆವರು, ನೀರಡಿಕೆ, ದಾಹ, ಮೂರ್ಛೆ, ಚೈನವಿಲ್ಲದಿರೋಣ, ಶರೀರದ ಉಷ್ಣತೆ ಕಡಿಮೆ ಆಗೋಣ ಈ ಲಕ್ಷಣಗಳು ಉಂಟಾಗುವವು. ||೨೨೨|| ಸಮಾನವು ಕಫಾವೃತವಾಗಲು ಬೆವರು ಬಾರದು. ಅಗ್ನಿಮಾಂದ್ಯ ರೋಮಾಂಚನಗಳುಂಟಾಗುವವು. ಎಲ್ಲ ಅವಯವಗಳು ಬಹಳ ತಣ್ಣಗಾಗುವವು. ||೨೨೩|| ವ್ಯಾನವು ಪಿತ್ತದಿಂದ ಆವೃತವಾಗಲು ದಾಹ, ಎಲ್ಲ ಶರೀರದಲ್ಲಿ

ವಣವು, ಕೈಕಾಲುಗಳು ಅಗಳಾಡದಂತೆ ಆಗೋಣ, ಸಂತಾಪ, ವೇದನೆಗಳು ಇರುವವು ||೨೨೪|| ವ್ಯಾನವು ಕಫದಿಂದ ಆವೃತವಾಗಲು ಎಲ್ಲ ಅವಯವಗಳು ಭಾರವೆನಿಸುವವು. ಸಂಧಿ ಎಲವುಗಳು ನೋಯುವವು. ನಡೆಯಲು ಚೆನ್ನಾಗಿ ಬಾರದು. ಮತ್ತು ಅಗ್ಗೆ ನೋವುಂಟಾಗುವವು. ||೨೨೫|| ಅಪಾನವು ಪಿತ್ತ ದಿಂದ ಆವೃತವಾಗಲು ಮಲಮೂತ್ರಗಳು ಹಳದಿಯಾಗುವವು. ಗುದ ಶಿಶ್ನಗಳು ಕಾಯುವವು. ರಜದ ಸ್ರಾವವಾಗುವದು. ||೨೨೬|| ಅಪಾನವು ಕಫದಿಂದ ಆವೃತವಾಗಲು ಒಡಕ ಒಡಕ, ಆಮಕಫಗಳಿಂದ ಕೂಡಿದ ಜಡ ವಾದ ಮಲವು ಬೀಳುವದು. ಕಫ ಮೇಹವುಂಟಾಗುವದು. ||೨೨೭||

ಮಿಶ್ರ ಆವರಣಗಳನ್ನು ಹೇಳುತ್ತಾರೆ.

**ಲಕ್ಷಣಾನಾಂ ತು ಮಿಶ್ರತ್ವಂ ಪಿತ್ತಸ್ಯ ಚ ಕಫಸ್ಯ ಚ ||**
**ಉಪಲಕ್ಷ್ಯ ಭಿಷಗ್ ವಿದ್ವಾನ್ ಮಿಶ್ರಮಾವರಣಂ ವದೇತ್　　||೨೨೮||**

**ಅರ್ಥ—** ಜಾಣನಾದ ವೈದ್ಯನು ಪ್ರಾಣಾದಿ ವಾಯುಗಳಲ್ಲಿ ಪಿತ್ತ ಮತ್ತು ಕಫದ ಲಕ್ಷಣಗಳು ಮಿಶ್ರವಾಗಿದ್ದರೆ ಮಿಶ್ರ ಆವರಣವೆಂದು ಹೇಳ ಬೇಕು. ||೨೨೮||

**ಯದ್ ಯಸ್ಯ ವಾಯೋರ್ನಿರ್ದಿಷ್ಟಂ ಸ್ಥಾನಂ ತತ್ರೇತಕಾ ಸ್ಥಿತೌ ||**
**ದೋಷೌ ಬಹುವಿಧಾನ್ ವ್ಯಾಧೀನ್ ದರ್ಶಯೇತಾಂ ಯಥಾನಿಜಮ್**
**||೨೨೯||**

**ಆವೃತಂ ಶ್ಲೇಷ್ಮಪಿತ್ತಾಭ್ಯಾಂ ಪ್ರಾಣಂ ಚೋದಾನಮೇವ ಚ ||**
**ಗರೀಯಸ್ತ್ವೇನ ಪಶ್ಯಂತಿ ಭಿಷಜಃ ಶಾಸ್ತ್ರಚಕ್ಷುಷಃ　　||೨೩೦||**

**ವಿಶೇಷಾಜೀವಿತಂ ಪ್ರಾಣೇ ಉದಾನೇ ಸಂಶ್ರಿತಂ ಬಲಂ ||**
**ಸ್ಯಾತ್‌ತಯೋಃ ಪೀಡನಾದ್ ಹಾನಿರಾಯುಷಶ್ಚ ಬಲಸ್ಯ ಚ　||೨೩೧||**

**ಸರ್ವೇಽಪಿ ತೇಽಪರಿಜ್ಞಾತಾಃ ಪರಿಸಂವತ್ಸರಾಸ್ತಥಾ ||**
**ಉಪೇಕ್ಷಣಾದಸಾಧ್ಯಾಃ ಸ್ಯುರಥವಾ ದುರುಪಕ್ರಮಾತ್　　||೨೩೨||**

**ಹೃದ್ರೋಗೋ ವಿದ್ರಧಿಃ ಪ್ಲೀಹಾ ಗುಲ್ಮೋಽತಿಸಾರ ಏವ ಚ ||**
**ಭವಂತ್ಯುಪದ್ರವಾಸ್ತೇಷಾಮಾವೃತಾನಾಮುಪೇಕ್ಷಣಾತ್　　||೨೩೩||**

**ತಸ್ಮಾದಾವರಣಂ ವೈದ್ಯೈಃ ಪವನಸ್ಯೋಪಲಕ್ಷಯೇತ್ ||**
**ಪಂಚಾತ್ಮಕಸ್ಯ ವಾತೇನ ಪಿತ್ತೇನ ಶ್ಲೇಷ್ಮಣಾಪಿ ವಾ　　||೨೩೪||**

ಭಿಷಗ್ ಜಿತೈಸ್ತತಃ ಸಮ್ಯಗುಪಲಕ್ಷ್ಯ ಸಮಾಚರೇತ್ ||
ಅನಭಿಷ್ಯಂದಿಭಿಃ ಸ್ನಿಗ್ಧೈಃ ಸ್ರೋತಸಾಂ ಶುದ್ಧಿಕಾರಕೈಃ ||೨೩೫||
ಕಫಪಿತ್ತಾವಿರುದ್ಧಂ ಯತ್ ಯಚ್ಚ ವಾತಾನುಲೋಮನಮ್ ||
ಸರ್ವಸ್ಥಾನಾವೃತೇಽಪ್ಯಾಶು ತತ್ಕಾರ್ಯಂ ಮಾರುತೇ ಹಿತಮ್ ||೨೩೬||
ಯಾಪನಾ ಬಸ್ತಯಃ ಪ್ರಾಯೋ ಮಧುರಾಃ ಸಾನುವಸನಾಃ ||
ಪ್ರಸಮೀಕ್ಷ್ಯ ಬಲಾಧಿಕ್ಯಂ ಮೃದು ವಾ ಸ್ರಂಸನಂ ಹಿತಮ್ ||೨೩೭||
ರಸಾಯೇನಾನಾಂ ಸರ್ವೇಷಾಮುಪಯೋಗಃ ಪ್ರಶಸ್ಯತೇ ||
ಶೈಲಸ್ಯ ಜತುನೋಽತ್ಯರ್ಥಂ ಪಯಸಾ ಗುಗ್ಗುಲೋಸ್ತಥಾ ||೨೩೮||
ಲೇಹಂ ವಾ ಭಾರ್ಗವಪ್ರೋಕ್ತಮಭ್ಯಸೇತ್ ಕ್ಷೀರಭುಙ್ನರಃ ||
ಅಭಯಾಮಲಕೀಯೋಕ್ತಾನೇಕಾದಶ ಮಿತಾಶನಃ ||೨೩೯||
ಆಪಾನೇನಾವೃತೇ ಸರ್ವಂ ದೀಪನಗ್ರಾಹಿ ಭೇಷಜಂ ||
ವಾತಾನುಲೋಮನಂ ಯಚ್ಚ ಪಕ್ವಾಶಯವಿರೋಧನಮ್ ||೨೪೦||
ಇತಿ ಸಂಕ್ಷೇಪತಃ ಪ್ರೋಕ್ತಮಾವೃತಾನಾಂ ಚಿಕಿತ್ಸಿತಮ್ ||
ಪ್ರಾಣಾದೀನಾಂ ಭಿಷಕ್ ಕುರ್ಯಾದ್ವಿತರ್ಕ್ಯ ಸ್ವಯಮೇವ ತತ್ ||೨೪೧||

**ಅರ್ಥ—** ಶಾಸ್ತ್ರಜ್ಞಾನವುಳ್ಳ ವೈದ್ಯರು ಕಫಪಿತ್ತಗಳಿಂದ ಆವೃತವಾದ ಪ್ರಾಣ ಉದಾನಗಳನ್ನು ಮಹತ್ವದ್ದಾಗಿ ಎಣಿಸುವರು. ||೨೩೦|| ವಿಶೇಷವಾಗಿ ಪ್ರಾಣವಾಯುವಿನಲ್ಲಿ ಜೀವಿತವೂ, ಅಪಾನದಲ್ಲಿ ಬಲವೂ ಆಶ್ರಯ ಮಾಡಿದ್ದರಿಂದ ಅವುಗಳ ಪೀಡೆಯಿಂದ ಆಯುಷ್ಯ ಮತ್ತು ಶಕ್ತಿಗಳು ಹೋಗುವವು. ||೨೩೧|| ಈ ಆವೃತಪ್ರಾಣಾದಿಗಳ ಜ್ಞಾನವು ಆಗದೆ ಒಂದು ವರ್ಷ ಹೋದರೆ, ಅಥವಾ ಅವನ್ನು ಉಪೇಕ್ಷೆ ಮಾಡಿದರೆ, ಅಥವಾ ಸರಯಾಗಿ ಚಿಕಿತ್ಸೆಮಾಡದಿದ್ದರೆ ಅವು ಅಸಾಧ್ಯವಾಗುವವು. ||೨೩೨|| ಆವೃತ ವಾಯುಗಳ ಉಪೇಕ್ಷೆಯಿಂದ ಹೃದ್ರೋಗ, ವಿದ್ರಧಿ, ಪ್ಲೀಹ, ಗುಲ್ಮ, ಅತಿಸಾರ, ಈ ಉಪದ್ರವಗಳುಂಟಾಗುತ್ತವೆ. ||೨೩೩|| ಆದ್ದರಿಂದ ವೈದ್ಯನು ಐದು ಪ್ರಕಾರದ ವಾಯುವಿಗೆ ವಾತ, ಪಿತ್ತ, ಕಫಗಳಿಂದುಂಟಾಗುವ ಆವರಣಗಳನ್ನು ಕಂಡು ಹಿಡಿಯಬೇಕು. ||೨೩೪|| ಕಂಡು ಹಿಡಿದ ಕಫ ಕಾರಕವಲ್ಲದ ಸ್ನಿಗ್ಧ, ಮತ್ತು ಸ್ರೋತಸ್ಸುಗಳನ್ನು ಶುದ್ಧಮಾಡುವ ಔಷಧಗಳನ್ನು ಕೊಡಬೇಕು. || ೨೩೫ ||

ವಾಯುವು ಯಾವ ಸ್ಥಾನದಲ್ಲಿ ಆವೃತವಾಗಿದ್ದರೂ ಕೂಡ ಅಲ್ಲಿ ಕಫ ಪಿತ್ತಗಳಿಗೆ ವಿರುದ್ಧವಾಗದ ವಾತವನ್ನು ಅನುಲೋಮನ ಮಾಡುವ ಚಿಕಿತ್ಸೆಯನ್ನು ತೀವ್ರ ಮಾಡಬೇಕು. ಆದಂರೆ ಹಿತವಾಗುವದು ||೨೩೬|| ಬಹಳ ಮಾಡಿ ಇವರಲ್ಲಿ ಯಾಪನ ಬಸ್ತಿಗಳು, ಮಧುರ ದ್ರವ್ಯಗಳ ಬಸ್ತಿಗಳು, ಅನುವಾಸನ ಬಸ್ತಿಗಳು ಹಿತಕರವಾಗುತ್ತವೆ. ಶಕ್ತಿಯಿದ್ದರೆ ಮೃದುವಾದ ವಿರೇಚನವು ಹಿತಕರವಾಗುವದು. ||೨೩೭|| ಎಲ್ಲ ರಸಾಯನಗಳ ಉಪಯೋಗ ವನ್ನು ಮಾಡಬೇಕು. 'ಶಿಲಾಜಿತು, ಗುಗ್ಗುಳಗಳನ್ನು ಹಾಲಿನೊಡನೆ ಬಹಳ ವಾಗಿ ತಕ್ಕೊಳ್ಳಬೇಕು. ||೨೩೮|| ಹಾಲಿನ ಮೇಲೆ ಇದ್ದು ಚ್ಯವನ ಪ್ರಾಶ್ಯ ಲೇಹವನ್ನು, ಅಥವಾ ಸ್ವಲ್ಪ ಆಹಾರ ಮಾಡುತ್ತ 'ಅಭಯಾಮಲಕೀಯ' ಅಧ್ಯಾಯದಲ್ಲಿ ಹೇಳಿದ ೧೧ ರಸಾಯನಗಳನ್ನು ಬಹುದಿವಸ ತಕ್ಕೊಳ್ಳುತ್ತಿರ ಬೇಕು. ||೨೩೯|| ಪ್ರಾಣಾದಿ ವಾಯುಗಳು ಅಪಾನದಿಂದ ಆವೃತವಾಗಲು ದೀಪಕಸ್ತಂಭಕವಾದ ಎಲ್ಲ ಔಷಧಗಳೂ, ವಾತದ ಅನುಲೋಮನ ಮಾಡುವ ಮತ್ತು ಪಕ್ವಾಶಯ ಶೋಧನ ಮಾಡುವ ಔಷಧಗಳು ಹಿತಕರವು ||೨೪೦|| ಈ ಪ್ರಕಾರ ಆವೃತ ಪ್ರಾಣಾದಿಗಳ ಚಿಕಿತ್ಸೆಯು ಸಂಕ್ಷೇಪವಾಗಿ ಹೇಳಲ್ಪ ಟ್ಟಿತು. ಇದನ್ನು ಆಲೋಚಿಸಿ ವೈದ್ಯನು ವಿಶೇಷ ಚಿಕಿತ್ಸೆಯನ್ನು ಮಾಡ ಬೇಕು. ||೨೪೧||

**ಪಿತ್ತಾವೃತೇ ತು ಪಿತ್ತಘ್ನೈರ್ಮಾರುತಸ್ಯಾನುಲೋಮನೈಃ ||**
**ಕಫಾವೃತೇ ಕಫಘ್ನೈಶ್ಚ ಭಿಷಕ್ ಕುರ್ಯಾತ್ ಪ್ರತಿಕ್ರಿಯಾಮ್ ||೨೪೨||**

**ಲೋಕೇವಾಯ್ವರ್ಕಸೋಮಾನಾಂ ದುರ್ವಿಜ್ಞೇಯಾ ಯಥಾಗತಿಃ ||**
**ತಥಾ ಶರೀರೇ ವಾತಸ್ಯ ಪಿತ್ತಸ್ಯಾಪಿ ಕಫಸ್ಯ ಚ ||೨೪೩||**

**ಕ್ಷಯಂ ವೃದ್ಧಿಂ ಸಮತ್ವಂ ಚ ತಥೈವಾವರಣಂ ಭಿಷಕ್ ||**
**ವಿಜ್ಞಾಯ ಪವನಾದೀನಾಂ ನ ಪ್ರಮುಹ್ಯತಿ ಕರ್ಮಸು ||೨೪೪||**

**ಅರ್ಥ—** ವಾಯುವು ಪಿತ್ತದಿಂದ ಆವೃತವಾಗಲು ಪಿತ್ತನಾಶಕ, ಮತ್ತು ವಾತದ ಅನುಲೋಮನ ಮಾಡುವ ಔಷಧಗಳಿಂದ, ಕಫದಿಂದ ಆವೃತವಾಗಿದ್ದರೆ ಕಫನಾಶಕ ಮತ್ತು ವಾತಾನುಲೋಮನ ಔಷಧಗಳಿಂದ ವೈದ್ಯನು ಅವುಗಳ ಪ್ರತಿಕಾರ ಮಾಡಬೇಕು. ||೨೪೨|| ಈ ಸೃಷ್ಟಿಯಲ್ಲಿ ಗಾಳಿ, ಸೂರ್ಯ, ಚಂದ್ರರ ಗತಿಯನ್ನು ತಿಳಿಯಲು ಹೇಗೆ ಕಠಿಣವಾಗಿದೆಯೋ

ಅದರಂತೆ ಶರೀರದ ವಾತ, ಪಿತ್ತ, ಕಫಗಳ ಗತಿಯು ತಿಳಿಯಲು ಕಠಿಣವಾಗಿದೆ. ||೨೪೩|| ವಾತ, ಪಿತ್ತ, ಕಫಗಳಕ್ಷಯ, ವೃದ್ಧಿ, ಸಾಮ್ಯ ಮತ್ತು ಅವುಗಳ ಆವರಣಗಳನ್ನು ತಿಳಿದುಕೊಂಡ ವೈದ್ಯನು ಚಿಕಿತ್ಸೆಯಲ್ಲಿ ತಪ್ಪು ಮಾಡನು. ||೨೪೪||

ತತ್ರಶ್ಲೋಕೌ

**ಪಂಚಾತ್ಮನಃ ಸ್ಥಾನವಶಾಚ್ಛರೀರೇ ।**
**ಸ್ಥಾನಾನಿ ಕರ್ಮಾಣಿ ಚ ದೇಹಧಾತೋಃ ॥**
**ಪ್ರಕೋಪಹೇತುಃ ಕುಪಿತಶ್ಚ ರೋಗಾನ್ ।**
**ಸ್ಥಾನೇಷು ಚಾನ್ಯೇಷು ವೃತೋಽವೃತಶ್ಚ ||೨೪೫||**
**ಪ್ರಾಣೇಶ್ವರಃ ಪ್ರಾಣಭೃತಾಂ ಕರೋತಿ ।**
**ಕ್ರಿಯಾ ಚ ತೇಷಾಂ ನಿಖಿಲಾ ನಿರುಕ್ತಾ ॥**
**ತಾಂ ದೇಶಸಾತ್ಮ್ಯರ್ತುಬಲಾನ್ಯವೇಕ್ಷ್ಯ ।**
**ಪ್ರಯೋಜಯೇಚ್ಛಾಸ್ತ್ರಮತಾನುಸಾರೀ ||೨೪೬||**

ಅರ್ಥ— ಈ ಅಧ್ಯಾಯದಲ್ಲಿ ಶರೀರದಲ್ಲಿಯ ಸ್ಥಾನಭೇದದಿಂದ ಐದು ಪ್ರಕಾರವನ್ನು ಹೊಂದಿದ ದೇಹದ ಮುಖ್ಯ ಧಾತುವಾದ ವಾಯುವಿನ ಸ್ಥಾನ, ಕಾರ್ಯ, ಮತ್ತು ಕುಪಿತವಾಗುವ ಕಾರಣಗಳು ಹೇಳಲ್ಪಟ್ಟವು. ಪ್ರಾಣಗಳ ಪ್ರಾಣದೊಡೆಯನಾದ ವಾಯುವು ಕುಪಿತವಾಗಲು, ಆವೃತವಾಗಲು ಅಥವಾ ಆಗದಿರಲು ತನ್ನ ಸ್ಥಾನದಲ್ಲಿ ಮತ್ತು ಇತರ ಸ್ಥಾನದಲ್ಲಿ ಯಾವ ಯಾವ ರೋಗಗಳನ್ನುಂಟುಮಾಡುತ್ತದೆ. ||೨೪೫|| ಮತ್ತು ಅದರ ಎಲ್ಲ ಚಿಕಿತ್ಸೆಯು ಹೇಳಲ್ಪಟ್ಟಿತು. ಶಾಸ್ತ್ರದಮತವನ್ನು ಅನುಸರಿಸುವ ವೈದ್ಯನು ದೇಶ, ಮಾನಿಸುವಆಹಾರ ಋತು, ಬಲಗಳನ್ನು ವಿಚಾರಿಸಿ ಆ ಚಿಕಿತ್ಸೆಯನ್ನು ಮಾಡಬೇಕು. ||೨೪೬||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ವಾತ ವ್ಯಾಧಿ ಚಿಕಿತ್ಸಿತಂ ನಾಮ ಅಷ್ಟಾವಿಂಶೋಽಧ್ಯಾಯಃ**

**ಅರ್ಥ—** ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟ ದೃಢಬಲರಿಂದ ಸಂಸ್ಕಾರ ಪಡೆದ ಚರಕ ಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ **ವಾತರೋಗ ಚಿಕಿತ್ಸೆ ಎಂಬ** ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

ಶ್ರೀ ಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ-ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ವಾತ ವ್ಯಾಧಿ** ಚಿಕಿತ್ಸೆ ಎಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

# ಇಪ್ಪತ್ತೊಂಭತ್ತನೆಯ ಅಧ್ಯಾಯ

## ವಾತರಕ್ತ ಚಿಕಿತ್ಸೆ

ವಾತದ ಚಿಕಿತ್ಸೆಯ ನಂತರ ತದ್ಯುಕ್ತವಾದ ವಾತ ರಕ್ತದ ಚಿಕಿತ್ಸೆಯನ್ನು ಹೇಳು ತ್ತಾರೆ.

**ಅಥಾತೋ ವಾತರಕ್ತಚಿಕಿತ್ಸಾಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನು ಮೇಲೆ ವಾತರಕ್ತ ಚಿಕಿತ್ಸೆಯನ್ನು ಹೇಳುವೆವು.

**ಇತಿ ಹ ಸ್ಮಾಹ ಭಗವಾನಾತ್ರೇಯಃ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು.

**ಹುತಾಗ್ನಿಹೋತ್ರಮಾಸೀನಮೃಷಿಮಧ್ಯೇ ಪುನರ್ವಸುಮ್ ||**
**ಪೃಷ್ಟವಾನ್ ಗುರುಮೇಕಾಗ್ರಮಗ್ನಿವೇಶೋಽಗ್ನಿವರ್ಚಸಮ್ ||೧||**
**ಅಗ್ನಿಮಾರುತತುಲ್ಯಸ್ಯ ಸಂಸರ್ಗಸ್ಯಾನಿಲಾಸ್ರಜೋಃ ||**
**ಹೇತುಲಕ್ಷಣಭೈಷಜ್ಯಾನ್ಯಥಾಸ್ಮೈ ಗುರುರಬ್ರವೀತ್ ||೨||**

**ಅರ್ಥ—** ಅಗ್ನಿ ಹೋತ್ರದ ಹವನ ವಿಧಿಯನ್ನು ಮುಗಿಸಿ, ಋಷಿ ಸಮೂಹದಲ್ಲಿ ಬಂದು ಕುಳಿತ, ಅಗ್ನಿಯಂತೆ ತೇಜಸ್ವಿಯಾದ, ಏಕಾಗ್ರಚಿತ್ತ ವುಳ್ಳಗುರುಗಳಿಗೆ ಅಗ್ನಿವೇಶರು ||೧|| ಬೆಂಕಿಗಾಳಿಗಳಿಂತಿರುವ, ವಾತರಕ್ತಗಳ ಮಿಶ್ರಣವಾದ ವಾತರಕ್ತರೋಗದ ಕಾರಣ, ಲಕ್ಷಣ, ಔಷಧಗಳನ್ನು ಕೇಳಲು ಅವರಿಗೆ ಗುರುಗಳು ಹೇಳಿದರು.

ವಾತರಕ್ತ ಕಾರಣ ಸಂಪ್ರಾಪ್ತಿಗಳನ್ನು ಹೇಳುತ್ತಾರೆ

**ಲವಣಾಮ್ಲಕಟುಕ್ಷಾರಸ್ನಿಗ್ಧೋಷ್ಣಾಜೀರ್ಣಭೋಜನೈಃ ||**
**ಕ್ಲಿನ್ನಶುಷ್ಕಾಂಬುಜಾನೂಪಮಾಂಸಪಿಣ್ಯಾಕಮೂಲಕೈಃ ||೩||**
**ಕುಲಿತ್ಥಮಾಷನಿಷ್ಪಾವಶಾಕಾದಿಪಲಲೇಕ್ಷುಭಿಃ ||**
**ದಧ್ಯಾರನಾಲಸೌವೀರಶುಕ್ತತಕ್ರಸುರಾಸವೈಃ ||೪||**

ವಿರುದ್ಧಾಧ್ಯಶನಕ್ರೋಧದಿವಾಸ್ವಪ್ನಪ್ರಜಾಗರೈಃ ||
ಪ್ರಾಯಶಃ ಸುಕುಮಾರಾಣಾಂ ಮಿಥ್ಯಾಹಾರವಿಹಾರಿಣಾಮ್ ||೫||

ಅಚಂಕ್ರಮಣಶೀಲಾನಾಂ ಕುಪ್ಯತೇ ವಾತಶೋಣಿತಮ್ ||
ಅಭಿಘಾತಾದಶುದ್ಧಾಚ್ಚ ಪ್ರದುಷ್ಟೇ ಶೋಣಿತೇ ನೃಣಾಮ್ ||೬||

ಕಷಾಯಕಟುತಿಕ್ತಾನಾಂ ರೂಕ್ಷಾಣಾಮತಿಭೋಜನಾತ್ ||
ಹಯೋಷ್ಟ್ರಖರಯಾನಾಂಬುಕ್ರೀಡಾಪ್ಲವನಲಂಘನೈಃ ||೭||

ಉಷ್ಣೇ ಚಾತ್ಯಧ್ವಗಮನಾತ್ ವ್ಯವಾಯಾತ್ ವೇಗನಿಗ್ರಹಾತ್ ||
ವಾಯುರ್ವಿವೃದ್ಧೋ ವೃದ್ಧೇನ ರಕ್ತೇನಾವಲಿತಃ ಪಥಿ ||೮||

ಕೃತ್ಸ್ನಂ ಸಂದೂಷಯೇದ್ರಕ್ತಂ ತಜ್ಞೇಯಂ ವಾತಶೋಣಿತಮ್ ||
ಖುಡ್ಡಂ ವಾತಬಲಾಸಾಖ್ಯಮಾಢ್ಯವಾತಂ ಚ ನಾಮಭಿಃ ||೯||

ತಸ್ಯ ಸ್ಥಾನಂ ಕರೌ ಪಾದಾವಂಗುಲ್ಯಃ ಸರ್ವಸಂಧಯಃ ||
ಕೃತ್ವಾದೌ ಹಸ್ತಪಾದೇಷು ಮೂಲಂ ದೇಹಂ ವಿಧಾವತಿ ||೧೦||

ಸೌಕ್ಷ್ಮ್ಯಾತ್ ಸರ್ವಸರತ್ವಾಚ್ಚ ಪವನಸ್ಯಾಸೃಜಸ್ತಥಾ ||
ತದ್ದ್ರವತ್ವಾತ್ ಸರತ್ವಾಚ್ಚ ದೇಹಂ ಗಚ್ಛೇತ್ ಸಿರಾಯನೈಃ ||೧೧||

ಪರ್ವಸ್ವಭಿಹತಂ ಕ್ರುದ್ಧಂ ವಕ್ರತ್ವಾದವತಿಷ್ಠತೇ ||
ಸ್ಥಿತಂ ಪಿತ್ತಾದಿಸಂಸೃಷ್ಟಂ ತಾಸ್ತಾಃ ಸೃಜತಿ ವೇದನಾಃ ||೧೨||

ಕರೋತಿ ದುಃಖಂ ತೇಷ್ವೇವ ತಸ್ಮಾತ್ ಪ್ರಾಯೇಣ ಸಂಧಿಷು ||
ಭವಂತಿ ವೇದನಾಸ್ತಾಸ್ತಾ ಅತ್ಯರ್ಥಂ ದುಃಸ್ಸಹಾ ನೃಣಾಮ್ ||೧೩||

**ಅರ್ಥ—** ಉಪ್ಪು, ಹುಳಿ, ಕಾರ, ಕ್ಷಾರ, ಸ್ನಿಗ್ಧ, ಉಷ್ಣ, ಅಪಕ್ವ ಆಹಾರಗಳಿಂದಲೂ ಹಳಿಸಿದ ಜಲಜ, ಮಲೆನಾಡ ಪ್ರಾಣಿಗಳ ಮಾಂಸ, ಮತ್ತು ಹಿಂಡಿ, ಮೂಲಂಗಿ ||೩|| ಹುರುಳಿ, ಉದ್ದು, ಅವರಿ, ಪಲ್ಯೆ. ಮುಂತಾದ ವುಗಳನ್ನು ಎಳ್ಳುಚಿಗಳಿ, ಕಬ್ಬು, ಮೊಸರು, ಆರನಾಲ (ಗಂಜಿ) ಸಾವೀರ, ಶುಕ್ತ ( ಕಂದಮೂಲದಿಂದ ಮಾಡಿದ ಮದ್ಯ ) ಮಜ್ಜಿಗೆ, ಮದ್ಯ, ಆಸವ ||೪|| ವಿರುದ್ಧ ಆಹಾರ ತಿನ್ನುವವರಿಂದಲೂ, ಅಧ್ಯಶನ, ಸಿಟ್ಟು, ಹಗಲು ನಿದ್ರೆ, ಜಾಗರಣೆಗಳನ್ನು ಮಾಡುವದರಿಂದಲೂ ಮತ್ತು ಆಹಾರಗಳಲ್ಲಿ ಅವ್ಯವಸ್ಥೆ ಯಿಂದ ವರ್ತಿಸುವ ||೫|| ಅತ್ತಿತ್ತ ಓಡಾಡುವ ರೂಢಿಯಿಲ್ಲದ, ಮತ್ತು ಬಹಳ ಸುಕುಮಾರ ಶರೀರದವರಿಗೆ ವಾತ್ತರಕ್ತವು ಕುಪಿತವಾಗುತ್ತದೆ. ಅಘಾತ

ಮತ್ತು ಶೋಧನ ಕಾಲದಲ್ಲಿ ಶೋಧನ ತಕ್ಕೊಳ್ಳದಿರೋಣ ಇವುಗಳಿಂದ ಮನು ಷ್ಯರ ರಕ್ತವು ದುಷ್ಟವಾಗಲು ||೬|| ಆ ದುಷ್ಟರಕ್ತದಿಂದ ಒಗರು, ಕಾರ, ಕಹಿ, ರೂಕ್ಷ, ಮತ್ತು ಅತಿಯಾದ ಆಹಾರದಿಂದಲೂ, ಕುದುರೆ, ಒಂಟೆ, ಕತ್ತೆಗಳ ಮೇಲೆ ಪ್ರವಾಸ ಮಾಡುವದರಿಂದಲೂ, ಈಸೋಣ, ಜಿಗಿಯೋಣ, ಉಪ ವಾಸಗಳಿಂದಲೂ ||೭|| ಬಿಸಿಲಲ್ಲಿ ಬಹಳ ನಡೆಯುವದರಿಂದಲೂ ಮೈಥುನ ದಿಂದಲೂ, ವೇಗ ನಿಗ್ರಹದಿಂದಲೂ ಹೆಚ್ಚಾದ ವಾಯುವು ಹಾದಿಯಲ್ಲಿ ಪ್ರತಿಬಂಧಿಸಲ್ಪಟ್ಟು ||೮|| ಎಲ್ಲ ರಕ್ತವನ್ನು ಕೆಡಿಸುವದು, ಅದೇ ವಾತ ರಕ್ತ ರೋಗವು ಅದಕ್ಕೆ ಖುಡ, ವಾತಬಲಾಸ, ಆಢ್ಯವಾತವೆಂದು ಕರೆಯುತ್ತಾರೆ. ಕೈ, ಕಾಲು, ಬೆರಳು, ಮತ್ತು ಎಲ್ಲ ಸಂಧಿಗಳು ಅದರ ಸ್ಥಾನಗಳಾಗಿವೆ. ಮೊದಲು ಕೈಕಾಲುಗಳಲ್ಲಿ ಆರಂಭವಾಡಿ ||೧೦|| ವಾತ ಮತ್ತು ರಕ್ತಗಳು ಸೂಕ್ಷ್ಮ ಮತ್ತು ಎಲ್ಲ ಕಡೆಗೆ ವ್ಯಾಪಿಸುವಂತಹವಿರುವದರಿಂದ ಸಿರಾಮಾರ್ಗ ದಿಂದ ದೇಹದ ಕಡೆಗೆ ಸಾಗುತ್ತವೆ. ||೧೧|| ಡೊಂಕು ಇದ್ದದರಿಂದ ಸಂಧಿಗಳಲ್ಲಿ ಪ್ರತಿಬಂಧಿಸಲ್ಪಟ್ಟ ಆ ಕುಪಿತ ವಾತರಕ್ತವು ಅಲ್ಲಿಯೇ ನಿಲ್ಲುತ್ತದೆ. ಅಲ್ಲಿ ಪಿತ್ತ ಮುಂತಾದವುಗಳ ಸಂಸರ್ಗದಿಂದ ಅನೇಕ ತರದ ನೋವುಗಳನ್ನುಂಟು ಮಾಡುತ್ತದೆ. ||೧೨|| ಅದ್ದರಿಂದ ಬಹಳ ಮಾಡಿ ಆ ಸಂಧಿಗಳಲ್ಲಿಯೇ ವೇದನೆ ಯನ್ನುಂಟುಮಾಡುತ್ತದೆ. ಆ ವೇದನೆಗಳು ಮನುಷ್ಯರಿಗೆ ಅತ್ಯಂತ ದುಃಸಹ ವಾಗಿರುತ್ತವೆ. ||೧೩||

ವಾತರಕ್ತದ ಪೂರ್ವರೂಪವನ್ನು ಹೇಳುತ್ತಾರೆ.

**ಸ್ವೇದೋಽತ್ಯರ್ಥಂ ನ ವಾ ಕಾರ್ಷ್ಣ್ಯಂ ಸ್ಪರ್ಶಾಜ್ಞತಂ ಕ್ಷತೇಽತಿರುಕ್ ||**
**ಸಂಧಿಶೈಥಿಲ್ಯಮಾಲಸ್ಯಂ ಸದನಂ ಪೀಡಕೋದ್ಗಮಃ ||೧೪||**

**ಜಾನುಜಂಘೋರುಕಟ್ಯಂಸಹಸ್ತಪಾದಾಂಗಸಂಧಿಷು ||**
**ನಿಸ್ತೋದಃ ಸ್ಫುರಣಂ ಭೇದೋ ಗುರುತ್ವಂ ಸುಪ್ತಿರೇವ ಚ ||೧೫||**

**ಕಂಡೂಃ ಸಂಧಿಷ್ಣು ರುಗ್ ಭೂತ್ವಾ ಭೂತ್ವಾ ನಶ್ಯತಿ ಚಾಸಕೃತ್ ||**
**ವೈವರ್ಣ್ಯಂ ಮಂಡಲೋತ್ಪತ್ತಿರ್ವಾತಾಸೃಕ್‌ಪೂರ್ವಲಕ್ಷಣಮ್ ||೧೬||**

**ಅರ್ಥ—** ಬೆವರು ಬಹಳ ಬರೋಣ, ಅಥವಾ ಏನೂ ಬಾರದಿರೋಣ, ಕಪ್ಪು ಬಣ್ಣ, ಸ್ಪರ್ಶಜ್ಞಾನವಾಗದಿರೋಣ. ಗಾಯದಲ್ಲಿ ಬಹಳ ನೋವು, ಸಂಧಿಗಳಲ್ಲಿ ಶೈಥಿಲ್ಯ, ಆಲಸ್ಯ, ನಿತ್ರಾಣ, ಬಕ್ಕೆಗಳು ಏಳೋಣ. ||೧೪||

ಮೊಳಕಾಲು, ಜಂಘಾ, ತೊಡೆ, ಟೊಂಕ, ಹೆಗಲು, ಕೈಕಾಲು, ಮತ್ತು ದೇಹದ ಸಂಧಿಗಳಲ್ಲಿ ಚುಚ್ಚುವಿಕೆ, ಸ್ಫುರಣ, ಸೀಳಿದಂತೆ ನೋವು, ಜಡತ್ವ, ಸ್ಪರ್ಶ ಜ್ಞಾನ ಶೂನ್ಯತೆ ತಿಂಡಿಗಳು ಉಂಟಾಗುವವು. ||೧೫|| ಸಂಧಿಗಳಲ್ಲಿ ಆಗಾಗ್ಗೆ ನೋವುಂಟಾಗಿ ಹೋಗುವವು. ತ್ವಚೆಗೆ ಬೇರೆ ಬಣ್ಣ ಬರುವದು. ಮತ್ತು ಅವರ ಮೇಲೆ ವರ್ತುಲಗಳು ಕಾಣಿಸಿಕೊಳ್ಳುವವು. ಇವು ವಾತರಕ್ತದ ಪೂರ್ವ ಲಕ್ಷಣಗಳು. ||೧೬||

ಅವುಗಳ ಭೇದ ಮತ್ತು ಲಕ್ಷಣಗಳನ್ನು ಹೇಳುತ್ತಾರೆ—

**ಉತ್ತಾನಮಥಗಂಭೀರಂ ದ್ವಿವಿಧಂ ತತ್ ಪ್ರಚಕ್ಷ್ಯತೇ ||**
**ತ್ವಙ್ಮಾಂಸಾಶ್ರಯಮುತ್ತಾನಂ ಗಂಭೀರಂ ತ್ವಂತರಾಶ್ರಯಮ್ || ೧೭ ||**

**ಕಂಡೂದಾಹರುಜಾಯಾಮ ತೋದಸ್ಫುರಣಕುಂಚನೈಃ ||**
**ಅನ್ವಿತಾ ಶ್ಯಾವರಕ್ತಾ ತ್ವಕ್ ಬಾಹ್ಯೇ ತಾಮ್ರಾ ತಥೋಚ್ಯತೇ || ೧೮ ||**

**ಗಂಭೀರೇ ಶ್ವಯಥುಃ ಸ್ತಬ್ಧಃ ಕಠಿನೋಽಥ ಭೃಶಾರ್ತಿಮಾನ್ ||**
**ಶ್ಯಾವಸ್ತಾಮ್ರೋಽಥವಾ ದಾಹತೋದಸ್ಫುರಣಪಾಕವಾನ್ || ೧೯ ||**

**ರುಗ್ವಿದಾಹಾನ್ವಿತೋಽಭೀಕ್ಷ್ಣಂ ವಾಯುಃ ಸಂಧ್ಯಸ್ಥಿಮಜ್ಜಸು ||**
**ಛಿಂದನ್ನಿವ ಚರತ್ಯಂತ ವಕ್ರೀಕುರ್ವಂಶ್ಚ ವೇಗವಾನ್ || ೨೦ ||**

**ಕರೋತಿ ಖಂಜಂ ಪಂಗುಂ ವಾ ಶರೀರೇ ಸರ್ವತಶ್ಚರನ್ ||**
**ಸರ್ವೈರ್ಲಿಂಗೈಸ್ತು ವಿಜ್ಞೇಯಂ ವಾತಸೃಗುಭಯಾಶ್ರಯಮ್ || ೨೧ ||**

**ತತ್ರ ವಾತೋಽಧಿಕೋ ವಾ ಸ್ಯಾತ್ ರಕ್ತಂ ಪಿತ್ತಂ ಕಫೋಽಪಿ ವಾ ||**
**ಸಂಸೃಷ್ಟೈಶ್ಚ ಸಮಸ್ತೈಶ್ಚ ಯಚ್ಚ ತಚ್ಛೃಣು ಲಕ್ಷಣೈಃ || ೨೨ ||**

**ವಿಶೇಷತಃ ಸಿರಾಯಾಮಸ್ತೋದಸ್ಫುರಣಭೇದನಮ್ ||**
**ಶೋಥಸ್ಯ ಕಾರ್ಷ್ಣ್ಯಂ ರೌಕ್ಷ್ಯಂ ಚ ಶ್ಯಾವತಾವೃದ್ಧಿಹಾನಯಃ || ೨೩ ||**

**ಧಮನ್ಯಂಗುಲಿಸಂಧೀನಾಂ ಸಂಕೋಚೋಽಂಗಗ್ರಹೋಽತಿರುಕ್ ||**
**ಕುಂಚನಸ್ತಂಭನೇ ಶೀತಪ್ರದ್ವೇಷಶ್ಚಾನಿಲೋತ್ತರೇ || ೨೪ ||**

**ರಕ್ತೇ ಶೋಥೋಽತಿರುಕ್ ತೋದಸ್ತಾಮ್ರಶ್ಚಿಮಿಚಿಮಾಯತೇ ||**
**ಸ್ನಿಗ್ಧರೂಕ್ಷೈಃ ಶಮಂ ನೈತಿ ಕಂಡೂಸ್ವೇದಾನ್ವಿತೋಭೃಶಮ್ || ೨೫ ||**

ವಿದಾಹೋ ವೇದನಾ ಮೂರ್ಚ್ಛಾ ಸ್ವೇದಸ್ತೃಷ್ಣಾ ಮದೋಭ್ರಮಃ ||
ರಾಗಃ ಪಾಕಶ್ಚ ಭೇದಶ್ಚ ಶೋಷಶ್ಚೋಕ್ತಾನಿ ಪೈತ್ತಿಕೆ || ೨೬ ||
ಸ್ತೈಮಿತ್ಯಂ ಗೌರವಂ ಸ್ನೇದಃ ಸುಪ್ತಿರ್ಮಂದಾ ಚ ರುಕ್ ಕಫೇ ||
ಹೇತುಲಕ್ಷಣಸಂಸರ್ಗಾದ್ ವದೇದ್ ದ್ವಂದ್ವಂ ತ್ರಿದೋಷಜಮ್ ||೨೭||

**ಅರ್ಥ—** ಇದು ಉತ್ತಾನ (ಮೇಲ್ಭಾಗದಲ್ಲಿರುವದು) ಗಂಭೀರ ಒಳಕ್ಕೆ ಹೋಗಿರುವದು. ಎಂದು ಎರಡು ವಿಧವೆಂದು ಹೇಳಲ್ಪಡುತ್ತದೆ, ತ್ವಚ ಮಾಂಸಗಳಲ್ಲಿಯೇ ಇರುವದು ಉತ್ತಾನವು. ಅದಕ್ಕೂ ಒಳಕ್ಕೆ ಹೋಗಿರುವದುಗಂಭೀರವು. ||೧೭|| ಉತ್ತಾನವಲ್ಲಿ ತ್ವಚೆಯು ನಸುಗಪ್ಪು ಅಥವಾ ಕೆಂಪು ಇದ್ದು, ಅದರಲ್ಲಿ ತಿಂಡಿ, ದಾಹ, ನೋವು, ಜಗ್ಗುವಿಕೆ, ಚುಚ್ಚುವಿಕೆ, ಸ್ಫುರಣ, ಆಕುಂಚನಗಳಿರುವವು. ||೧೮|| ಗಂಭೀರದಲ್ಲಿ ಬಾವು, ಸ್ತಬ್ಧ, ಮತ್ತು ಬಿರುಸು ಕಪ್ಪು ಅಥವಾ ಕೆಂಪು ಇದ್ದು, ಅದರಲ್ಲಿ ದಾಹ, ಚುಚ್ಚುವಿಕೆ, ಸ್ಫುರಣ, ಪಾಕ, ನೋವುಗಳಿರುವವು. ||೧೯|| ನೋವು, ದಾಹಗಳಿಂದ ಕೂಡಿದ ವಾಯುವು ಸಂಧಿ, ಅಸ್ಥಿ, ಮಜ್ಜಗಳಲ್ಲಿ ಆಗಾಗ್ಗೆ ಸಂಚರಿಸಿ, ಅವುಗಳನ್ನು ಕತ್ತರಿಸುವಂತೆ ವೇಗದಿಂದ ಒಳಗೆ ತಿರುಗುತ್ತ, ಅವುಗಳನ್ನು ಡೊಂಕ ಮಾಡುತ್ತದೆ. ||೨೦|| ಶರೀರವಲ್ಲಿ ಎಲ್ಲ ಕಡೆಗೂ ತಿರುಗುತ್ತ ರೋಗಿಯನ್ನು ಕುಂಟ ಅಥವಾ ಹೆಳವನನ್ನಾಗಿ ಮಾಡುತ್ತದೆ. ಎಲ್ಲ ಲಕ್ಷಣಗಳು ಇದ್ದರೆ ಇದ್ದು (ಉತ್ತಾನ ಮತ್ತು ಗಂಭಿರ) ಉಭಯಾತ್ಮಕವೆಂದು ತಿಳಿಯಬೇಕು. ||೨೧|| ಇವುಗಳಲ್ಲಿ ವಾತವು ಅಥವಾ ರಕ್ತವು ಅಥವಾ ಪಿತ್ತವುಹೆಚ್ಚಿರುವದು. ಎರಡು ಅಥವಾ ಎಲ್ಲದೋಷಗಳು ಹೆಚ್ಚಿರುವವು. ಅವುಗಳ ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ. ||೨೨|| ವಾತವು ಹೆಚ್ಚಿದ್ದರೆ ವಿಶೇಷವಾಗಿ ಸಿರೆಗಳು ಜಗ್ಗುವವು. ಶೂಲಿ, ಸ್ಫುರಣ, ಚುಚ್ಚುವಿಕೆಗಳಿರುವವು. ಬಾವು ಕಪ್ಪು ಮತ್ತು ರುಕ್ಷವಿದ್ದು ಆ ಕಪ್ಪು ಬಣ್ಣದಲ್ಲಿ ಹೆಚ್ಚುಕಡಿಮೆಯಾಗುವದು. ||೨೩|| ಧಮನಿ ಮತ್ತು ಬೊಟ್ಟುಗಳ ಸಂದುಗಳು ಸಂಕುಚಿತವಾಗುವವು. ಮೈಹಿಡಿಯುವದು.. ಮತ್ತು ಬಹಳ ನೋಯುವದು. ಆಕುಂಚನ, ಸ್ತಬ್ಧತೆ, ಶೀತ, ದ್ವೇಷಗಳಿರುವವು ||೨೪|| ರಕ್ತವು ಅಧಿಕವಿದ್ದರೆ, ಬಾವು ಕೆಂಪು ಇದ್ದು, ಅದರಲ್ಲಿ ನೋವು, ಚುಚ್ಚುವಿಕೆ, ಜುಣುಜುಣು ವೇದನೆಯಿರುವದು. ಸ್ನಿಗ್ಧ, ರೂಕ್ಷ ಉಪಚಾರಗಳಿಂದ ಅದರ ಶಮನವಾಗದು. ತಿಂಡಿ, ಬೆವರು ಬಹಳ ಇರುವದು. ||೨೫|| ಪಿತ್ತವು ಹೆಚ್ಚಿದ್ದರೆ, ದಾಹ, ನೋವು, ಮೂರ್ಛೆ, ಬೆವರು, ನೀರಡಿಕೆ, ಮದ, ಭ್ರಮ, ಕೆಂಪುಬಣ್ಣ, ಪಾಕ, ಚುಚ್ಚುವಿಕೆ, ಮುಖಶೋಷಗಳಿರುವವು. ||೨೬|| ಕಫವು ಹೆಚ್ಚಿದ್ದರೆ, ಒದ್ದೇ ಹೊಚ್ಚಿದಂತೆ ಅನಿಸೋಣ, ಜಡತ್ವ, ಬೆವರು, ಸ್ಪರ್ಶ

ಜ್ಞಾನ ಶೂನ್ಯತೆಗಳು ಇದ್ದು, ನೋವು ಕಡಿಮೆ ಇರುವದು. ಕಾರಣ ಮತ್ತು ಲಕ್ಷಣಗಳ ಮಿಶ್ರದಿಂದ ದ್ವಂದ್ವಜ, ಅಥವಾ ತ್ರಿದೋಷಜವೆಂಬುದನ್ನು ತಿಳಿದುಕೊಳ್ಳಬೇಕು. ||೨೭||

ಸಾಧ್ಯಾಸಾಧ್ಯತೆಗಳನ್ನು ಹೇಳುತ್ತಾರೆ.

**ಏಕದೋಷಾನುಗಂ ಸಾಧ್ಯಂ ನವಂ ಯಾಪ್ಯಂ ದ್ವಿದೋಷಜಮ್ ||**
**ತ್ರಿದೋಷಮಸಾಧ್ಯಂ ಸ್ಯಾದ್ ಯಸ್ಯ ಚ ಸ್ಯುರುಪದ್ರವಾಃ ||೨೮||**

**ಅರ್ಥ—** ಒಂದೇದೋಷದಿಂದುಂಟಾಗಿದ್ದು ಹೊಸದಿದ್ದರೆ ಸಾಧ್ಯ. ಎರಡು ದೋಷಗಳಿಂದುಂಟಾಗಿದ್ದರೆ ಯಾಪ್ಯವು. ತ್ರಿದೋಷದಿಂದುಂಟಾಗಿದ್ದರೆ ಅಥವಾ ಉಪದ್ರವಗಳಿದ್ದರೆ ಅಸಾಧ್ಯವು. ||೨೮||

ಉಪದ್ರವಗಳನ್ನು ಹೇಳುತ್ತಾರೆ.

**ಅಸ್ವಪ್ನಾರೋಚಕಶ್ವಾಸಮಾಂಸಕೋಥಶಿರೋಗ್ರಹಾಃ ||**
**ಮೂರ್ಛಾಯಮದರುಕ್‌ತೃಷ್ಣಾಜ್ವರಮೋಹಪ್ರವೇಪಕಾಃ ||೨೯||**

**ಹಿಕ್ಕಾಪಾಂಗುಲ್ಯವೀಸರ್ಪಪಾಕತೋದಭ್ರಮಕ್ಲಮಾಃ ||**
**ಅಂಗುಲೀವಕ್ರತಾಸ್ಫೋಟದಾಹಮರ್ಮಗ್ರಹಾರ್ಬುದಾಃ ||೩೦||**

**ಏತೈರುಪದ್ರುತಂ ವರ್ಜ್ಯಂ ಮೋಹೇನೈಕೇನ ವಾಪಿ ಯತ್ ||**
**ಸಂಪ್ರಸ್ರಾವಿ ವಿವರ್ಣಂ ಚ ಸ್ತಬ್ಧಮರ್ಬುದಕೃಚ್ಚ ಯತ್ ||೩೧||**

**ವರ್ಜಯೇಚ್ಚೈವಸಂಕೋಚಕರಮಿಂದ್ರಿಯತಾಪನಮ್ ||**
**ಆಕೃತ್‌ಸ್ನೋಪದ್ರವಂ ಯಾಪ್ಯಂ ಸಾಧ್ಯಂ ಸ್ಯಾನ್ನಿರುಪದ್ರವಮ್ ||೩೨||**

**ಅರ್ಥ—** ನಿದ್ದೆಬಾರದಿರೋಣ ಅರುಚಿ, ಶ್ವಾಸ, ಮಾಂಸಕೊಳೆಯೋಣ ತಲೆಹಿಡಿಯೋಣ, ಮೂರ್ಛೆ, ಮದ, ನೋವು, ನೀರಡಿಕೆ, ಜ್ವರ, ಮೋಹ, ನಡುಗು, ||೨೯|| ಬಿಕ್ಕು, ಹೆಳವತನ, ಇಸಬು, ಪಾಕ, ಚುಚ್ಚುವಿಕೆ, ಭ್ರಮ, ಗ್ಲಾನಿ, ಬೊಟ್ಟು ಡೊಂಕವಾಗೋಣ, ಬಕ್ಕೆ, ದಾಹ, ಮರ್ಮಗಳು ಹಿಡ ಕೊಳ್ಳೋಣ, ಅರ್ಬುದ, ಇವು ಈ ರೋಗದ ಉಪದ್ರವಗಳು ||೩೦|| ಈ ಉಪದ್ರವಗಳಿದ್ದರೆ, ಅಥವಾ ಮೋಹ ಒಂದೇ ಉಪದ್ರವವಿದ್ದರೂ, ಅಥವಾ ಸ್ರಾವ, ವಿವರ್ಣತೆ, ಸ್ತಬ್ಧತೆ, ಅರ್ಬುದಗಳು ಇದ್ದರೆ, ಅದು ಅಸಾಧ್ಯವು. ||೩೧|| ಸಂಕೋಚ, ಇಂದ್ರಿಯಗಳು ಕಾಯೋಣ, ಇವು ಇದ್ದು, ಉಪದ್ರವ

ಗಳು ಕೆಲವು ಮಾತ್ರ ಇದ್ದರೆ, ಅದು ಯಾಪ್ಯವು. ಯಾವ ಉಪದ್ರವವೂ ಇಲ್ಲದಿದ್ದರೆ ಸಾಧ್ಯವು. ||೩೨||

ಸಾಧ್ಯವಾತರಕ್ತದ ಚಿಕಿತ್ಸೆಯನ್ನು ಹೇಳುತ್ತಾರೆ—

ರಕ್ತಮಾರ್ಗಂ ನಿಹಂತ್ಯಾಶು ಶಾಖಾಸಂಧಿಷು ಮಾರುತಃ ||
ನಿವಿಶ್ಯಾನ್ಯೋಽನ್ಯಮಾಬಾಧ್ಯ ವೇದನಾಭಿರ್ಹರೇದಸೂನ್ || ೩೩ ||

ತತ್ರ ಮುಂಚೇದಸೃಕ್ ಶೃಂಗಸೂಚ್ಯಲಾಬುಜಲೌಕಸಾ ||
ಪ್ರಚ್ಛನ್ನೈರ್ವಾ ಸಿರಾಭಿರ್ವಾ ಯಥಾದೋಷಂ ಯಥಾಬಲಮ್ ||೩೪||

ರುಗ್ದಾಹತೋದರಾಗಾರ್ತಾದಸೃಕ್ ಸ್ರಾವ್ಯಂ ಜಲೌಕಸಾ ||
ಶೃಂಗೈಸ್ತು ಚಿಮಿಚಿಮಾ ಕಂಡೂರುಗ್ದ್ವಯನಾದ್ಧರೇತ್ || ೩೫ ||

ದೇಶಾದ್ದೇಶಂ ವ್ರಜತ್ ಸ್ರಾವ್ಯಂ ಸಿರಾಭಿಃ ಪ್ರಚ್ಛನೇನ ವಾ ||
ಅಂಗಗ್ಲಾನೌ ತು ನ ಸ್ರಾವ್ಯಂ ರೂಕ್ಷೋ ವಾತೋತ್ತರೇ ಚ ಯತ್
|| ೩೬ ||

ಗಂಭೀರಂ ಶ್ವಯಥುಂ ಸ್ತಂಭಂ ಕಂಪಂ ಸ್ನಾಯುಸಿರಾಮಯಾನ್ ||
ಗ್ಲಾನಿಂ ಚಾಪಿ ಸಸಂಕೋಚಾಂ ಕುರ್ಯಾದ್ ವಾಯುರಸೃಕ್ ಕ್ಷಯಾತ್
|| ೩೭ ||

ಖಾಂಜಾದೀನ್ ವಾತರೋಗಾಂಶ್ಚ ಮೃತ್ಯುಂ ಚಾತ್ಯವಸೇಚನಾತ್ ||
ಕುರ್ಯಾತ್ತಸ್ಮಾತ್ಪ್ರಮಾಣೇನ ಸ್ನಿಗ್ಧಾದ್ರಕ್ತಂ ವಿನಿರ್ಹರೇತ್ || ೩೮ ||

ವಿರೇಚ್ಯ ಸ್ನೇಹಯಿತ್ವಾದೌ ಸ್ನೇಹಯುಕ್ತೈರ್ವಿರೇಚನೈಃ ||
ರೂಕ್ಷೈರ್ವಾ ಮೃದುಭಿಃ ಶಸ್ತಮಸಕೃದ್ ಬಸ್ತಿಕರ್ಮ ಚ || ೩೯ ||

ಸೇಕಾಭ್ಯಂಗಪ್ರದೇಹಾನ್ನ ಸ್ನೇಹಾಃ ಪ್ರಾಯೋಽವಿದಾಹಿನಃ ||
ವಾತರಕ್ತೇ ಪ್ರಶಸ್ಯಂತೇ ವಿಶೇಷಂ ತು ನಿಬೋಧಮೇ || ೪೦ ||

ಬಾಹ್ಯಮಾಲೇಪನಾಭ್ಯಂಗಪರಿಷೇಕೋಪನಾಹನೈಃ ||
ವಿರೇಕಾಸ್ಥಾಪನಸ್ನೇಹಪಾನೈರ್ಗಂಭೀರಮಾಚರೇತ್ || ೪೧ ||

ಸರ್ಪಿಸ್ತೈಲವಸಾಮಜ್ಜ ಪಾನಾಭ್ಯಂಜನಬಸ್ತಿಭಿಃ ||
ಸುಖೋಷ್ಣೈರುಪನಾಹೈಶ್ಚ ವಾತೋತ್ತರಮುಪಾಚರೇತ್ || ೪೨ ||

ವಿರೇಚನೈರ್ಘೃತಕ್ಷೀರಪಾನೈಃ ಸೇಕೈಃ ಸಬಸ್ತಿಭಿಃ ||
ಶೀತೈರ್ನಿರ್ವಾಪಣೈಶ್ಚಾಪಿ ರಕ್ತಪಿತ್ತೋತ್ತರಂ ಜಯೇತ್ || ೪೩ ||

ವಮನಂ ಮೃದುನಾತ್ಯರ್ಥಂ ಸ್ನೇಹಸೇಕೌ ವಿಲಂಘನಮ್ ||
ಕೋಷ್ಣ ಲೇಪಾಶ್ಚ ಶಸ್ಯಂತೇ ವಾತರಕ್ತೇ ಕಫೋತ್ತರೇ || ೪೪ ||
ಕಫವಾತೋತ್ತರೇ ಶೀತೈಃ ಪ್ರಲಿಪ್ತೇ ವಾತಶೋಣಿತೇ ||
ವಿದಾಹಶೋಫರುಕ್‌ಕಂಡೂ ವಿವೃದ್ಧಿಃ ಸ್ತಂಭನಾದ್ ಭವೇದ್ ||೪೫||
ರಕ್ತಪಿತ್ತೋತ್ತರೇ ದಾಹಃ ಕ್ಲೇದೋಽವದಾರುಣಂ ಭವೇತ್ ||
ಉಷ್ಣೈಸ್ತಸ್ಮಾದ್ ಭಿಷಕ್ ದೋಷಬಲಂ ಬುಧ್ವಾ ಚರೇತ್‌ಕ್ರಿಯಾಮ್ ||೪೬||

**ಅರ್ಥ—** ವಾಯುವು ಶಾಖಾಸಂದಿಗಳಲ್ಲಿ ಸೇರಿ, ರಕ್ತಮಾರ್ಗವನ್ನು ತೀವ್ರವಾಗಿ ನಾಶಮಾಡುವದು. ಆದರಿಂದ ವಾತರಕ್ತಗಳು ಪರಸ್ಪರವಾಗಿ ದೂಷಣೆ ವೇದನೆಗಳಿಂದ ಪ್ರಾಣಗಳನ್ನು ಕಳೆಯುವದು. ||೩೩|| ಆದಕ್ಕೆ ದೋಷ ಬಲಗಳನ್ನು ವಿಚಾರಿಸಿ, ಶೃಂಗಸೂಚಿ, ಕುಂಬಳಕಾಯಿ, ಜಿಗಳಿಗಳಿಂದ ಅಥವಾ ಕಚ್ಚುಹಾಕುವವರಿಂದ ಅಥವಾ ಸಿರೆಗಳನ್ನು ಕಡಿದು ರಕ್ತವನ್ನು ತೆಗೆಯಬೇಕು. ||೩೪|| ನೋವು, ದಾಹ, ಚುಚ್ಚುವಿಕೆ, ಕೆಂಪುಬಂಣ ಇವುಗಳು ಇದ್ದರೆ ಜಿಗಳಿಗಳಿಂದ ರಕ್ತಸ್ರಾವವನ್ನು ಮಾಡಬೇಕು. ಜುಣಾಜುಣಾ ತಿಂಡಿ, ನೋವು, ವೇದನೆಗಳಿದ್ದರೆ ಶೃಂಗಗಳಿಂದ ರಕ್ತವನ್ನು ತೆಗೆಯಬೇಕು. ||೩೫|| ಒಂದುಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ಹೋಗುವ ರಕ್ತವನ್ನು ಸಿರೆಯನ್ನು ಕಡಿದು ಅಥವಾ ಕಚ್ಚುಹಾಕಿ ತೆಗೆಯಬೇಕು. ಶರೀರವು ಮ್ಲಾನರುಕ್ಷವಾತಾಧಿಕವಿದ್ದರೆ ರಕ್ತಸ್ರಾವವನ್ನು ಮಾಡಬಾರದು ||೩೬|| ಏಕಂದರೆ ವಾಯುವು ರಕ್ತಕ್ಷಯದಿಂದ ಗಂಭೀರ ಬಾವು, ಶಟಿ, ಕಂಪ, ಸ್ನಾಯುಸಿರೆಗಳರೋಗ, ಗ್ಲಾನಿ ಸಂಕೋಚಗಳನ್ನು ಉಂಟುಮಾಡುವದು. ||೩೭|| ಅತಿರಕ್ತಸ್ರಾವದಿಂದ ಕುಂಟತನ, ವಾತರೋಗ, ಮೃತ್ಯುವನ್ನುಂಟುಮಾಡುವದು. ಕಾರಣ ಮೊದಲು ರೋಗಿಯನ್ನು ಸ್ನಿಗ್ಧಮಾಡಿ ಯೋಗ್ಯಪ್ರಮಾಣದಿಂದ ರಕ್ತವನ್ನು ತೆಗೆಯಬೇಕು. ||೩೮|| ಮೊದಲು ಸ್ನೇಹಕೊಟ್ಟು ಆಮೇಲೆ ಸ್ನೇಹಯುಕ್ತವಿರೇಚನಗಳಿಂದ ಅಥವಾ ಮೃದುವಾದ ರೂಕ್ಷವಿರೇಚನಗಳಿಂದ ವಿರೇಚನ ಮಾಡಿಸಿ, ಅನೇಕ ಸಾರೆ ಬಸ್ತಿಯನ್ನು ಕೊಡುವದು ಒಳ್ಳೆಯದು. ||೩೯|| ವಿದಾಹ ಮಾಡದ ಸೇಕ ಅಭ್ಯಂಗ, ಲೇಪ, ಅನ್ನ, ಸ್ನೇಹಗಳು ವಾತರಕ್ತರೋಗಿಗೆ ಹಿತಕರವಾಗಿವೆ. ವಿಶೇಷ ಚಿಕಿತ್ಸೆಯನ್ನು ಹೇಳುವೆನು ಕೇಳಿರಿ. ||೪೦|| ಉತ್ತಾನ ವಾತರಕ್ತವನ್ನು ಲೇಪ, ಅಭ್ಯಂಗ, ಪರಿಷೇಕ, ಉಪನಾಹಗಳಿಂದಲೂ ಗಂಭೀರ ವಾತರಕ್ತವನ್ನು ವಿರೇಚನ ನಿರೂಹ, ಬಸ್ತಿ, ಸ್ನೇಹ, ಪಾನಗಳಿಂದಲೂ ಉಪಚರಿಸಬೇಕು. ||೪೧||

ಅದರಲ್ಲಿಯೂ ವಾತಾಧಿಕ ಒತ್ತರವಿದ್ದರೆ ಘೃತ, ತೈಲ, ನೆಣ, ಮಜ್ಜಗಳಪಾನ, ಅಭ್ಯಂಗ, ಬಸ್ತಿಗಳಿಂದಲೂ ಬೆಚ್ಚಗಿನ ಉಪನಾಹಗಳಿಂದಲೂ ಉಪಚರಿಸ ಬೇಕು. ||೪೨|| ರಕ್ತಾಧಿಕ, ಮತ್ತು ಪಿತ್ತಾಧಿಕ ಉತ್ತಾನ ವಾತರಕ್ತಗಳನ್ನು ವಿರೇಚನ, ತುಪ್ಪ ಹಾಲು ಕುಡಿಯೋಣ) ಪರಿಷೇಕ, ಬಸ್ತಿ, ತಣ್ಣಗಿನ ಲೇಪ ಗಳಿಂದ ಕಳೆಯಬೇಕು. ||೪೩|| ಕಫಾಧಿಕ ಉತ್ತಾನ ವಾತರಕ್ತದಲ್ಲಿ ಬಹಳ ಮೃದುವಲ್ಲದ ವಮನ, ಸ್ನೇಹ, ಪರಿಷೇಕ, ಲಂಘನ, ಬೆಚ್ಚಗಿನ ಲೇಪಗಳು ಪ್ರಶಸ್ತವಾಗಿವೆ. ||೪೪|| ವಾತಾಧಿಕ ಉತ್ತಾನ ರಕ್ತ ಪಿತ್ತದಲ್ಲಿ ಶೀತಲೇಪಗಳನ್ನು ಮಾಡಿದರೆ ಉಷ್ಣತೆಗೆ ಪ್ರತಿಬಂಧವಾಗಿ ಒಳಗೆ ಉಳಿಯುವದರಿಂದ ವಿದಾಹ, ಬಾವು, ನೋವು, ತಿಂಡಿಗಳು ಹೆಚ್ಚಾಗುವವು. ||೪೫|| ರಕ್ತಪಿತ್ತಾಧಿಕ ವಾತ ರಕ್ತದಲ್ಲಿ ಉಷ್ಣಲೇಪಮಾಡಿದರೆ ದಾಹ, ಕ್ಲೇದ ಉಂಟಾಗುವವು. ಮತ್ತು ಅದು ಸೀಳುವದು. ಆದ್ದರಿಂದ ವೈದ್ಯನು ದೋಷಬಲವನ್ನು ವಿಚಾರಿಸಿ ಚಿಕಿತ್ಸೆ ಯನ್ನು ಮಾಡಬೇಕು. ||೪೬||

ಪಥ್ಯವನ್ನು ಹೇಳುತ್ತಾರೆ—

**ದಿವಾಸ್ವಪ್ನಂ ಸಸಂತಾಪಂ ವ್ಯಾಯಾಮಂ ಮೈಥುನಂತಥಾ ||**
**ಕಟೂಷ್ಣಗುರ್ವಭಿಷ್ಯಂದಿ ಲವಣಾಮ್ಲಂ ಚ ವರ್ಜಯೇತ್ ||೪೭||**
**ಪುರಾಣಯವಗೋಧೂಮನೀವಾರಾಃ ಶಾಲಿಷಷ್ಟಿಕಾಃ ||**
**ಭೋಜನಾರ್ಥೇ ರಸಾರ್ಥಂ ತು ವಿಷ್ಕಿರಪ್ರತುದಾಹಿತಾಃ ||೪೮||**
**ಆಢಕ್ಯಶ್ಚಣಕಾ ಮುದ್ಗಾ ಮಸೂರಾಃ ಸಮುಕುಷ್ಟಕಾಃ ||**
**ಯೂಷಾರ್ಥೇ ಬಹುಸರ್ಪಿಷ್ಕಾಃ ಪ್ರಶಸ್ತಾ ವಾತಶೋಣಿತೇ ||೪೯||**
**ಸುನಿಷಣ್ಣಕವೇತ್ರಾಗ್ರಕಾಕಮಾಚೀಶತಾವರೀಮ್ ||**
**ವಾಸ್ತುಕೋಪೋದಿಕಾಶಾಕಂ ಶಾಕಂ ಸೌವರ್ಚಲಂ ತಥಾ ||೫೦||**
**ಘೃತಮಾಂಸರಸೇ ಭೃಷ್ಟಂ ಶಾಕಸಾತ್ಮ್ಯಾಯ ದಾಪಯೇತ್ ||**
**ವ್ಯಂಜನಾರ್ಥೇ ತಥಾ ಗವ್ಯಂ ಮಾಹಿಷಾಜಂ ಪಯೋಹಿತಮ್ ||೫೧||**
**ಇತಿ ಸಂಕ್ಷೇಪತಃ ಪ್ರೋಕ್ತಂ ವಾತರಕ್ತಚಿಕಿತ್ಸಿತಮ್ ||**
**ಏತದೇವ ಪುನಃ ಸರ್ವಂ ವ್ಯಾಸತಃ ಸಂಪ್ರವಕ್ಷ್ಯತೇ ||೫೨||**

**ಅರ್ಥ—** ವಾತರಕ್ತದಲ್ಲಿ ಹಗಲು ನಿದ್ರೆ, ಕಾಸೋಣ, ವ್ಯಾಯಾಮ, ಮೈಥುನ, ಕಾರ, ಉಷ್ಣ, ಜಡ, ಅಭಿಷ್ಯಂದಿ, ಉಪ್ಪು, ಹುಳಿಗಳನ್ನು ಬಿಡಬೇಕು. || ೪೭ || ಹಳೆಜವೆ, ಗೋದಿ, ನೀವಾರ, ( ತೃಣ

ಧಾನ್ಯ ಅಕ್ಕಿ, ಷಷ್ಟಿಕ ಅಕ್ಕಿ, ಊಟಕ್ಕಾಗಿಯೂ ಮಾಂಸರಸಕ್ಕಾಗಿ ವಿಷ್ಕಿರ (ಕೋಳಿ ಮುಂತಾದ) ಮತ್ತು ಪ್ರತುಕ (ಹದ್ದು ಮುಂ.) ಪ್ರಾಣಿಗಳು ಹಿತಕರವಾಗಿವೆ ||೪೮|| ತೊಗರಿ, ಕಡಲೆ, ಹೆಸರು, ಚನ್ನಂಗಿ, ಅಡವಿ ಹೆಸರು, ಇವುಗಳ ಕಟ್ಟುಗಳನ್ನು ಬಹಳ ತುಪ್ಪಹಾಕಿ ತಕ್ಕೊಳ್ಳಬೇಕು. ||೪೯|| ಪಲ್ಯದ ರೂಢಿಯಿದ್ದವನಿಗೆ ಗೊರಜಿ, ಬೆತ್ತದ ಚಿಗುರು, ಕಾಶಿ, ಶತಾವರಿ, ಚಕೋತ, ಬಸಳೆ, ಸೌವರ್ಚಲ (ಸೂರ್ಯ ಮುಖಿ) ಇವುಗಳ ಎಲೆಗಳನ್ನು ||೫೦|| ತುಪ್ಪ, ಅಥವಾ ಮಾಂಸರಸದಲ್ಲಿ ಕರಿದು ಬಾಡಿಸಿಕೊಳ್ಳಲು ಕೊಡಬೇಕು. ಅವರಿಗೆ ಆಕಳ, ಎಮ್ಮೆಯ, ಆಡಿನ ಹಾಲುಗಳು ಹಿತಕರವಾಗಿವೆ. ||೫೧|| ಈ ಪ್ರಕಾರ ಸಂಕ್ಷೇಪವಾಗಿ ವಾತರಕ್ತ ಚಿಕಿತ್ಸೆಯನ್ನು ಹೇಳಿದೆವು. ಇದೆಲ್ಲವನ್ನೇ ಮುಂದೆ ವಿಸ್ತಾರವಾಗಿ ಹೇಳುವೆವು. ||೫೨||

ಹಿಂದೆ ಹೇಳಿದ್ದನ್ನು ವಿಸ್ತಾರವಾಗಿ ಹೇಳಹೊರಟು ಮೊದಲು ಘೃತಗಳನ್ನು ಹೇಳುತ್ತಾರೆ.

**ಶ್ರಾವಣೀ ಕ್ಷೀರಕಾಕೋಲೀ ಜೀವಕರ್ಷಭಕೈಃ ಸಮೈಃ ||**
**ಸಿದ್ಧಂ ಸಮಧುಕೈಃ ಸರ್ಪಿಃ ಸಕ್ಷೀರಂ ವಾತರಕ್ತನುತ್ ||೫೩||**

**ಬಲಾಮತಿಬಲಾಂ ಮೇದಾಮಾತ್ಮಗುಪ್ತಾಂ ಶತಾವರೀಮ್ ||**
**ಕಾಕೋಲೀಂ ಕ್ಷೀರಕಾಕೋಲೀಂ ರಾಸ್ನಾಂ ವೃದ್ಧಿಂ ಚ ಪೇಷಯೇತ್ ||೫೪||**

**ಘೃತಂ ಚತುರ್ಗುಣಕ್ಷೀರಂ ತೈಃ ಸಿದ್ಧಂ ವಾತರಕ್ತನುತ್ ||**
**ಹೃತ್ಪಾಂಡುರೋಗ ವೀಸರ್ಪಕಾಮಲಾಜ್ವರನಾಶನಮ್ ||೫೫||**

**ತ್ರಾಯಂತಿಕಾ ತಾಮಲಕೀ ದ್ವಿಕಾಕೋಲೀ ಶತಾವರೀ ||**
**ಕಶೇರುಕಾ ಕಷಾಯೇಣ ಕಲ್ಕೈರೇಭಿಃ ಪಚೇದ್ ಘೃತಮ್ ||೫೬||**

**ದತ್ವಾ ಪರೂಷಕದ್ರಾಕ್ಷಾಕಾಷ್ಮರ್ಯೇಕ್ಷುರಸಾನ್ ಸಮಾನ್ ||**
**ಪೃಥಕ್ ವಿತಾರ್ಯೋಃ ಸ್ವರಸಂ ತಥಾ ಕ್ಷೀರಂ ಚತುರ್ಗುಣಂ ||೫೭||**

**ಏತತ್ಪ್ರಾಯೋಗಿಕಂ ಸರ್ಪಿಃ ಪಾರೂಷಕಮಿತಿಸ್ಮೃತಮ್ ||**
**ವಾತರಕ್ತೇ ಕಫೇ ಕ್ಷೀಣೇ ವೀಸರ್ಪೇ ಪೈತ್ತಿಕೇ ಜ್ವರೇ ||೫೮||**
**ದ್ವೇ ಪಂಚಮೂಲೇ ವರ್ಷಾಭೂಮೇರಂಡಂ ಸಪುನರ್ನವಮ್ ||**
**ಮುದ್ಗಪರ್ಣೀಮಹಾಮೇದಾ ಮಾಷಪರ್ಣೀಶತಾವರೀ ||೫೯||**

ಶಂಖಪುಷ್ಪೀಮಪಾಕ್‌ಪುಷ್ಪೀಂರಾಸ್ನಾಮತಿಬಲಾಂಬಲಾಮ್ ||
ಪೃಥಕ್ ದ್ವಿಪಲಿಕಾನ್ ಕೃತ್ವಾ ಜಲದ್ರೋಣೇ ವಿಪಾಚಯೇತ್ ||೬೦||
ಪಾದಶೇಷಂ ಸಮಂ ಕ್ಷೀರಂ ಧಾತ್ರೀಕ್ಷುಚ್ಛಾಗಲಾನ್ ರಸಾನ್ ||
ಘೃತಾಢಕೇನ ಸಂಯೋಜ್ಯ ಶನೈರ್ಮೃದ್ವಗ್ನಿನಾ ಪಚೇತ್ ||೬೧||
ಕಲ್ಕಂ ದತ್ತ್ವಾ ಚ ಮೇದೇ ದ್ವೇ ಕಾಶ್ಮರ್ಯಫಲಮುತ್ಪಲಮ್ ||
ತ್ವಕ್‌ಕ್ಷೀರೀಂ ಪಿಪ್ಪಲೀಂ ದ್ರಾಕ್ಷಾಂ ಪದ್ಮಬೀಜಂ ಪುನರ್ನವಾಮ್ ||೬೨||

ನಾಗರಂ ಕ್ಷೀರಕಾಕೋಲೀಂ ಪದ್ಮಕಂ ಬೃಹತಿದ್ವಯಮ್ ||
ವೀರಾಂ ಶೃಂಗಾಟಕಂ ಭವ್ಯಮುರುಮೂಲಂ ವಿಕೋಶಕಮ್ ||೬೩||
ಖರ್ಜೂರಾಕ್ಷೋಢಬಾದಾಮ ಮುಂಜಾತಾಭಿಷುಕಂ ತಥಾ ||
ಏತೈರ್ಘೃತಾಢಕೇ ಸಿದ್ಧೇ ಕ್ಷೌದ್ರಂ ಶೀತೇ ಪ್ರದಾಪಯೇತ್ ||೬೪||
ಸಮ್ಯಕ್ ಸಿದ್ಧಂ ಚ ವಿಜ್ಞಾಯ ಸುಗುಪ್ತಂ ಸನ್ನಿಧಾಪಯೇತ್ ||
ಕೃತರಕ್ಷಾವಿಧಂ ತಚ್ಚ ಪ್ರಾಶಯೇದಕ್ಷಸಮ್ಮಿತಮ್ ||೬೫||
ಪಾಂಡುರೋಗಂ ಜ್ವರಂ ಹಿಕ್ಕಾಂ ಸ್ವರಭೇದಂ ಭಗಂದರಮ್ ||
ಪಾರ್ಶ್ವಶೂಲಂ ಕ್ಷಯಂ ಕಾಸಂ ಪ್ಲೀಹಾನಂ ವಾತಶೋಣಿತಮ್ ||೬೬||
ಸರ್ವಾಂಗೈಕಾಂಗರೋಗಾಂಶ್ಚ ಮೂತ್ರಸಂಗಂ ಚ ನಾಶಯೇತ್ ||
ಬಲವರ್ಣಕರಂ ಧನ್ಯಂ ವಲೀಪಲಿತನಾಶನಮ್ ||೬೭||
ಜೀವನೀಯಮಿದಂ ಸರ್ಪಿರ್ವೃಷ್ಯಂ ವಂಧ್ಯಾಸುತಪ್ರದಮ್ ||
ಅಗ್ನಿವೇಶಾಯ ಗುರುಣಾ ಕೃಷ್ಣಾತ್ರೇಯೇಣ ಭಾಷಿತಮ್ ||೬೮||
ದ್ರಾಕ್ಷಾಮಧುಕತೋಯಾಭ್ಯಾಂ ಸಿದ್ಧಂ ವಾ ಸಸಿತೋಪಲಂ ||
ಘೃತಂ ಪಿಬೇತ್ ತಥಾ ಕ್ಷೀರೇ ಗುಡೂಚೀ ಸ್ವರಸೇ ಶೃತಮ್ ||೬೯||
ಜೀವಕರ್ಷಭಕೌ ಮೇದಾ ವೃಕ್ಷ್ಯಪ್ರೋಕ್ತಾಂ ಶತಾವರೀಂ ||
ಮಧುಕಂ ಮಧುಪರ್ಣೀಂ ಚ ಕಾಕೋಲಿದ್ವಯಮೇವ ಚ ||೭೦||
ಮುದ್ಗಮಾಷಾಖ್ಯಪರ್ಣ್ಯೌ ಚ ದಶಮೂಲಂ ಪುನರ್ನವಾಮ್ ||
ಬಲಾಮೃತಾವಿದಾರೀಶ್ಚ ಸಾಶ್ವಗಂಧಾಶ್ಮಭೇದಕಾಃ ||೭೧||
ಕುರ್ಯಾತ್‌ಕಲ್ಕಂ ಕಷಾಯಂ ಚ ತಾಭ್ಯಾಂ ತೈಲಂ ಘೃತಂಪಚೇತ್ ||
ಲಾಭತಶ್ಚ ವಸಾಮಜ್ಜ ಧನ್ವಪ್ರತುದವೈಷ್ಕಿರಮ್ ||೭೨||

**ಚತುರ್ಗುಣೇನ ಪಯಸಾ ತತ್ಸಿದ್ಧಂ ವಾತಶೋಣಿತಮ್ ||**
**ಸರ್ವದೇಹಾಶ್ರಿತಂ ಹಂತಿ ವ್ಯಾಧೀನ್ ಘೋರಾಂಶ್ಚ ವಾತಜಾನ್ ||೭೩||**

**ಅರ್ಥ—** ಶ್ರಾವಣ್ಯಾದಿ ಘೃತ:— ಮುಂಡಿ ( ಗೋರಖಮುಂಡಿ) ಕ್ಷೀರ ಕಾಕೋಲಿ, ಜೀವಕ, ಋಷಭಕ ಇವುಗಳ ಕಲ್ಕದಿಂದ ನಾಲ್ಕುಪಾಲು ಪಾಲಿನಲ್ಲಿ ಸಿದ್ಧಮಾಡಿದ ಘೃತವು ವಾತರಕ್ತವನ್ನು ಕಳೆಯುವದು. ||೫೩|| ಬಲಾಘೃತ:— ಕಳ್ಳಂಗಡ್ಲೆ, ಮುದ್ರೆ, ಮೇದೆ, ನಸುಗುನ್ನೀಬೀಜ, ಶತಾವರಿ, ಕಾಕೋಲಿ ಕ್ಷೀರಕಾಕೋಲಿ, ರಾಸ್ನಾಬುದ್ಧಿ, ಇವುಗಳ ಕಲ್ಕಘೃತದ ¼ ಭಾಗ ( ೩೨ ತೊಲಿ ) ||೫೪|| ಹಾಲು ಘೃತ (೬೪ ತೊಲಿ) ದ ೪ ಪಾಲು ( ೫೧೨ ತೊಲಿ ) ಹಾಕಿ ಸಿದ್ಧಮಾಡಿದ ಘೃತವು ವಾತರಕ್ತ, ಹೃದ್ರೋಗ, ಪಾಂಡು ರೋಗ, ಇಸುಬು, ಕಾಮಣಿ, ಜ್ವರಗಳನ್ನು ಕಳೆಯುವದು. ||೫೫|| ಪಾರೂಷಕ ಘೃತ-ತ್ರಾಯಮಾಣ, ನೆಲನೆಲ್ಲಿ, ಕಾಕೋಲಿ, ಕ್ಷೀರಕಾಕೋಲಿ ಶತಾವರಿಗಳ ಕಲ್ಕ, ಕಶೇರುಕ ಕಷಾಯ ||೫೬|| ಪರೂಷಕ ( ಫಾಲಸ ) ದ ಕಷಾಯ, ಶಿವನ್ನೀ ಫಲದ ಕಷಾಯ, ದ್ರಾಕ್ಷದ ಕಷಾಯ, ಕಬ್ಬಿನ ರಸ, ಇವುಗಳನ್ನು ಪ್ರತ್ಯೇಕವಾಗಿ ಘೃತದ ಸಮಾನ, ನೆಲಗುಂಬಳದ ರಸ, ೧೨೮ ತೊಲಿ ಮತ್ತು ಹಾಲು ಘೃತದ ನಾಲ್ಕು ಪಾಲು ತಕ್ಕೊಂಡು ಘೃತವನ್ನು ಸಿದ್ಧಪಡಿಸಬೇಕು. ||೫೭|| ಇದಕ್ಕೆ **ಪಾರೂಷಕ ಘೃತ** ವೆಂಬ ಹೆಸರು. ಇದನ್ನು ವಾತರಕ್ತ, ಉರಃಕ್ಷತ, ಕ್ಷಯ, ವಿಸರ್ಪ, ಪಿತ್ತಜ್ವರ ಇವುಗಳಲ್ಲಿ ನಿತ್ಯವಾಗಿ ಪ್ರಯೋಗಿಸಬೇಕು. ||೫೮|| **ಜೀವನೀಯ ಘೃತ—** ದಶಮೂಲ, ಬಿಳೀಗಣಜಲಬೇರು, ಕೆಂಪು ಗಣಜಲಬೇರು, ಏರಂಡಮೂಲ, ಅಡವೀಹೆಸರು, ಮಹಾಮೇದೆ, ಅಡವೀ ಉದ್ದು, ||೫೯|| ಶತಾವರೀ, ಶಂಕಪುಷ್ಪಿ, ಬಡೀಸೋಪು, ರಾಸ್ನೆ, ಮುದ್ರೆ, ಕಳ್ಳಂಗಡ್ಲೆ, ಇವುಗಳನ್ನು ಪ್ರತ್ಯೇಕವಾಗಿ ೮ ತೊಲಿ ತೆಗೆದುಕೊಂಡು ೨ ದ್ರೋಣ ನೀರಿನಲ್ಲಿ ಕುದಿಸಬೇಕು. ||೬೦|| ¼ ಉಳಿಯಲು ಅದರಲ್ಲಿ ಹಾಲು, ನೆಲ್ಲೀ ಕಷಾಯ, ಕಬ್ಬಿನರಸ, ಆಡಿನ ಮಾಂಸರಸ, ಇವುಗಳನ್ನು ಪ್ರತ್ಯೇಕವಾಗಿ ೫೧೨ ತೊಲಿ ಹಾಕಿ, ೫೧೨ ತೊಲಿ ಘೃತವನ್ನು ಕೂಡಿಸಿ, ಮಂದಾಗ್ನಿಯಿಂದ ಕುದಿಸಲು ಇಟ್ಟು, ||೬೧|| ಅದರಲ್ಲಿ ಮೇದೆ, ಮಹಾಮೇದೆ, ಶಿವನ್ನೀಫಲ, ನೀಲಕಮಲ, ವಂಶಲೋಚನ,ಹಿಪ್ಪಲಿ, ದ್ರಾಕ್ಷೆ, ಕಮಲಬೀಜ, ಬಿಳೀಗಣಜಲಿ ಬೇರು ||೬೨|| ಶುಂಠಿ, ಕ್ಷೀರಕಾಕೋಲಿ. ಪದ್ಮಕಾಷ್ಠ, ನೆಲಗುಳ್ಳಬೇರು, ಹೆಬ್ಬಗುಳ್ಳಬೇರು. ಕಾಕೋಲಿ, ಶಿಂಗಾಡಿ, ಭದ್ರಮುಸ್ತಮಾಲ, ಸಿಕೋತಕ, (ಫಲ ವಿಶೇಷ) || ೬೩ || ಉತ್ತತ್ತಿ, ಅಕ್ರೋಡ, ಬದಾಮು, ಮುಂಜಾತ(ಕಂದವಿಶೇಷ)

ಅಭಿಷುಕ, (ಪಿಸ್ತೆ) ಇವುಗಳ ಕಲ್ಕವನ್ನು ೧೨೮ ತೊಲಿ ಹಾಕಿ, ೫೧೨ ತೊಲಿ ಘೃತವು ಸಿದ್ಧವಾಗಲು ಆರಿಸಿ, ಅದರಲ್ಲಿ ಜೇನು ಹಾಕಬೇಕು. || ೧೪ || ಸರಿಯಾಗಿ ಸಿದ್ಧವಾದದ್ದನ್ನು ಕಂಡುಕೊಂಡು, ಒಳ್ಳೆಯ ಸ್ಥಳದಲ್ಲಿಡಬೇಕು. ಕೆಡದಂತೆ ಅದನ್ನು ರಕ್ಷಿಸುತ್ತ, ದಿನಾಲು ೧ ತೊಲಿಯಷ್ಟನ್ನು ತಿನ್ನಬೇಕು. ||೧೫|| ಇದು ಪಾಂಡುರೋಗ, ಜ್ವರ, ಬಿಕ್ಕು, ಸ್ವರಭಂಗ, ಭಗಂದರ, ಪಾರ್ಶ್ವ ಶೂಲ, ಕ್ಷಯ, ಕೆಮ್ಮು, ಪ್ಲೀಹ, ವಾತರಕ್ತ, ||೧೬|| ಸರ್ವಾಂಗರೋಗ, ಏಕಾಂಗರೋಗ, ಮೂತ್ರಾಘಾತ, ಮೈಮೇಲೆ ಬಿದ್ದ ಮಡಿಕೆ, ಪಲಿತಗಳನ್ನು ನಾಶಮಾಡುವದು; ಬಲವರ್ಣ ಹೆಚ್ಚಿಸುವದು. ||೧೭|| ಶುಕ್ರವರ್ಧಕ ಮತ್ತು ಬಂಜೆಗೂ ಮಕ್ಕಳನ್ನು ಕೊಡುವಂತಹದಾಗಿರುವದು. ಈ ಜೀವನೀಯ ಘೃತವು ಗುರುಗಳಾದ ಕೃಷ್ಣಾತ್ರೇಯರಿಂದ ಅಗ್ನಿವೇಶರಿಗೆ ಹೇಳಲ್ಪಟ್ಟಿದೆ. ||೧೮|| ದ್ರಾಕ್ಷಾದಿ ಘೃತ- ದ್ರಾಕ್ಷೆ, ಜೇಷ್ಠಮಧು ಇವುಗಳ ಕಷಾಯದಲ್ಲಿ ಅದರ ೪ ಘೃತವನ್ನು ಸಿದ್ಧಮಾಡಿ, ಅದರಲ್ಲಿ ೪ ಸಕ್ಕರೆಯನ್ನು ಹಾಕಿ ತೆಗೆದು ಕೊಳ್ಳಬೇಕು. ಅದರಂತೆ ಹಾಲಿನಲ್ಲಿ ೪ ಘೃತವನ್ನು ಸಿದ್ಧಮಾಡಿ, ಸಕ್ಕರೆ ಹಾಕಿ ತೆಗೆದುಕೊಳ್ಳಬೇಕು. ಅಮೃತಬಳ್ಳಿಯ ರಸದಲ್ಲಿಯೂ ೪ ಘೃತವನ್ನು ಸಿದ್ಧಮಾಡಿ, ಸಕ್ಕರೆ ಹಾಕಿ ತೆಗೆದುಕೊಳ್ಳಬೇಕು. || ೧೯ || **ಜೀವಕಾದಿ ಯಮಕ—** ಜೀವಕ, ಋಷಭಕ ಮೇದೆ, ಋಷ್ಯಪ್ರೋಕ್ತಾ (ನಸುಗುನ್ನಿ ಬೀಜ ) ಶತಾವರಿ, ಜೇಷ್ಠಮಧು, ಮಧುಪರ್ಣಿ, ಕಾಕೋಲಿ, ಕ್ಷೀರಕಾಕೋಲಿ, ||೨೦|| ಅಡವಿಉದ್ದು, ಅಡವಿ ಹೆಸರು, ದಶಮೂಲ, ಬಿಳೇಗಣಜಲ ಬೇರು, ಕಳ್ಳಂಗಡ್ಲೆ, ಅಮೃತಬಳ್ಳಿ, ನೆಲಗುಂಬಳ, ಅಶ್ವಗಂಧೆ, ಪಾಷಾಣಭೇದ || ೨೧ || ಇವುಗಳ ಕಷಾಯವನ್ನು ಸ್ನೇಹದ ನಾಲ್ಕುಪಾಲು, ಇವುಗಳ ಕಲ್ಕವನ್ನು ಸ್ನೇಹದ ೪ ತೆಗೆದುಕೊಂಡು, ತೈಲಘೃತಗಳನ್ನು ಸಮವಾಗಿ ಹಾಕಿ ಕುದಿಸಲು ಇಡಬೇಕು. ಅದರಲ್ಲಿ ಜಾಂಗಲ (ವಾತ ಬಹಳಿದ್ದ ದೇಶ) ಪ್ರತುದ (ಕಸಿದು ತಿನ್ನುವ ಪ್ರಾಣಿ) ವಿಷ್ಕಿರ (ಹರವಿತಿನ್ನುವ ಪ್ರಾಣಿ) ಪ್ರಾಣಿಗಳ ನೆಣ ಮಜ್ಜಗಳಲ್ಲಿ ದೊರಕಿದ್ದನ್ನು || ೨೨ || ಮತ್ತು ಸ್ನೇಹದ ನಾಲ್ಕು ಪಾಲು ಹಾಲನ್ನು ಹಾಕಿ, ಸ್ನೇಹ ಸಿದ್ಧಮಾಡಬೇಕು. ಇದು ಎಲ್ಲ ದೇಹದಲ್ಲಿ ವ್ಯಾಪಿಸಿದ ವಾತರಕ್ತವನ್ನೂ ಭಯಂಕರವಾದ ವಾತರೋಗಗಳನ್ನೂ ಕಳೆಯುವದು. || ೨೩ ||

ಸ್ಥಿರಾದಿ ಯಮಕವನ್ನು ಹೇಳುತ್ತಾರೆ.

**ಸ್ಥಿರಾಂ ಶ್ವದಂಷ್ಟ್ರಾಂ ಬೃಹತೀಂ ಸಾರಿವಾಂ ಚ ಶತಾವರೀಮ್ ||**
**ಕಾಶ್ಮರೀಮಾತ್ಮಗುಪ್ತಾಂ ಚ ವೃಶ್ಚೀರಂ ದ್ವೇ ಬಲೇ ತಥಾ ||೨೪||**

ಏಷಾಂ ಕ್ವಾಥೇ ಚತುಃಕ್ಷೀರೇ ಪೃಥಕ್ ತೈಲಂ ಪೃಥಗ್ಘೃತಮ್ ॥
ಮೇದಾ ಶತಾವರೀ ಯಷ್ಟೀ ಜೀವಕರ್ಷಭಕೌ ಬಲಾ ॥೭೫॥

ಪಕ್ತ್ವಾ ಮಾತ್ರಾ ತತಃ ಕ್ಷೀರತ್ರಿಗುಣಾಧ್ಯರ್ಧಶರ್ಕರಾ ॥
ಖಜೇನ ಮಥಿತಾ ಪೇಯಾ ವಾತರಕ್ತೇ ತ್ರಿದೋಷಜೇ ॥೭೬॥

ಅರ್ಥ— ಒಂದೆಲಿ ಹೊನ್ನೆ, ನೆಗ್ಗಿಲು, ಹೆಬ್ಬಗುಳ್ಳ, ಅನಂತ ಮೂಲ, ಶತಾವರೀ, ಶಿವನ್ನೀಫಲ, ನಸುಗುನ್ನೀಬಿಜ, ಬಿಳೇಗಣಜಲಬೇರು, ಕಳ್ಳಂಗಡ್ಲೆ, ಮುದ್ರೆ ॥೭೪॥ ಇವುಗಳ ಕಷಾಯ, ತೈಲ, ಘೃತಗಳನ್ನು ಸಮವಾಗಿ ತಕ್ಕೊಂಡು, ಸ್ನೇಹದ ನಾಲ್ಕು ಪಾಲು ಹಾಲನ್ನು ಕೂಡಿ ಮೇದೆ, ಶತಾವರೀ, ಜೇಷ್ಠಮಧು, ಜಾವಕ, ಋಷಭಕ, ಕಳ್ಳಂಗಡ್ಲೆ, ಇವುಗಳ ಕಲ್ಕವನ್ನು ಹಾಕಿ ॥೭೫॥ ಸ್ನೇಹವನ್ನು ಸಿದ್ಧಮಾಡಿ, ತಕ್ಕ ಪ್ರಮಾಣದಿಂದ ತಕ್ಕೊಂಡು, ಅದರ ಮೂರು ಪಾಲುಹಾಲು, ೧॥ ಪಾಲು ಸಕ್ಕರೆ ಕೂಡಿಸಿ ಕಡಗೋಲನಿಂದ ಕಡೆದು ಕುಡಿಯಬೇಕು. ಇದು ತ್ರಿದೋಷಜ ವಾತರಕ್ತವನ್ನು ಕಳೆಯುವದು. ॥೭೬॥

ಬೇರೆ ಔಷಧಗಳನ್ನು ಹೇಳುತ್ತಾರೆ—

ತೈಲಂ ಪಯಃ ಶರ್ಕರಾಂ ಚ ಪಾಯಯೇದ್ವಾ ಸುಮೂರ್ಛಿತಾಮ್॥
ಸರ್ಪಿಸ್ತೈಲವಸಾಕ್ಷೌದ್ರೈರ್ಮಿಶ್ರಿತಂ ವಾ ಪಿಬೇತ್ ಪಯಃ ॥೭೭॥

ಅಂಶುಮತ್ಯಾ ಶೃತಃ ಪ್ರಸ್ಥಃ ಪಯಸಃ ಸಸಿತೋಪಲಃ ॥
ಪಾನೇ ಪ್ರಶಸ್ಯತೇ ತದ್ವತ್ ಪಿಪ್ಪಲೀನಾಗರೈಃ ಶೃತಃ ॥೭೮॥

ಬಲಾಶತಾವರೀರಾಸ್ನಾದಶಮೂಲೈಃಸಪೀಲುಭಿಃ ॥
ಶ್ಯಾಮೈರಂಡಸ್ಥಿರಾಭಿರ್ವಾವಾತಾರ್ತಿಘ್ನಂಶೃತಂಪಯಃ ॥೭೯॥

ಧಾರೋಷ್ಣಂ ಮೂತ್ರಯುಕ್ತಂ ವಾ ಕ್ಷೀರಂ ದೋಷಾನುಲೋಮನಂ॥
ಪಿಬೇದ್ವಾ ಸತ್ರಿವೃಚ್ಚೂರ್ಣಂ ಪಿತ್ತರಕ್ತೇಽನಿಲಾತ್ಮಕೇ ॥೮೦॥

ಕ್ಷೀರೇಣೈರಂಡತೈಲಂ ವಾ ಪ್ರಯೋಗೇಣ ನರಃ ಪಿಬೇತ್ ॥
ಬಹುದೋಷೋ ವಿರೇಕಾರ್ಥಂ ಜೀರ್ಣೇಕ್ಷೀರೌದನಾಶನಃ ॥೮೧॥

ಕಷಾಯಮಮೃತಾನಾಂ ವಾ ಘೃತಭೃಷ್ಟಂ ಪಿಬೇನ್ನರಃ ॥
ಕ್ಷೀರಾನ್ನಪಾನಂ ತ್ರಿವೃತಾಚೂರ್ಣಂ ದ್ರಾಕ್ಷಾರಸೇನ ವಾ ॥೮೨॥

ಕಾಶ್ಮರ್ಯಂ ತ್ರಿವೃತಾಂ ದ್ರಾಕ್ಷಾಂ ತ್ರಿಫಲಾಂ ಸಪರೂಷಕಾಮ್ ||
ಶೃತಾಂ ಪಿಬೇದ್ ವಿರೇಕಾರ್ಥೇ ಲವಣಕ್ಷೌದ್ರಸಂಯುತಾಮ್ ||೮೩||

ತ್ರಿಫಲಾಯಾಃ ಕಷಾಯಂ ವಾ ಪಿಬೇತ್ ಕ್ಷೌದ್ರೇಣ ಸಂಯುತಮ್ ||
ಧಾತ್ರೀ ಹರಿದ್ರಾಮುಸ್ತಾನಾಂ ಕಷಾಯಂ ವಾ ಕಫಾಧಿಕಃ ||೮೪||

ಯೋಗೈಶ್ಚ ಕಲ್ಪನಿರ್ದಿಷ್ಟೈರಸಕೃತ್ ತಂ ವಿರೇಚಯೇತ್ ||
ಮೃದುಭಿಃ ಸ್ನೇಹಸಂಯುಕ್ತೈರ್ಜ್ಞಾತ್ವಾ ವಾಯುಮನಾವೃತಮ್ ||೮೫||

ನಿರ್ಹರೇದ್ವಾ ಮಲಂ ತಸ್ಯ ಸಘೃತೈಃ ಕ್ಷೀರಬಸ್ತಿಭಿಃ ||
ನ ಹಿ ಬಸ್ತಿಸಮಂ ಕಿಂಚಿತ್ವಾತರಕ್ತಚಿಕಿತ್ಸಿತಮ್ ||೮೬||

ಬಸ್ತಿವಙ್ಕ್ಷಣಪಾರ್ಶ್ವೋರುಪರ್ವಾಸ್ಥಿಜಠರಾರ್ತಿಷು ||
ಉದಾವರ್ತೇ ಚ ಶಸ್ಯಂತೇ ನಿರೂಹಾ ಸಾನುವಾಸನಾಃ ||೮೭||

ದದ್ಯಾಚ್ಚೈವಮಾನಿ ತೈಲಾನಿ ಬಸ್ತಿಕರ್ಮಣಿ ಬುದ್ಧಿಮಾನ್ ||
ನಸ್ಯಾಂಭ್ಯಂಜನಸೇಕೇ ಚ ದಾಹಶೂಲಹರಾಣಿ ಚ ||೮೮||

**ಅರ್ಥ—** ತೈಲ, ಹಾಲು, ಸಕ್ಕರೆಗಳನ್ನು ಚನ್ನಾಗಿ ಕೂಡಿಸಿ ಕುಡಿಸ ಬೇಕು. ಅಥವಾ ತುಪ್ಪ, ಎಣ್ಣೆ, ನೆಣ, ಜೇನುಗಳನ್ನು ಕೂಡಿಸಿದ ಹಾಲನ್ನು ಕುಡಿಯಬೇಕು ||೭೭|| ಒಂದೆಲೆ ಹೊನ್ನೆ ೩೨ ತೊಲೆ, ನೀರು ೫೧೨ ತೊಲೆ, ಹಾಲು ೧೨೮ ತೊಲೆ, ಹಾಕಿ ಸಿದ್ಧಮಾಡಿದ ಹಾಲನ್ನು ಸಕ್ಕರೆ ಹಾಕಿ ಕುಡಿಯಬೇಕು. ಅದರಂತೆ ಹಿಪ್ಪಲಿ, ಶುಂಠಿಗಳಿಂದ ಮಾಡಿದ ಹಾಲನ್ನು ಕೊಡಬೇಕು. ||೭೮|| ಬಲಾದಿ ಕ್ಷೀರ:— ಕಳ್ಳಂಗಡ್ಲೆ, ಶತಾವರೀ, ರಾಸ್ನೆ, ದಶಮೂಲ, ಪೀಲು, (ಗೋವಿನ ಬೆಣ್ಣೆ) ಇವುಗಳ ಕಲ್ಕ ಹಾಲಿನ ೪ನೇ ಪಾಲು, ಹಾಲು ೧ ಪಾಲು, ನೀರು ಅದರ ೪ ಪಾಲು ಹಾಕಿ, ಅಥವಾ ಕರೆತಿಗಡಿ, ಏರಂಡಮೂಲ, ಒಂದೆಲೆ ಹೊನ್ನೆ ಇವುಗಳ ಕಲ್ಕ ಹಾಲಿನ ¼ ಪಾಲು, ಹಾಲು ೧ ಪಾಲು, ನೀರು ನಾಲ್ಕು ಪಾಲು ಹಾಕಿ ಕುದಿಸಿದ ಹಾಲು ವಾತರಕ್ತದ ಶೂಲವನ್ನು ಕಳೆಯುವದು. ||೭೯|| ಗೋಮೂತ್ರ ಹಾಕಿದ ಧಾರೋಷ್ಣ ಹಾಲು, ಅಥವಾ ನಿಶೋತ್ತರ ಚೂರ್ಣ ಹಾಕಿದ ಧಾರೋಷ್ಣ ಹಾಲು ಪಿತ್ತಾಧಿಕ, ಅಥವಾ ರಕ್ತಾಧಿಕ ಅಥವಾ ವಾತಿಕ ವಾತರಕ್ತದಲ್ಲಿ ಕುಡಿಯಬೇಕು. ಅದು ದೋಷವನ್ನು ಅನುಲೋಮನ ಮಾಡುವದು. ||೮೦|| ದೋಷವು ಬಹಳಿದ್ದರೆ ವಿರೇಚನಕ್ಕಾಗಿ ಔಡಲ ಎಣ್ಣೆಯನ್ನು ಹಾಲಿನೊಡನೆ ನಿತ್ಯವಾಗಿ

ಕುಡಿಯಬೇಕು. ಅದು ಜೀರ್ಣವಾಗಲು ಹಾಲು ಅನ್ನ ತಿನ್ನಬೇಕು. ||೮೧|| ಅಮೃತಬಳ್ಳಿಯ ಕಷಾಯವನ್ನು ತುಪ್ಪದಲ್ಲಿ ಕರಿದು, ಅದನ್ನು ಕುಡಿದು, ಮೇಲೆ ಹಾಲು ಕುಡಿಯಬೇಕು. ಅಥವಾ ನಿಶೋತ್ತರ ಚೂರ್ಣಹಾಕಿ, ದ್ರಾಕ್ಷಾರಸವನ್ನು ಕುಡಿಯಬೇಕು. ಅಂದರೆ ವಿರೇಚನವಾಗುವದು. ||೮೨|| ಶಿವನ್ನೀಫಲ, ನಿಶೋತ್ತರ, ದ್ರಾಕ್ಷೆ, ತ್ರಿಫಳೆ, ಪರೂಷಕ (ದಡಸಲಹಣ್ಣು), ಗಳ ಕಷಾಯವನ್ನು ಮಾಡಿ, ಅದರಲ್ಲಿ ಸೈಂಧವ, ಜೇನುತುಪ್ಪ ಹಾಕಿ, ತಕ್ಕೊಳ್ಳಬೇಕು. ಅಂದರೆ ವಿರೇಚನವಾಗುವದು. ||೮೩|| ತ್ರಿಫಳೆಯ ಕಷಾಯವನ್ನು ಜೇನು ಹಾಕಿ ಕುಡಿಯಬೇಕು. ರೋಗಿಯಲ್ಲಿ ಕಫವು ಹೆಚ್ಚಿದ್ದರೆ, ನೆಲ್ಲಿ—ಅರಿಷಿಣ—ಜೇಕುಗಳ ಕಷಾಯವನ್ನು ಜೇನುಹಾಕಿ ಕುಡಿಯಬೇಕು ||೮೪|| ವಾಯುವು ಆವೃತವಾಗದೇ ಇದ್ದರೆ, ಕಲ್ಪಸ್ಥಾನದಲ್ಲಿ ಹೇಳಿದ ಮೃದುವಾದ ಯೋಗಗಳಲ್ಲಿ ಸ್ನೇಹಹಾಕಿ ಕುಡಿಸಿ ವಿರೇಚನಮಾಡಿಸಬೇಕು. ||೮೫|| ಅಥವಾ ತುಪ್ಪಹಾಕಿದ ಕ್ಷೀರಬಸ್ತಿಗಳಿಂದ ಅವನ ಮಲವನ್ನು ತೆಗೆಯಬೇಕು. ಯಾಕಂದರೆ, ಬಸ್ತಿಯಂಥ ವಾತರಕ್ತದ ಚಿಕಿತ್ಸೆಯು ಬೇರೆ ಯಾವದೂ ಇರುವದಿಲ್ಲ. ||೮೬|| ಬಸ್ತಿ, ಗೆಜ್ಜಿ, ಪಾರ್ಶ್ವ, ತೊಡೆ, ಸಂಧಿ, ಅಸ್ಥಿ, ಹೊಟ್ಟೆಗಳಲ್ಲಿಯ ಶೂಲಕ್ಕೂ ಉದಾವರ್ತಕ್ಕೂ ಅನುವಾಸನ ನಿರೂಹಬಸ್ತಿಗಳು ಉತ್ಕೃಷ್ಟವಾಗಿವೆ. ||೮೭|| (ಮುಂದೆ ಹೇಳಿದ) ಈ ತೈಲಗಳನ್ನು ಬಸ್ತಿಯಲ್ಲಿಯೂ ನಸ್ಯ, ಅಭ್ಯಂಗ, ಪರಿಷೇಕಗಳಲ್ಲಿಯೂ ಉಪಯೋಗಿಸಬೇಕು. ಅವು ದಾಹ, ಶೂಲಗಳನ್ನು ಕಳೆಯುವವು. ||೮೮||

ತೈಲಗಳನ್ನು ಹೇಳಹೊರಟು ಮೊದಲು ಮಧುಪರ್ಣ್ಯಾದಿ ತೈಲವನ್ನು ಹೇಳುತ್ತಾರೆ—

**ಮಧುಪರ್ಣ್ಯಾಃ ಪಲಶತಂ ಕಷಾಯೇ ಪಾದಶೇಷಿತೇ ||**
**ತೈಲಾಢಕಂ ಸಮಕ್ಷೀರಂ ಪಚೇತ್ಕಲ್ಕೈಃ ಪಲೋನ್ಮಿತೈಃ ||೮೯||**
**ಶತಪುಷ್ಪಾವರೀ ಮೂರ್ವಾಪಯಸ್ಯಾಗುರುಚಂದನೈಃ ||**
**ಸ್ಥಿರಾಹಂಸಪದೀ ಮಾಂಸೀ ದ್ವಿಮೇದಾ ಮಧುಪರ್ಣಿಭಿಃ ||೯೦||**
**ಕಾಕೋಲಿ ಕ್ಷೀರಕಾಕೋಲೀ ತಾಮಲಕ್ಯೃದ್ಧಿ ಪದ್ಮಕೈಃ ||**
**ಜೀವಕರ್ಷಭ ಜೀವಂತೀ ತ್ವಕ್‌ಪತ್ರನಖಬಾಲಕೈಃ ||೯೧||**
**ಪ್ರಪೌಂಡರೀಕಮಂಜಿಷ್ಠಾ ಸಾರಿವೈಂದ್ರೀವಿತುನ್ನಕೈಃ ||**
**ಚತುಃಪ್ರಯೋಗಾತ್ ತದ್ಧಂತಿ ತೈಲಂ ಮಾರುತಶೋಣಿತಮ್ ||೯೨||**

**ಸೋಪದ್ರವಂ ಸಾಂಗಶೂಲಂ ಸರ್ವಗಾತ್ರಾನುಗಂ ತಥಾ ||**
**ವಾತಾಸೃಕ್ ಪಿತ್ತದಾಹಾರ್ತಿ ಜ್ವರಘ್ನಂ ಬಲವರ್ಣಕೃತ್**

**ಅರ್ಥ—** ಅಮೃತಬಳ್ಳಿ ೪೦೦ ತೊಲೆ ತಕ್ಕೊಂಡು, ಎರಡು ದ್ರೋಣ ಸೇರು ಹಾಕಿ ಕುದಿಸಿ ನಾಲ್ಕನೇ ಪಾಲು ಉಳಿಯಲು ಆ ಕಷಾಯದಲ್ಲಿ ಅಷ್ಟೇ ಹಾಲನ್ನು ಮತ್ತು ೫೧೨ ತೊಲೆ ತೈಲವನ್ನು ಹಾಕಿ ಕುದಿಸಲು ಇಟ್ಟು, ಅದರಲ್ಲಿ ||೮೯|| ಬಡೀಸೋಪು, ಶತಾವರಿ, ಹಾಲುಗೊರಟಿಗಿ, ಹಾಲು, ನೆಲಗುಂಬಳ, ಅಗುರು, ಚಂದನ, ಒಂದೆಲೆಹೊನ್ನೆ, ಹಂಸಪದೀ, ಜಟಾಮಾಂಸೀ, ಮೇದಾ, ಮಹಾಮೇದಾ, ಅಮೃತಬಳ್ಳಿ, ||೯೦|| ಕಾಕೋಲಿ, ಕ್ಷೀರಕಾಕೋಲಿ ನೆಲನೆಲ್ಲಿ, ಋದ್ಧಿ, ಪದ್ಮಕಾಷ್ಠ, ಜೀವಕ, ಋಷಭಕ, ಜೀವಂತಿ, ದಾಲಚಿನ್ನಿ, ತಮಾಲಪತ್ರ, ವ್ಯಾಘ್ರನಖ, ಬಾಳದಬೇರು, ||೯೧|| ಪುಂಡರೀಕಕಾಷ್ಠ ಮಂಜಿಷ್ಠೆ, ಅನಂತಮೂಲ, ಕಾಡಕವಡಿ ಬೇರು, ಹವೀಜ, ಇವುಗಳ ಕಲ್ಕವನ್ನು ೪-೪ ತೊಲೆ ಹಾಕಿ ತೈಲವನ್ನು ಸಿದ್ಧಮಾಡಬೇಕು. ಇದನ್ನು ನಸ್ಯ, ಅಭ್ಯಂಗ, ಪಾನ, ಬಸ್ತಿಗಳಲ್ಲಿ ಉಪಯೋಗಿಸಿದರೆ ಇದು ||೯೨|| ಎಲ್ಲ ಶರೀರವನ್ನು ವ್ಯಾಪಿಸಿದ, ಉಪದ್ರವಯುಕ್ತ, ಶೂಲಯುಕ್ತ, ವಾತರಕ್ತವನ್ನು ಕಳೆಯುವದು. ವಾತ-ರಕ್ತ-ಪಿತ್ತಗಳ ದಾಹ, ಶೂಲ, ಜ್ವರಗಳನ್ನು ಕಳೆಯುವದು. ಬಲವರ್ಣಗಳನ್ನು ಹೆಚ್ಚಿಸುವದು. ||೯೩||

ಸುಕುಮಾರಕ ತೈಲವನ್ನು ಹೇಳುತ್ತಾರೆ—

**ಮಧುಕಸ್ಯ ಶತಂ ದ್ರಾಕ್ಷಾಖರ್ಜೂರಾಣಿ ಪರೂಷಕಮ್ ||**
**ಮಧುಕೌದನಪರ್ಣ್ಯೌ ಚ ಪ್ರಸ್ಥಂ ಮುಂಜಾತಕಸ್ಯ ಚ || ೯೪ ||**

**ಕಾಶ್ಮರ್ಯಾಢಕಮಿತ್ಯೇತಚ್ಚತುರ್ದ್ರೋಣೇ ಪಚೇದಪಾಮ್ ||**
**ಶೇಷೇಽಷ್ಟಭಾಗೇ ಪೂತೇ ಚ ತಸ್ಮಿಂಸ್ತೈಲಾಢಕಂ ಪಚೇತ್ || ೯೫ ||**

**ತಥಾಮಲಕಕಾಶ್ಮರ್ಯವಿದಾರೀಕ್ಷುರಸೈಃ ಸಮೈಃ ||**
**ಚತುರ್ದ್ರೋಣೇನ ಪಯಸಾ ಕಲ್ಕಂ ದತ್ತ್ವಾ ಪಲೋನ್ಮಿತಮ್ || ೯೬ ||**

**ಕದಂಬಾಮಲಕಾಕ್ಷೋಡ ಪದ್ಮಬೀಜಕಶೇರುಕಮ್ ||**
**ಶೃಂಗಾಟಕಂ ಶೃಂಗವೇರಂ ಲವಣಂ ಪಿಪ್ಪಲೀಂ ಸಿತಾಮ್ || ೯೭ ||**

**ಜೀವನೀಯಂ ಚ ಸಂಸಿದ್ಧಂ ಕ್ಷೌದ್ರಪ್ರಸ್ಥೇನ ಸಂಸೃಜೇತ್ ||**
**ನಸ್ಯಾಭ್ಯಂಜನಪಾನೇಷು ಬಸ್ತೌ ಚಾಪಿ ನಿಯೋಜಯೇತ್ || ೯೮ ||**

**ವಾತವ್ಯಾಧಿಷು ಸರ್ವೇಷು ಮನ್ಯಾಸ್ತಂಭೇ ಹನುಗ್ರಹೇ ||**
**ಸರ್ವಾಂಗೈಕಾಂಗವಾತೇ ಚ ಕ್ಷತಕ್ಷೀಣೇ ಕ್ಷತಜ್ವರೇ || ೯೯ ||**

**ಸುಕುಮಾರಕಮಿತ್ಯೇತದ್ವಾತಾಸ್ರಾಮಯನಾಶನಮ್ ||**
**ಸ್ವರವರ್ಣಕರಂ ತೈಲಮಾರೋಗ್ಯಬಲಪುಷ್ಟಿದಮ್ || ೧೦೦ ||**

**ಅರ್ಥ—** ಜೇಷ್ಠಮಧು ೪೦೦ ತೊಲಿ, ದ್ರಾಕ್ಷಿ, ಉತ್ತತ್ತಿ, ಫಾಲಸಾ, ಇಪ್ಪೀ ಹೂವು, ಓವನಪಾಕೀ ( ನೀಲ ಮುಳ್ಳಜಾಜೀ ) ಮತ್ತು ಮುಂಜಾತ ( ಕಂದವಿಶೇಷ ) ಇವುಗಳನ್ನು ಪ್ರತ್ಯೇಕವಾಗಿ ೬೪ ತೊಲಿ, ||೯೪|| ಶಿವನ್ನೀ ಫಲ ೨೫೬ ತೊಲಿ ತಕ್ಕೊಂಡು ೮ ದ್ರೋಣ ನೀರಿನಲ್ಲಿ ಕುದಿಸಬೇಕು. ೧/೪ ಉಳಿಯಲು ಸೋಸಿ, ಆದರಲ್ಲಿ ೫೧೨ ತೊಲಿ ತೈಲವನ್ನು ಹಾಕಿ ಕುದಿಯಲು ಇಡಬೇಕು. ||೯೫|| ನೆಲ್ಲೀ, ಶಿವನ್ನೀಫಲ, ನೆಲಗುಂಬಳ, ಕಬ್ಬಿನ ರಸಗಳನ್ನೂ ಪ್ರತ್ಯೇಕವಾಗಿ ತೈಲದಷ್ಟು ಹಾಕಿ, ೮ ದ್ರೋಣ ಹಾಲು ಕೂಡಿಸಿ, ಆದರಲ್ಲಿ ||೯೬|| ಕದಂಬ (ಈಚಲು) ನೆಲ್ಲಿ, ಅಕ್ರೋಡ, ಕಮಲದ ಬೀಜ, ಕೋತೀಗಡ್ಡೆ ಸಿಂಗಾಡೆ, ಶುಂಠಿ, ಸೈಂಧವ, ಹಿಪ್ಪಲಿ, ಸಕ್ಕರೆ ||೯೭|| ಜೀವನೀಯ ಗಣ ಕಲ್ಕವನ್ನು ೪-೪ ತೊಲಿ ಹಾಕಿ ಕುದಿಸಿ, ತೈಲವು ಸಿದ್ಧವಾಗಲು, ೧೨೮ ತೊಲಿ ಜೇನನ್ನು ಕೂಡಿಸಬೇಕು. ಅದನ್ನು ನಸ್ಯ, ಅಭ್ಯಂಗ, ಪಾನ, ಬಸ್ತಿಗಳಿಗಾಗಿ, ||೯೮|| ಎಲ್ಲ ವಾತವ್ಯಾಧಿಗಳಲ್ಲಿ, ಮನ್ಯಾಸ್ತಂಭ. ಹನುಗ್ರಹ, ಸರ್ವಾಂಗವಾತ ಏಕಾಂಗವಾತ, ಕ್ಷತದಿಂದುಂಟಾದ ಕ್ಷಯಜ್ವರಗಳಲ್ಲಿ ಉಪಯೋಗಿಸಬೇಕು. ||೯೯|| ಈ ಸುಕುಮಾರಕ ತೈಲವು ವಾತರಕ್ತವನ್ನು ಕಳೆಯುವದು. ಸ್ವರ ವರ್ಣಗಳನ್ನುಂಟುಮಾಡುವದು. ಆರೋಗ್ಯ, ಬಲ, ಪುಷ್ಟಿಗಳನ್ನು ಕೊಡುವದು. ||೧೦೦||

ಅಮೃತ ತೈಲವನ್ನು ಹೇಳುತ್ತಾರೆ—

**ಗುಡೂಚೀಂ ಮಧುಕಂ ಹ್ರಸ್ವಾಂ ಪಂಚಮೂಲೀಂ ಪುನರ್ನವಾಮ್ ||**
**ರಾಸ್ನಾಮೇರಂಡಮೂಲಂ ಚ ಜೀವನೀಯಾನಿ ಲಾಭತಃ || ೧೦೧ ||**

**ಪಲಾನಾಂ ಶತಕೈರ್ಭಾಗೈರ್ಬಲಾಪಂಚಶತಂ ತಥಾ ||**
**ಕೋಲಬಿಲ್ವಯವಾನ್ ಮಾಷಾನ್ ಕುಲತ್ಥಾಂಶ್ಚಾಢಕೋನ್ಮಿತಾನ್ || ೧೦೨ ||**

ಕಾಶ್ಮರ್ಯಾಣಾಂ ಸುಶುಷ್ಕಾಣಾಂ ದ್ರೋಣಂ ದ್ರೋಣಶತೇಽಂಭಸಿ ||
ಸಾಧಯೇಜ್ಜರ್ಜರಂ ಧೌತಂ ಚತುರ್ದ್ರೋಣಂ ಚ ಶೇಷಯೇತ್ ||೧೦೩||
ತೈಲದ್ರೋಣಂ ಪಚೇತ್ ತೇನ ದತ್ವಾ ಪಂಚಗುಣಂ ಪಯಃ ||
ಪಿಷ್ಟ್ವಾ ತ್ರಿಫಲಿಕಾಂಶ್ಚೈವ ಚಂದನೋಶೀರಕೇಶರಾನ್ || ೧೦೪ ||
ಪತ್ರೈಲಾಗುರುಕುಷ್ಠಾನಿ ತಗರಂ ಮಧುಯಷ್ಟಿಕಾಮ್ ||
ಮಂಜಿಷ್ಠಾಷ್ಟಪಲಂ ಚೈವ ತತ್ಸಿದ್ಧಂ ಸಾರ್ವಯೌಗಿಕಮ್ || ೧೦೫ ||
ಯೋನಿದೋಷಮಪಸ್ಮಾರಮುನ್ಮಾದಂ ವಿಷಮಜ್ವರಮ್ ||
ಹನ್ಯಾತ್ ಪುಂಸವನಂ ಚೈತತ್ ತೈಲಾಗ್ರ್ಯಮಮೃತಾಹ್ವಯಮ್ || ೧೦೬ ||

ಅರ್ಥ— ಅಮೃತಬಳ್ಳಿ, ಜೇಷ್ಠಮಧು, ಹ್ರಸ್ವಪಂಚಮೂಲ, ಬಿಳೀ ಗಣಜಲಬೇರು, ರಾಸ್ನಾ, ಔಡಲಬೇರು, ಸಿಕ್ಕಷ್ಟು ಜೀವನೀಯ ದ್ರವ್ಯ ಇವುಗಳನ್ನು ||೧೦೧|| ಪ್ರತ್ಯೇಕವಾಗಿ ೪೦೦ ತೊಲಿ, ಕಳ್ಳಂಗಡ್ಲೆ ೨೦೦೦ ತೊಲಿ, ಬೋರಿ-ಬಿಲ್ವ-ಜವೆ-ಉಪ್ಪು-ಹುರುಳಿ ಇವುಗಳನ್ನು ಪ್ರತ್ಯೇಕವಾಗಿ ೨೫೬ ತೊಲಿ ||೧೦೨|| ಒಣಗಿದ ಶಿವನ್ನೀಫಲ ೧೦೨೪ ತೊಲಿ, ತಕ್ಕೊಂಡು, ಅದನ್ನು ತೊಳೆದು ಜಜ್ಜಿ, ೨೦೦ ದ್ರೋಣ ನೀರಿನಲ್ಲಿ ಕುದಿಸಿ, ೮ ದ್ರೋಣ ಉಳಿಸ ಬೇಕು. |೧೦೩|| ಅದರಲ್ಲಿ ೧೦ ದ್ರೋಣ ಹಾಲು, ೨ ದ್ರೋಣ ಎಂಣೆ ಮತ್ತು ಚಂದನ ಬಾಳದ ಬೇರು, ನಾಗಕೇಶರ ||೧೦೪|| ತವಾಲ ಪತ್ರ, ಯಾಲಕ್ಕಿ, ಅಗರು, ಕೋಷ್ಟ, ತಗರು, ಜೇಷ್ಠಮಧು, ಇವುಗಳ ಕಲ್ಕವನ್ನು ಪ್ರತ್ಯೇಕವಾಗಿ ೧೨ ತೊಲಿ, ಮಂಜಿಷ್ಠಾ ಕಲ್ಕ ೩೨ ತೊಲಿ ಹಾಕಿ ಕುದಿಸಿ ತೈಲವನ್ನು ಸಿದ್ಧ ಮಾಡಿ, ಪಾನ. ಅಭ್ಯಂಗ, ನಸ್ಯ, ಬಸ್ತಿಗಳಲ್ಲಿ ಉಪಯೋಗಿಸಬೇಕು. ||೧೦೫|| ಅಮೃತಧ್ಯವೆಂಬ ತೈಲಶ್ರೇಷ್ಠವು ವಾತರಕ್ತ, ಕ್ಷತಕ್ಷಯ, ಶುಕ್ರಕ್ಷಯ, ಮತ್ತು ಭಾರದಿಂದ ಪೀಡಿತ ರೋಗಿಗಳಿಗೂ ನಡಗೋಣ, ಆಕ್ಷೇಪ, ಭಂಗ, ಈ ರೋಗಿಗಳಿಗೂ ಸರ್ವಾಂಗ ಏಕಾಂಗ ರೋಗಿಗಳಿಗೂ ಹಿತಕರವಾಗಿದೆ. ಯೋನಿದೋಷ, ಅಪಸ್ಮಾರ, ಉನ್ಮಾದ, ವಿಷಮಜ್ವರಗಳನ್ನು ಕಳೆಯುವದು; ಗಂಡುಮಕ್ಕಳನ್ನು ಕೊಡುವದು. ||೧೦೬||

ಮಹಾಪದ್ಮತೈಲವನ್ನು ಹೇಳುತ್ತಾರೆ—

ಪದ್ಮನೇತಸಯಷ್ಟ್ಯಾಹ್ವಫೇನಿಲಾಪದ್ಮಕೋತ್ಪಲೈಃ ||
ಪೃಥಕ್ ಪಲೈರ್ವರ್ಭಬಲಾಕಿಂಶುಕಚಂದನೈಃ || ೧೦೭ ||

**ಜಲೇ ಶೃತೈಃ ಪಚೇತ್ತೈಲಪ್ರಸ್ಥಂ ಸೌವೀರಸಮ್ಮಿತಮ್ ||**
**ಲೋಧ್ರಕಾಲೀಯಕೋಶೀರಜೀವಕರ್ಷಭಕೇಶರೈಃ || ೧೦೮ ||**
**ಮದಯಂತೀಲತಾಪತ್ರಪದ್ಮಕೇಶರಪದ್ಮಕೈಃ ||**
**ಪ್ರಪೌಂಡರೀಕಕಾಶ್ಮರ್ಯಮಾಂಸೀಮೇದಾಪ್ರಿಯಂಗುಭಿಃ || ೧೦೯ ||**
**ಕುಂಕುಮಸ್ಯ ಪಲಾರ್ಧೇನ ಮಂಜಿಷ್ಠಾಯಾಃ ಪಲೇನ ಚ ||**
**ಮಹಾಪದ್ಮಮಿದಂ ತೈಲಂ ವಾತಾಸೃಕ್‌ಜ್ವರನಾಶನಮ್ || ೧೧೦ ||**

**ಅರ್ಥ—** ಕಮಲಪುಷ್ಪ, ಅಶೋಕ, ಜೇಷ್ಠಮಧು, ಫೇನಿಲ (ಅಂಟ ವಾಳಕಾಯಿ) ಪದ್ಮಕಾಷ್ಠ, ನೀಲಕಮಲ, ದರ್ಭ, ಮೂಲ, ಕಳ್ಳಂಗಡ್ಲೆ, ಮುತ್ತಲು, ಚಂದನ, ಇವುಗಳನ್ನು ಪ್ರತ್ಯೇಕವಾಗಿ ೨೦ ತೊಲಿ ತಕ್ಕೊಂಡು ||೧೦೭|| ೮ ಪಾಲು ನೀರು ಹಾಕಿ ಕುದಿಸಿ, ನಾಲ್ಕನೇ ಪಾಲು ಉಳಿಯಲು ಗಂಜಿಯನ್ನು ೧೨೮ ತೊಲಿ, ತೈಲವನ್ನು ೧೨೮ ತೊಲಿ, ಮತ್ತು ಲೋಧ್ರ ಕಾಲೀಯಕಾಷ್ಠ–ಬಾಳದಬೇರು–ಜೀವಕ–ಋಷಭಕ–ನಾಗಕೇಶರ ||೧೦೮|| ಮದಯಂತಿ, ಲತಾ (ಮಲ್ಲಿಗೆ ಲತಾಕಸ್ತೂರಿ) ತಮಾಲಪತ್ರ, ಕಮಲಕೇಶರ, ಪದ್ಮಕಾಷ್ಠ, ಪುಂಡರೀಕಕಮಲ, ಶಿವನ್ನೀಫಲ, ಜಟಾಮಾಂಸಿ, ಮೇದೈ, ಪ್ರಿಯಂಗು ||೧೦೯|| ಕೇಶರ ಇವುಗಳ ಕಲ್ಕವನ್ನು ಪ್ರತ್ಯೇಕ ೨—೨ ತೊಲಿ ಮಂಜಿಷ್ಠೆಯ ಕಲ್ಕವನ್ನು ೪ ತೊಲಿ ಹಾಕಿ ಸಿದ್ಧಮಾಡಿದ ಮಹಾಪದ್ಮತೈಲವು ವಾತರಕ್ತ ಜ್ವರಗಳನ್ನು ಕಳೆಯುವದು ||೧೧೦||

ಖುಡ್ಡಾಕ ಪದ್ಮತೈಲವನ್ನು ಹೇಳುತ್ತಾರೆ—

**ಪದ್ಮಕೋಶೀರಯಷ್ಟ್ಯಾಹ್ವರಜನೀಕ್ವಾಥಸಾಧಿತಮ್ ||**
**ಸ್ಯಾತ್ ಪಿಷ್ಟೈಃಸರ್ಜಮಂಜಿಷ್ಠಾವೀರಾಕಾಕೋಲಿಚಂದನೈಃ ||೧೧೧||**
**ಖುಡ್ಡಾಕಪದ್ಮಕಮಿದಂ ತೈಲಂ ವಾತಾಸ್ರದಾಹನುತ್ ||**
**ಆತ್ರೇಯೇಣಾಗ್ನಿವೇಶಾಯ ಭಾಷಿತಂ ಹಿತಕಾಮ್ಯಯಾ ||೧೧೨||**

**ಅರ್ಥ—** ಕಮಲದ ಹೂವು, ಬಾಳದಬೇರು, ಜೇಷ್ಠಮಧು, ಅರಿಷಿಣ, ಇವುಗಳ ಕಷಾಯದಲ್ಲಿ ರಾಳ, ಮಂಜಿಷ್ಠೆ, ಕ್ಷೀರಕಾಕೋಲಿ, ಕಾಕೋಲಿ ಚಂದನಗಳ ಕಲ್ಕವನ್ನು ಹಾಕಿ ಸಿದ್ಧಮಾಡಿದ ||೧೧೧|| ಖುಡ್ಡಾಕಪದ್ಮಕವೆಂಬ ತೈಲವು ವಾತರಕ್ತದ ದಾಹವನ್ನು ಕಳೆಯುವದು. ಈ ತೈಲವನ್ನು ಜನರ ಕಲ್ಯಾಣಕ್ಕಾಗಿ ಆತ್ರೇಯ ಋಷಿಗಳು ಅಗ್ನಿವೇಶರಿಗೆ ಹೇಳಿದ್ದಾರೆ. ||೧೧೨||

ಶತಪಾಕಮಧುಪರ್ಣ್ಯಾತೈಲವನ್ನು ಹೇಳುತ್ತಾರೆ—

**ಮಧುಪರ್ಣ್ಯಾಃ ಪಲಂ ಪಿಷ್ಟ್ವಾ ತೈಲಪ್ರಸ್ಥಂ ಚತುರ್ಗುಣೇ ||**
**ಕ್ಷೀರೇ ಸಾಧ್ಯಂ ಶತಕೃತ್ವಸ್ತದೇವಂ ಮಧುಕಾಚ್ಛತೇ ||೧೧೩||**

**ಸಿದ್ಧಂ ದೇಯಂ ವಿಷೋನ್ಮಾದವಾತಾಸ್ರಶ್ವಾಸಕಾಸನುತ್ ||**
**ಹೃತ್ಪಾಂಡುರೋಗವೀಸರ್ಪಕಾಮಲಾದಾಹನಾಶನಮ್ ||೧೧೪||**

**ಅರ್ಥ—** ೧೬ ತೊಲಿ ತೈಲವನ್ನು ೪ ತೊಲಿ ಅಮೃತಬಳ್ಳಿಯ ಕಲ್ಕವನ್ನು ಹಾಕಿದ ೫೧೬ ತೊಲಿ ಹಾಲಿನಲ್ಲಿ ಕುದಿಸಬೇಕು. ಇದರಂತೆ ಹಾಲು ಮತ್ತು ಅಮೃತಬಳ್ಳಿಯ ಕಲ್ಕದಲ್ಲಿ ೧೦೦ ಸಲ ಸಿದ್ಧಮಾಡಿ, ೪೦೦ ತೊಲಿ ಜೇಷ್ಠಮಧುವನ್ನು ಕಷಾಯದಲ್ಲಿ ಪುನಃ ಹಾಕಿ ||೧೧೩|| ಸಿದ್ಧಮಾಡಿ ಕೊಡಬೇಕು. ಅದು ವಿಷ, ಉನ್ಮಾದ, ವಾತರಕ್ತ, ಕೆಮ್ಮು, ದಮ್ಮು, ಹೃದ್ರೋಗ, ಪಾಂಡುರೋಗ, ಇಸಬು, ಕಾಮಿಣಿ, ದಾಹಗಳನ್ನು ಕಳೆಯು ವ ು. ||೧೧೪||

ಸಹಸ್ರಪಾಕ, ಶತಪಾಕ ಬಲಾತೈಲವನ್ನು ಹೇಳುತ್ತಾರೆ—

**ಬಲಾಕಷಾಯಕಲ್ಕಾಭ್ಯಾಂ ತೈಲಂ ಕ್ಷೀರಸಮಂ ಪಚೇತ್ ||**
**ಸಹಸ್ರಂ ಶತವಾರಂ ವಾ ವಾತಾಸೃಗ್ವಾತರೋಗನುತ್ ||೧೧೫||**

**ರಸಾಯನಮಿದಂ ಶ್ರೇಷ್ಠಮಿಂದ್ರಿಯಾಣಾಂ ಪ್ರಸಾದನಮ್ ||**
**ಜೀವನಂ ಬೃಂಹಣಂ ಸ್ವರ್ಯಂ ಶುಕ್ರಾಸೃಗ್ದೋಷನುತ್ ಪರಮ್ ||೧೧೬||**

**ಅರ್ಥ—** ಕಳ್ಳಗಂಡ್ಲೆಯ ೪ ಪಾಲು ಕಷಾಯದಲ್ಲಿ ಅದರ ಕಲ್ಕವನ್ನು ತೈಲದ ನಾಲ್ಕನೇ ಪಾಲು ಹಾಕಿ, ತೈಲದಷ್ಟೇ ಹಾಲು ಕೂಡಿಸಿ, ತೈಲವನ್ನು ಸಿದ್ಧಮಾಡಬೇಕು. ಈ ರೀತಿಯಾಗಿ ೧೦೦೦ ಅಥವಾ ೧೦೦ ಸಾರೆ ಮಾಡಬೇಕು. ಇದು ವಾತರಕ್ತವನ್ನೂ ವಾತರೋಗವನ್ನೂ ಕಳೆಯುವದು. ||೧೧೫|| ಈ ಶ್ರೇಷ್ಠ ರಸಾಯನವು ಇಂದ್ರಿಯಗಳನ್ನು ಪ್ರಸನ್ನಮಾಡುವದು. ಜೀವನ ಶಕ್ತಿಯನ್ನೂ ಪುಷ್ಟಿಯನ್ನೂ ಹೆಚ್ಚಿಸುವದು. ಸ್ವರಕ್ಕೆ ಹಿತಕರವು. ಶುಕ್ರರಕ್ತದೋಷಗಳನ್ನು ಅತ್ಯಂತವಾಗಿ ಕಳೆಯುವದು. ||೧೧೬||

ಗುಡೂಚ್ಯಾದಿ ತೈಲವನ್ನು ಹೇಳುತ್ತಾರೆ—

**ಗುಡೂಚೀಕ್ವಾಥದುಗ್ಧಾಭ್ಯಾಂ ತೈಲಂ ದ್ರಾಕ್ಷಾರಸೇನ ವಾ ||**
**ಸಿದ್ಧಂ ಮಧುಕಕಾಶ್ಮರ್ಯರ್ಯರಸೈರ್ವಾ ವಾತರಕ್ತನುತ್ || ೧೧೭ ||**
**ಆರನಾಲಾಢಕೇ ತೈಲಂ ಪಾದಂ ಸರ್ಜರಸಂ ಶ್ರೃತಮ್ ||**
**ಪ್ರಭೂತೇ ಖಜಿತೇ ತೋಯೇ ಜ್ವರದಾಹಾರ್ತಿನುತ್ಪರಮ್ || ೧೧೮ ||**

ಪಿಂಡತೈಲವನ್ನು ಹೇಳುತ್ತಾರೆ—

**ಸಮಧೂಚ್ಛಿಷ್ಟಮಂಜಿಷ್ಠಂ ಸಸರ್ಜರಸಸಾರಿವಮ್ ||**
**ಪಿಂಡತೈಲಂ ತದಭ್ಯಂಗಾತ್ ವಾತರಕ್ತರುಜಾಪಹಮ್ || ೧೧೯ ||**

**ಅರ್ಥ—** ಅಮೃತಬಳ್ಳಿಯ ಕಷಾಯ ತೈಲದ ೪ ಪಾಲು, ಹಾಲು ತೈಲದಷ್ಟು ತಕ್ಕೊಂಡು, ಅದರಲ್ಲಿ ಕಲ್ಕಹಾಕದೆ ಮಾಡಿದ ತೈಲವು ಇದರಂತೆ ದ್ರಾಕ್ಷಾರಸದಿಂದ ಮಾಡಿದ ತೈಲವು ಜೇಷ್ಠಮಧು, ಶಿವನ್ನೀಫಲಗಳ ರಸ ದಿಂದ ಮಾಡಿದ ತೈಲವು ವಾತರಕ್ತನಾಶಕವಾಗಿದೆ. ||೧೧೭|| ಗಂಜಿ ೫೧೨ ತೊಲಿ, ತೈಲ ೧೨೮ ತೊಲಿ, ಸರ್ಜರಸ (ರಾಳ) ೩೨ ತೊಲಿ, ಇವುಗಳನ್ನು ಕುದಿಸಿ ಇಳಿಸಿ, ಅದರಲ್ಲಿಯ ತೈಲವನ್ನು ಬಹಳ ನೀರಿನಲ್ಲಿ ಹಾಕಿ ಕಡೆದು, ಬೇರೆಮಾಡಿ, ತೊಡೆಯಲು, ಜ್ವರದಾಹಗಳ ಪೀಡೆಯನ್ನು ಕಳೆಯುವದು. ||೧೧೮|| ಮೇಣ, ಮಂಜಿಷ್ಠ, ಸರ್ಜರಸ (ರಾಳ), ಅನಂತಮೂಲ, ಇವುಗಳ ಕಲ್ಕವನ್ನು ೪ ಪಾಲು ನೀರಿನಲ್ಲಿ ಹಾಕಿ ತೈಲವನ್ನು ಸಿದ್ಧಮಾಡಬೇಕು. ಈ ಪಿಂಡತೈಲವು ಅಭ್ಯಂಗದಿಂದ ವಾತರಕ್ತದ ಪೀಡೆಯನ್ನು ಕಳೆಯುವದು. ||೧೧೯||

ವಾತನಾಶಕ ಪರಿಷೇಕ ಲೇಪ ಮುಂತಾದವುಗಳನ್ನು ಹೇಳುತ್ತಾರೆ—

**ದಶಮೂಲಶ್ರೃತಂ ಕ್ಷೀರಂ ಸದ್ಯಃ ಶೂಲನಿವಾರಣಮ್ ||**
**ಪರಿಷೇಕೋಽನಿಲಪ್ರಾಯೇ ತದ್ವತ್ ಕೋಷ್ಣೇನ ಸರ್ಪಿಷಾ || ೧೨೦ ||**
**ಸ್ನೇಹೈರ್ಮಧುರಸಿದ್ಧೈರ್ವಾ ಚತುರ್ಭಿಃ ಪರಿಷೇಚಯೇತ್ ||**
**ಸ್ತಂಭಾಕ್ಷೇಪಕಶೂಲಾರ್ತೇ ಕೋಷ್ಣೈರ್ದಾಹೇ ತು ಶೀತಲೈಃ ||೧೨೧||**
**ತದ್ವದ್ಗವ್ಯಾವಿಕಚ್ಛಾಗೈಃ ಕ್ಷೀರೈಸ್ತೈಲವಿಮಿಶ್ರಿತೈಃ ||**
**ನಿಕ್ವಾಥೈರ್ಜೀವನೀಯಾನಾಂ ಪಂಚಮೂಲಸ್ಯ ವಾ ಭಿಷಕ್ || ೧೨೨ ||**

ದ್ರಾಕ್ಷೇಕ್ಷುರಸಮದ್ಯಾನಿ ದಧಿಮಸ್ತ್ವಮ್ಲಕಾಂಜಿಕಮ್ ||
ಸೇಕಾರ್ಥಂ ತಂಡುಲಕ್ಷೌದ್ರಶರ್ಕರಾಂಬು ಚ ಶಸ್ಯತೇ || ೧೨೩ ||

ಕುಮುದೋತ್ಪಲಪತ್ರಾದ್ಯೈರ್ಮಣಿಹಾರೈಃಸಚಂದನೈಃ ||
ಶೀತತೋಯಾನುಗೈರ್ದಾಹೇ ಪ್ರೋಕ್ಷಣಂ ಸ್ಪರ್ಶನಂಹಿತಮ್ ||೧೨೪||

ಚಂದ್ರಪಾದಾಂಬುಸಂಸಿಕ್ತೇ ಕ್ಷೌಮಪದ್ಮದಲಚ್ಛದೇ ||
ಶಯನೇ ಪುಲಿನಸ್ಪರ್ಶೇ ಶೀತಮಾರುತವೀಜಿತೇ || ೧೨೫ ||

ಚಂದನಾರ್ದ್ರಸ್ತನಕರಾಃ ಪ್ರಿಯಾ ನಾರ್ಯಃ ಪ್ರಿಯಂವದಾಃ ||
ಸ್ಪರ್ಶಶೀತಾಃ ಸುಖಸ್ಪರ್ಶಾ ಘ್ನಂತಿ ದಾಹಂ ರುಜಂ ಕ್ಲಮಮ್ ||೧೨೬||

ಸರಾಗೇ ಸರುಜೇ ದಾಹೇ ರಕ್ತಂ ವಿಸ್ರಾವ್ಯ ಲೇಪಯೇತ್ ||
ಮಧುಕಾಶ್ವತ್ಥತ್ವಙ್ಮಾಂಸೀವೀರೋಡುಂಬರಶಾದ್ವಲೈಃ || ೧೨೭ ||

ಜಲಜೈರ್ಯವಚೂರ್ಣೈರ್ವಾ ಸಯಷ್ಟ್ಯಾಹ್ವಪಯೋಘೃತೈಃ ||
ಸರ್ಪಿಷಾ ಜೀವನೀಯೈರ್ವಾ ಪಿಷ್ಟೈರ್ಲೇಪೋಽರ್ತಿದಾಹನುತ್
|| ೧೨೮ ||

ಏಲಾಪಿಯಾಲಮಧುಕಬಿಸಂ ಮೂಲಂ ಚ ವೇತಸಾತ್ ||
ಆಜೇನ ಪಯಸಾ ಪಿಷ್ಟ್ವಾ ಪ್ರಲೇಪೋ ದಾಹರಾಗನುತ್ || ೧೨೯ ||

ಪ್ರಪೌಂಡರೀಕಮಂಜಿಷ್ಠಾದಾರ್ವೀಮಧುಕಚಂದನೈಃ ||
ಸಿತೋಪಲೈರಕಾಸಕ್ತುಮಸೂರೋಶೀರಪದ್ಮಕೈಃ || ೧೩೦ ||

ಲೇಪೋ ರುಗ್ದಾಹವೀಸರ್ಪರಾಗಶೋಫನಿವಾರಣಾಃ ||
ಪಿತ್ತರಕ್ತೋತ್ತರೇ ತ್ವೇತೇ ಲೇಪಾಸ್ ವಾತೋತ್ತರೇ ಶೃಣು || ೧೩೧ ||

ವಾತಘ್ನೈಃ ಸಾಧಿತಾಃ ಸಿದ್ಧಾಃ ಸಕ್ಷೀರಮುದ್ಗಪಾಯಸೈಃ ||
ತಿಲಸರ್ಷಪಪಿಂಡೈರ್ವಾಸ್ಯುಪನಾಹಾ ರುಜಾಪಹಾಃ || ೧೩೨ ||

ಔದಕಪ್ರಸಹಾನೂಪವೇಶವಾರಾಃ ಸುಸಂಸ್ಕೃತಾಃ ||
ಜೀವನೀಯೌಷಧಸ್ನೇಹಯುಕ್ತಾಃ ಸ್ಯುರುಪನಾಹನೇ || ೧೩೩ ||

ಸ್ತಂಭತೋದರುಗಾಯಾಮಶೋಫಾಂಗಗ್ರಹನಾಶನಾಃ ||
ಜೀವನೀಯೌಷಧಸ್ನೇಹಾ ಸಪಯಸ್ಕಾ ವಸಾಪಿ ವಾ || ೧೩೪ ||

ಘೃತಂ ಸಹಚರಾನ್ಮೂಲಂ ಜೀವಂತೀ ಛಾಗಲಂ ಪಯಃ ||
ಲೇಪಃ ಪಿಷ್ಟಾಸ್ತಿಲಾಸ್ತದ್ವತ್ ಭೃಷ್ಟಾಃ ಪಯಸಿ ನಿರ್ವೃತಾಃ || ೧೩೫ ||

ಕ್ಷೀರಪಿಷ್ಟಮುಮಾಲೇಪಮೇರಂಡಸ್ಯ ಫಲಾನಿ ಚ ||
ಕುರ್ಯಾತ್ ಶೂಲನಿವೃತ್ಯರ್ಥಂ ಶತಾಹ್ವಾಂ ವಾಧಿಕೇಽನಿಲೇ || ೧೩೬ ||

ಸಮೂಲಾಗ್ರಚ್ಛದೈರೆರಂಡಕ್ವಾಥೇ ದ್ವಿಪ್ರಾಸ್ಥಿಕಂ ಪೃಥಕ್ ||
ಘೃತಂ ತೈಲಂ ವಸಾ ಮಜ್ಜಾ ಚಾನೂಪಮೃಗಪಕ್ಷಿಣಾಮ್ || ೧೩೭ ||

ಕಲ್ಕಾರ್ಥೇ ಜೀವನೀಯಾನಿ ಗವ್ಯಂ ಕ್ಷೀರಮಥಾಜಕಮ್ ||
ಹರಿದ್ರೋತ್ಪಲಕುಷ್ಠೈಲಾಶತಾಹ್ವಾಶ್ವಘನಚ್ಛದಾನ್ || ೧೩೮ ||

ಬಿಲ್ವಮಾತ್ರಾನ್ ಪೃಥಕ್‌ಪುಷ್ಪಂ ಕಾಕುಭಂ ಚಾಪಿ ಸಾಧಯೇತ್ ||
ಮಧೂಚ್ಛಿಷ್ಟಪಲಾನ್ಯಷ್ಟೌ ದತ್ವಾ ಶೀತೇಽವತಾರಿತೇ || ೧೩೯ ||

ಶೂಲೇನೈವಾರ್ದಿತಾಂಗಾನಾಂ ಲೇಪಃ ಸಂಧಿಗತೇಽನಿಲೇ ||
ವಾತರಕ್ತೇ ಚ್ಯುತೇ ಭಗ್ನೇ ಖಂಜೇ ಕುಷ್ಠೇ ಚ ಶಸ್ಯತೇ || ೧೪೦ ||

ಶೋಫಗೌರವಕಂಡ್ವಾದ್ಯೈರ್ಯುಕ್ತೇ ಚಾಸ್ಮಿನ್ ಕಫೋತ್ತರೇ ||
ಮೂತ್ರಕ್ಷಾರಸುರಾಪಕ್ವಘೃತಮಭ್ಯಂಜನೇ ಹಿತಮ್ || ೧೪೧ ||

ಪದ್ಮಕಂ ತ್ವಕ್‌ಸಮಧುಕಂ ಶಾರಿ ವಾ ಚೇತಿ ತೈರ್ಘೃತಮ್ ||
ಸಿದ್ಧಂ ಸಮಧುಸಿಕ್ತಂ ಸ್ಯಾತ್ ಸೇಕಾಭ್ಯಂಗಃ ಕಫೋತ್ತರೇ || ೧೪೨ ||

ಕ್ಷೀರಂ ತೈಲಂ ಗವಾಂ ಮೂತ್ರಂ ಘೃತಂ ಚ ಕಟುಕೈಃ ಶೃತಮ್ ||
ಪರಿಷೇಕೇ ಪ್ರಶಂಸಂತಿ ವಾತರಕ್ತೇ ಕಫಾಧಿಕೇ || ೧೪೩ ||

ಲೇಪಃ ಸರ್ಷಪನಿಂಬಾರ್ಕಹಿಂಸ್ರಾಕ್ಷೀರತಿಲೈರ್ಹಿತಃ ||
ಶ್ಲೇಷ್ಮಃ ಸಕ್ತುಘೃತಕ್ಷೀರಕಪಿತ್ಥತ್ವಗ್‌ಭಿರೇವ ಚ || ೧೪೪ ||

ಗೃಹಧೂಮೋ ವಚಾ ಕುಷ್ಠಂ ಶತಾಹ್ವಾ ರಜನೀದ್ವಯಮ್ ||
ಪ್ರಲೇಪಃ ಶೂಲನುದ್ ವಾತರಕ್ತೇ ವಾತಕಫೋತ್ತರೇ || ೧೪೫ ||

ಮಧುಶಿಗ್ರೋರ್ಹಿತಂ ತದ್ವದ್ ಬೀಜಂ ಧಾನ್ಯಾಮ್ಲಪೇಷಿತಮ್ ||
ಮುಹೂರ್ತಂ ಲಿಪ್ತಮಮ್ಲೈಶ್ಚ ಸಿಂಚೇದ್ ವಾತಕಫೋತ್ತರೇ ||೧೪೬||

ತ್ರಿಫಲಾವ್ಯೋಷಪತ್ರೈಲಾತ್ವಕ್‌ಕ್ಷೀರೀ ಚಿತ್ರಕಂ ವಚಾ ||
ವಿಡಂಗಂ ಪಿಪ್ಪಲೀಮೂಲಂ ಲೋಮಶಾಂ ವೃಷಕತ್ವಚಮ್ || ೧೪೭ ||

ಋದ್ಧಿಂ ಲಾಂಗಲಿಕಾಂ ಚವ್ಯಂ ಸಮಭಾಗಾನಿ ಚೂರ್ಣಯೇತ್ ||
ಕಲ್ಕಂ ಲಿಪ್ತ್ವಾಯಸೀಂ ಪಾತ್ರೀಂ ಮಧ್ಯಾಹ್ನೇಭಕ್ಷಯೇತ್ತತಃ ||೧೪೮||

**ವರ್ಜಯೇದ್ ದಧಿಶುಕ್ತಾನಿ ಕ್ಷಾರಂ ವೈರೋಧಿಕಾನಿ ಚ ||**
**ವಾತಾಸ್ರೇ ಸರ್ವದೋಷೇऽಪಿ ಹಿತಂ ಶೂಲಾರ್ದಿತೇ ಶರವ್ ||೧೪೯||**
**ತಗರಂ ತ್ವಕ್‌ಶತಾಹ್ವೈಲಾ ಮುಸ್ತಂ ಕುಷ್ಠ ಹರೇಣುಕಾ ||**
**ದಾರು ವ್ಯಾಘ್ರನಖಂ ಚಾಮ್ಲಪಿಷ್ಟಂ ವಾತಕಫಾಸ್ರನುತ್ || ೧೫೦ ||**

**ಅರ್ಥ—** ವಾತಾಧಿಕವಿದ್ದರೆ, ದಶಮೂಲ ಕಲ್ಕ ೧ ಭಾಗ, ಹಾಲು ೪ ಭಾಗ, ನೀರು ೧೬ ಭಾಗ ಹಾಕಿ ಸಿದ್ಧಮಾಡಿದ ದುಗ್ಧವು ಕೂಡಲೇ ಶೂಲವನ್ನು ಕಳೆಯುವದು. ಅದರಂತೆ ಸಿದ್ಧಮಾಡಿದ ಬೆಚ್ಚನ್ನ ಘೃತವೂ ಆದನ್ನು ಕಳೆಯುವದು. ||೧೨೦|| ಶಟಿ, ಆಕ್ಷೇಪ, ಶೂಲಗಳಿಂದ ಪೀಡಿತವಾಗಿದ್ದರೆ, ಮಧುರ ಔಷಧಗಳಿಂದ ಸಿದ್ಧವಾದ ನಾಲ್ಕೂ ಸ್ನೇಹಗಳಿಂದ ಬೆಚ್ಚಗಿರುವಾಗಲೇ ಸೇಚನ ಮಾಡಬೇಕು. ದಾಹವಿದ್ದರೆ ಅವು ತಣ್ಣಗಾಗಲು ಸೇಚನ ಮಾಡಬೇಕು. ||೧೨೧|| ಇದರಂತೆ ತೈಲಕೂಡಿಸಿದ ಆಕಳ ಅಥವಾ ಉಣ್ಣೆ ಗುರಿಯ ಅಥವಾ ಆಡಿನ ಹಾಲುಗಳಿಂದ ಅಥವಾ ಜೀವನೀಯ ಗಣದಅಥವಾ ಮಹಾಪಂಚಮೂಲದ ಕಷಾಯದಿಂದ ಬೆಚ್ಚಗಿರುವಾಗಲೇ ಸೇಚನ ಮಾಡಬೇಕು. ದಾಹವಿದ್ದರೆ ತಣ್ಣಗಾದಮೇಲೆ ಮಾಡಬೇಕು. ||೧೨೨|| ದ್ರಾಕ್ಷಾರಸ, ಕಬ್ಬಿನರಸ, ಮದ್ಯ, ಮೊಸರಿನ ನೀರು, ಹುಳಿಗಂಜಿ, ಅಕ್ಕಿ ತೊಳೆದನೀರು ಜೇನು, ನೀರು, ಸಕ್ಕರೆ ನೀರುಗಳು ಪರಿಷೇಕಕ್ಕೆ ಪ್ರಶಸ್ತವಾಗಿವೆ. ||೧೨೩|| ದಾಹವಿದ್ದರೆ ತಣ್ಣೀರಿನಲ್ಲಿ ಎದ್ದಿದ ಬಿಳೀಕಮಲ, ನೀಲಕಮಲ, ಇವುಗಳ ಎಲೆ ಮುಂತಾದವುಗಳಿಂದ ರತ್ನದ ಹಾರಗಳಿಂದ, ಚಂದನಗಳಿಂದ ಪ್ರೋಕ್ಷಣ ಮಾಡಬೇಕು; ಅವನ್ನು ಮೈಮೇಲೆ ಇಡಬೇಕು. ||೧೨೪|| ಚಂದ್ರಕಿರಣ ಬಿದ್ದ ನೀರು ಸಿಂಪಡಿಸಿದ, ನಾರು, ಮಡಿ, ಕಮಲದೆಲೆಗಳನ್ನು ಮೇಲೆ ಹರವಿದ, ಉಸುಕಿನಲ್ಲಿ ಹಾಸಿದ, ತಂಗಾಳಿಯನ್ನು ಬೀಸಿದ ಹಾಸಿಗೆಯ ಮೇಲೆ ||೧೨೫|| ರೋಗಿಯನ್ನು ಸ್ತನ-ಕೈಗಳಿಗೆ ಚಂದನವನ್ನು ತೊಡೆದುಕೊಂಡು, ಸವಿಮಾತಿನ, ಸುಖವಾಗುವಂತೆ ಶೀತಃಸ್ಪರ್ಶವುಳ್ಳ ಪ್ರಿಯ ಸ್ತ್ರೀಯರ ಆಲಿಂಗನವು ದಾಹ–ಶೂಲ–ದಣುವುಗಳನ್ನು ಕಳೆಯುವುದು. ||೧೨೬|| ವಾತರಕ್ತದಲ್ಲಿ ಕೆಂಪುಬಣ್ಣ, ದಾಹ, ನೋವುಗಳಿದ್ದರೆ ರಕ್ತಸ್ರಾವವನ್ನು ಮಾಡಿ, ಜೇಷ್ಠಮಧು ಆರಳೆಯ ತೋಟೆ, ಜಟಾಮಾಂಸಿ, ಕಾಕೋಲಿ, ಅತ್ತಿಯ ತೋಟೆ, ಮತ್ರಾಕರಿಕೆಗಳ ಕಲ್ಕದಿಂದ ||೧೨೭|| ಅಥವಾ ಜೇಷ್ಠಮಧು, ಹಾಲು, ತುಪ್ಪ ಕೂಡಿಸಿದ ಕಮಲಗಳ ಅಥವಾ ಜಟಿಯ ಕಲ್ಕದಿಂದ ಜೀವನೀಯ ಗಣದ ಕಲ್ಕವನ್ನು ತುಪ್ಪದಲ್ಲಿ ಕಲೆಸಿ ಲೇಪವನ್ನು ಮಾಡಬೇಕು. ಅದು ನೋವು ದಾಹಗಳನ್ನು

ಕಳೆಯುವದು. ||೧೭|| ಯಾಲಕ್ಕಿ, ಪಿಯಾಲ(ಅಶೋಕ)ದ ಮೂಲ ಇವನ್ನು ಆಡಿನ ಹಾಲಿನಲ್ಲಿ ಅರೆದು ಮಾಡಿದ ಲೇಪವು ದಾಹ ಕೆಂಪು ಬಣ್ಣಗಳನ್ನು ಕಳೆಯುವದು. ||೧೯|| ಪುಂಡರೀಕಕಾಷ್ಠ, ಮಂಜಿಷ್ಠೆ, ಮರಅರಿಶಿಣ, ಜೇಷ್ಠಮಧು, ಚಂದನ, ಕಲ್ಲುಸಕ್ಕರೆ, ಶರಮೂಲ, ಸಕ್ತು, ಚನ್ನಂಗೀ ಬೇಳೆ ಬಾಳದ ಬೇರು, ಪದ್ಮಕಾಷ್ಠ ||೧೩೦|| ಇವುಗಳನ್ನು ನೀರಿನಲ್ಲಿ ಅರೆದು, ಮಾಡಿದ ಲೇಪವು ನೋವು, ದಾಹ, ಇಸಬು, ಕೆಂಪುಬಣ್ಣ, ಬಾವುಗಳನ್ನು ಕಳೆಯುವದು. ಪಿತ್ತರಕ್ತಾಧಿಕ ವಾತರಕ್ತದಲ್ಲಿ ಈ ಲೇಪಗಳು ಹೇಳಲ್ಪಟ್ಟವು. ಇನ್ನು ಮೇಲೆ ವಾತಾಧಿಕದಲ್ಲಿ ಲೇಪಗಳನ್ನು ಹೇಳುವೆವು. ||೧೩೧|| ವಾತನಾಶಕ ದ್ರವ್ಯಗಳಿಂದ ಸಿದ್ಧಮಾಡಿದ, ಅಥವಾ ಹಾಲು ಹಾಕಿ ಮಾಡಿದ, ಹೆಸರಿನ ಪಾಯಸಗಳಿಂದ, ಎಳ್ಳು ಸಾಸಿವೆಗಳ ಕಲ್ಕದಿಂದ ಮಾಡಿದ ಸ್ನಿಗ್ಧ ಉಪನಾಹಗಳು ನೋವನ್ನು ಕಳೆಯುವವು. ||೧೩೨|| ನೀರಿನಲ್ಲಿರುವ, ಪ್ರಸಹ, (ಕಸಿದು ತಿನ್ನುವ ಪ್ರಾಣಿ) ಆನೂಪ (ಮಲೆನಾಡು) ಪ್ರಾಣಿಗಳ ಜಜ್ಜಿದ ಮಾಂಸದಲ್ಲಿ ಜೀವನೀಯ ಔಷಧ ಸ್ನೇಹಹಾಕಿ ಕುದಿಸಿ, ಉಪನಾಹ ಮಾಡಬೇಕು.||೧೩೩|| ಇವು ಶಟೆ, ಚುಚ್ಚುವಿಕೆ, ನೋವು, ಜಗ್ಗುವಿಕೆ, ಬಾವು, ಮೈ ಹಿಡಿಯೋಣ, ಇವುಗಳನ್ನು ನಾಶಮಾಡುವದು. ಜೀವನೀಯ ದ್ರವ್ಯಕೂಡಿದ ಸ್ನೇಹಗಳು, ಅಥವಾ ಹಾಲು ಕೂಡಿದ ನೆಣವು ಇವುಗಳ ಉಪನಾಹಮಾಡಬೇಕು.||೧೩೪|| ಅಥವಾ ೧ ಮುಳ್ಳುಜಾಜೀಬೇರು, ಜೀವಂತೀ, ಆಡಿನಹಾಲು, ಮತ್ತು ತುಪ್ಪ ೨ ಅದರಂತೆ ಹುರಿದು, ಹಾಲಿನಲ್ಲಿ ಅರೆಸಿದ ಎಳ್ಳುಗಳ ಕಲ್ಕ, ಇವುಗಳ ಲೇಪವನ್ನು ಮಾಡಬೇಕು. ||೧೩೫|| ವಾತವು ಹೆಚ್ಚಿದ್ದರೆ, ಆಗಸಿಯನ್ನು ಹಾಲಿನಲ್ಲಿ ಅರೆದು ಅಥವಾ ಔಡಲಬೀಜಗಳನ್ನು ಹಾಲಿನಲ್ಲಿ ಅರೆದು, ಅಥವಾ ಬಡೀಸೋಪನ್ನು ಹಾಲಿನಲ್ಲಿ ಅರೆದು ಲೇಪ ಮಾಡಬೇಕು. ಅವು ಶೂಲಗಳನ್ನು ಕಳೆಯುವವು. ||೧೩೬|| ಬೇರು-ತುದಿ ಎಲೆ ಸಹಿತವಾಗಿ ಔಡಲ ಗಿಡವನ್ನು ತಂದು ಕಷಾಯಮಾಡಿ, ಸ್ನೇಹದ ನಾಲ್ಕುಪಾಲು ಆ ಕಷಾಯದಲ್ಲಿ ಘೃತ—ತೈಲ ಮತ್ತು ಅನೂಪದೇಶದ ಮೃಗಪಕ್ಷಿಗಳ ನೆಣ ಮಜ್ಜಗಳನ್ನು ಬೇರೆ ಬೇರೆಯಾಗಿ ೧೭ ತೊಲಿ ಹಾಕಿ ||೧೩೭|| ಅವುಗಳಷ್ಟೇ ಆಕಳ ಹಾಲು, ಆಡಿನ ಹಾಲು ಕೂಡಿಸಿ, ಜೀವನೀಯ ಗಣದ ಹತ್ತು ದ್ರವ್ಯ, ಅರಿಷಣ, ನೀಲಕಮಲ, ಕೋಷ್ಠ, ಯಾಲಕ್ಕಿ, ಬಡೀಸೋಪು, ಕಣಗಿಲ ಎಲೆ, ||೧೩೮|| ಮತ್ತು ಮತ್ತಿಯ ಹೂವುಗಳ ಕಲ್ಕವನ್ನು ಬೇರೆಬೇರೆಯಾಗಿ ४-४ ತೊಲೆ ಹಾಕಿ, ಸ್ನೇಹ ಸಿದ್ಧಮಾಡಬೇಕು. ಬಿಸಿ ಬಿಸಿಯಿರುವಾಗಲೇ ३२ ತೊಲಿ ಮೇಣ

ಹಾಕಬೇಕು. ||೧೩೯|| ಶೂಲದಿಂದ ಪೀಡಿತ ಅವಯವಗಳಿಗೂ ಸಂಧಿಯಲ್ಲಿಯ ವಾತಕ್ಕೂ ಸೋರುವ ಮುರಿದಂತೆ ನೋಯು ವಾತಕ್ಕೂ ಕುಂಟುವ ಕಾಲಿಗೂ ಕುಷ್ಟಕ್ಕೂ ಲೇಪವಮಾಡಬೇಕು. ||೧೪೦|| ಬಾವು, ಜಡತ್ವ, ತುರಿಕೆ, ಮುಂತಾದವುಗಳಿಂದ ಕೂಡಿದ ಕಫಾಧಿಕ ವಾತರಕ್ತದಲ್ಲಿ ಗೋಮೂತ್ರ ಕ್ಷಾರ ಮದ್ಯಗಳಲ್ಲಿ ಸಿದ್ಧಮಾಡಿದ ಘೃತದ ಅಭ್ಯಂಗ ಮಾಡಬೇಕು. ||೧೪೧|| ಕಫಾಧಿಕ ವಾತರಕ್ತದಲ್ಲಿ ಪದ್ಮಕಾಷ್ಠ, ದಾಲಚಿನ್ನಿ, ಜೇಷ್ಠಮಧು, ಅನಂತ ಮೂಲ, ಇವುಗಳಿಂದ ಘೃತವನ್ನು ಸಿದ್ಧಮಾಡಿ ಅದರಲ್ಲಿ ಜೇನು ಶುಕ್ತಗಳನ್ನು ಕೂಡಿಸಿ, ಪರಿಷೇಕ ಅಭ್ಯಂಗಗಳನ್ನು ಮಾಡಬೇಕು. ||೧೪೨|| ಕಫಾಧಿಕ ವಾತರಕ್ತದಲ್ಲಿ ಈ ಶುಂಠಿ ಮುಂತಾದ ಕಾರದ್ರವ್ಯಗಳಿಂದ ಸಿದ್ಧಮಾಡಿದಹಾಲು ಎಣ್ಣೆ, ಗೋಮೂತ್ರ, ಘೃತಗಳ ಪರಿಷೇಕವು ಒಳ್ಳೆಯದೆಂದು ಹೇಳುತ್ತಾರೆ. ||೧೪೩|| ಸಾಸಿವೆ, ಬೇವು, ಎಕ್ಕೆ, ನಸುಗುನ್ನಿಬೀಜ, ಹಾಲು, ಎಳ್ಳುಗಳ ಲೇಪವು ಹಿತಕರವಾಗಿದೆ. ಅದರಂತೆ ಸಕ್ತು, ಘೃತ, ಹಾಲು, ಬೆಳವಲ ತೋಟಿಗಳ ಲೇಪವೂ ಶ್ರೇಷ್ಠವಾಗಿದೆ. ||೧೪೪|| ವಾತಕಫಾಧಿಕ ವಾತರಕ್ತದಲ್ಲಿ ಇಲ್ಲಣ, ಬಜಿ, ಕೋಷ್ಠ, ಬಡೀಸೋಪು, ಅರಿಷಿಣ, ಮರಅರಿಷಿಣಗಳ ಲೇಪವು ಶೂಲಗಳನ್ನು ಕಳೆಯುವದು. ||೧೪೫|| ಅದರಂತೆ ಧಾನ್ಯದ ಗಂಜಿಯಲ್ಲಿ ಅರೆದ ಕೆಂಪು ನುಗ್ಗಿಯ ಬೀಜದ ಲೇಪವನ್ನು ಮಾಡಿ ಸ್ವಲ್ಪ ಹೊತ್ತಿನ ಮೇಲೆ ಗಂಜಿ ಮುಂತಾದ ಹುಳಿದ್ರವ್ಯಗಳ ಸೇಚನಮಾಡಬೇಕು. ||೧೪೬|| ತ್ರಿಫಳೆ, ತ್ರಿಕಟು, ತಮಾಲಪತ್ರ, ಯಾಲಕ್ಕಿ, ವಂಶಲೋಚನ, ಚಿತ್ರಕ, ಬಜಿ, ವಾವಡಿಂಗ, ಮೋಡಿ, ಜಟಾಮಾಂಸಿ, ಅಡಸಲ ತೋಟಿ ||೧೪೭|| ಋದ್ಧಿ, ಕೋಳಿಕುಕ್ಕನಗಡ್ಡಿ, ಚವಕ ಇವುಗಳ ಸಮಭಾಗ ತಕ್ಕೊಂಡು ಚೂರ್ಣಮಾಡಿ ನೀರಿನಲ್ಲಿ ಕಲೆಸಿ ಆ ಕಲ್ಕದಿಂದ ಮುಂಜಾನೆ ಕಬ್ಬಿಣ ಪಾತ್ರೆಯನ್ನು ತೊಡೆದು ಮಧ್ಯಾಹ್ನದಲ್ಲಿ ಅದನ್ನು ತೆಗೆದು ತಿನ್ನಬೇಕು. ||೧೪೮|| ಮೊಸರು, ಶುಕ್ತ, ಕ್ಷಾರ, ವಿರುದ್ಧಅನ್ನ ಇವುಗಳನ್ನು ತಿನ್ನಬಾರದು. ಶೂಲದಿಂದ ಪೀಡಿತ ತ್ರಿದೋಷಜ ವಾತರಕ್ತದಲ್ಲಿ ಇದು ಅತ್ಯಂತ ಹಿತಕರವು. ||೧೪೯|| ತಗರ, ದಾಲಚಿನ್ನಿ, ಬಡೇಸೋಪು, ಯಾಲಕ್ಕಿ, ಜೇಕು, ಕೋಷ್ಠ, ರೇಣುಕಬೀಜ, ದೇವದಾರು, ವ್ಯಾಘ್ರನಖ, ಇವುಗಳನ್ನು ಆಮ್ಲದ್ರವ್ಯದಲ್ಲಿ ಅರೆದು, ಅದನ್ನು ಮೇಲಿನಂತೆ ಆಮ್ಲದಲ್ಲಿ ಅರೆದು ಲೇಪಮಾಡಬೇಕು. ಅದು ವಾತಕಫಾಧಿಕ ವಾತರಕ್ತವನ್ನು ಕಳೆಯುವದು. ||೧೫೦||

**ಬುದ್ಧ್ವಾ ಸ್ಥಾನವಿಶೇಷಾಂಶ್ಚ ದೋಷಾಣಾಂ ಚ ಬಲಾಬಲಮ್ ||**
**ಚಿಕಿತ್ಸಿತಮಿದಂ ಕುರ್ಯಾದೂಹಾಪೋಹವಿಕಲ್ಪವಿತ್ ||೧೫೧||**

**ಅರ್ಥ—** ಸ್ಥಾನವಿಶೇಷಗಳನ್ನೂ ದೋಷಗಳ ಬಲಾಬಲಗಳನ್ನೂ ತಿಳಿದುಕೊಂಡು ತರ್ಕವಿತರ್ಕಗಳನ್ನು ಬಲ್ಲ ವೈದ್ಯನು ಈ ಚಿಕಿತ್ಸೆಯನ್ನು ಮಾಡಬೇಕು. ||೧೫೧||

ಚಿಕಿತ್ಸಾ ತತ್ವವನ್ನು ಹೇಳುತ್ತಾರೆ—

**ಕುಪಿತೇ ಮಾರ್ಗಸಂರೋಧಾನ್ಮೇದಸೋ ವಾ ಕಫಸ್ಯ ವಾ ||**
**ಅತಿವೃದ್ಧೇಽನಿಲೇ ನಾದೌ ಶಸ್ತಂ ಸ್ನೇಹನಬೃಂಹಣಮ್ || ೧೫೨ ||**

**ವ್ಯಾಯಾಮಶೋಧನಾರಿಷ್ಟಮೂತ್ರಪಾನೈರ್ವಿರೇಚನೈಃ ||**
**ತಕ್ರಾಭಯಾಪ್ರಯೋಗೈಶ್ಚ ಕ್ಷಪಯೇತ್ ಕಫಮೇದಸೀ || ೧೫೩ ||**

**ಬೋಧಿವೃಕ್ಷಕಷಾಯಂ ತು ಪ್ರಪಿಬೇನ್ಮಧುನಾಸಹ ||**
**ವಾತರಕ್ತಂ ಜಯತ್ಯಾಶು ತ್ರಿದೋಷಮಪಿದಾರುಣಮ್ || ೧೫೪ ||**

**ಪುರಾಣಯವಗೋಧೂಮಮಧ್ವರಿಷ್ಟಸುರಾಸವೈಃ ||**
**ಶಿಲಾಜತುಪ್ರಯೋಗೈಶ್ಚ ಗುಗ್ಗುಲೋರ್ಮಾಕ್ಷಿಕಸ್ಯ ಚ || ೧೫೫ ||**

**ಪಶ್ಚಾದ್‌ವಾತೇ ಕ್ರಿಯಾಂ ಕುರ್ಯಾದ್ ವಾತರಕ್ತಪ್ರಸಾದನೀಮ್ ||**
**ಗಂಭೀರರಕ್ತಮಾಕ್ರಾಂತಂಸ್ಯಾಚ್ಛೇದ್‌ವಾ ತದ್‌ವಿವರ್ಜಯೇತ್ || ೧೫೬ ||**

**ರಕ್ತಪಿತ್ತಾಧಿಕೇ ತ್ವಾಮಾತ್ ಪಾಕಮಾಶು ನಿಯಚ್ಛತಿ ||**
**ಭಿನ್ನಂ ಚ್ಯವತಿ ವಾ ರಕ್ತಂ ವಿದಗ್ಧಂ ಪೂಯಮೇವ ಚ || ೧೫೭ ||**

**ತಯೋಶ್ಚಿಕಿತ್ಸಾಂ ವ್ರಣವತ್ ಭೇದಶೋಧನದಾರಣೈಃ ||**
**ಕುರ್ಯಾದುಪದ್ರವಾಣಾಂ ಚ ಕ್ರಿಯಾಂ ಸ್ವಾಂ ಸ್ವಾಂ ಚಿಕಿತ್ಸಯಾ || ೧೫೮ ||**

**ಅರ್ಥ—** ಮೇದ ಮತ್ತು ಕಫದ ಮಾರ್ಗದ ಪ್ರತಿಬಂಧದಿಂದ ವಾತವು ಹೆಚ್ಚಾಗಿ ಕುಪಿತವಾಗಿದ್ದರೆ, ಮೊದಲು ಸ್ನೇಹನ ಬೃಂಹಣಗಳನ್ನು ಮಾಡಬಾರದು. ||೧೫೨|| ವ್ಯಾಯಾಮ, ವಮನ, ಅರಿಷ್ಟ, ಮತ್ತು ಮೂತ್ರಗಳ ಪಾನವಿರೇಚನ ಮತ್ತು ತಕ್ರ ಹರೀತಕೀ ಸೇವನೆಗಳಿಂದ ಕಫ ಮೇದಗಳನ್ನು ಕಳೆಯಬೇಕು. ||೧೫೩|| ಅರಳೆಯ ಗಿಡದ ತೊಗಟೆಯ ಕಷಾಯವನ್ನು ಜೇನು ಹಾಕಿ ಕುಡಿಯಬೇಕು. ಇದು ಭಯಂಕರವಾದ ತ್ರಿದೋಷಜ, ವಾತರಕ್ತವನ್ನು ಕೂಡ ಕಳೆಯುವದು. ||೧೫೪|| ಹಳೇ ಜವೆಗೋದಿ, ಜೇನು

ಅರಿಷ್ಟ, ಮದ್ಯ, ಆಸವಗಳಿಂದಲೂ ಶಿಲಾಜತು, ಗುಗ್ಗುಳ, ಸುವರ್ಣಮಾಕ್ಷಿಕ ಗಳ ಪ್ರಯೋಗಗಳಿಂದಲೂ ಕಫ ಮೇದಗಳು ಹೋಗಲು ||೧೫೫|| ವಾತಕ್ಕಾಗಿ ವಾತರಕ್ತನಾಶನ ಚಿಕಿತ್ಸೆಯನ್ನು ಮಾಡಬೇಕು. ವಾತರಕ್ತವು ಗುಂಬಾಗಿದ್ದ ರಕ್ತವನ್ನು ಸೇರಿದ್ದರೆ ಅದನ್ನು ಬಿಡಬೇಕು. ||೧೫೬|| ವಾತಪಿತ್ತಾಧಿಕ ವಾತ ರಕ್ತವು ಅಪಕ್ವ (ಆಮ) ವಿದ್ದರೆ ತೀವ್ರ ಪಾಕವಾಗದು. ಪಕ್ವವಿದ್ದರೆ ಕರ್ತ್ರವನ್ನು ಸ್ರವಿಸುವದು. ||೧೫೭|| ಈ ರಕ್ತಸ್ರಾವ ಅಥವಾ ಕೀವಿನ ಸ್ರಾವಗಳ ಮೇಲೆ ವ್ರಣದಂತೆ ಭೇದನ, ಶೋಧನ, ದಾರಣ (ಶೀಳೋಣ) ಮುಂತಾದ ಚಿಕಿತ್ಸೆ ಯನ್ನು ಮಾಡಬೇಕು. (ನಿದ್ರೆ ಬರದಿರೋಣ, ಅರುಚಿ ಮುಂತಾದ) ಉಪ ದ್ರವಗಳ ಮೇಲೆ ಆಯಾ ವಿಕಾರಗಳ ಚಿಕಿತ್ಸೆಯನ್ನು ಮಾಡಬೇಕು. ||೧೫೮||

**ತತ್ರಶ್ಲೋಕಾಃ**

**ಹೇತುಃ ಸ್ಥಾನಾನಿ ಮೂಲಂ ಚ ಯಸ್ಮಾತ್ ಪ್ರಾಯೇಣ ಸಂಧಿಷು ||**
**ಕುಪ್ಯತಿ ಪ್ರಾಕ್ ತದ್ರೂಪಂ ದ್ವಿವಿಧಸ್ಯ ಚ ಲಕ್ಷಣಮ್ ||೧೫೯||**

**ಪೃಥಗ್‌ಭಿನ್ನಸ್ಯ ಲಿಂಗಂ ಚ ದೋಷಾಧಿಕ್ಯಮುಪದ್ರವಾಃ ||**
**ಸಾಧ್ಯಂ ಯಾಪ್ಯಮಸಾಧ್ಯಂ ಚ ಕ್ರಿಯಾ ಸಾಧ್ಯಸ್ಯ ಚಾಖಿಲಾ ||೧೬೦||**

**ವಾತರಕ್ತಸ್ಯ ನಿರ್ದಿಷ್ಟಾ ಸಮಾಸವ್ಯಾಸತಸ್ತಥಾ ||**
**ಮಹರ್ಷಿಣಾಗ್ನಿವೇಶಾಯ ತಥೈವಾವಸ್ಥಿಕೀ ಕ್ರಿಯಾ ||೧೬೧||**

**ಅರ್ಥ—** ಈ ಅಧ್ಯಾಯದಲ್ಲಿ ಆತ್ರೇಯ ಋಷಿಗಳು ಅಗ್ನಿವೇಶರಿಗೆ ವಾತರಕ್ತದ ಕಾರಣ, ಸ್ಥಾನ, ಅದರ ಮೂಲ, ಯಾವ ಕಾರಣ ಅದು ಸಂಧಿ ಸಂಧಿಯಲ್ಲಿ ಕುಪಿತವಾಗುವದು, ಅದರ ಪೂರ್ವರೂಪ, ಅದರ ಎರಡು ಪ್ರಕಾರದ ಲಕ್ಷಣ ||೧೫೯|| ಬೇರೆಬೇರೆ ಪ್ರಕಾರಗಳ ಲಕ್ಷಣ, ಅವುಗಳದೋಷ ಉಪದ್ರವ, ಸಾಧ್ಯ, ಯಾಪ್ಯ, ಅಸಾಧ್ಯಗಳ ಲಕ್ಷಣ, ಸಾಧ್ಯರೋಗದ ಎಲ್ಲ ಚಿಕಿತ್ಸೆ, ||೧೬೦|| ವಾತರಕ್ತದ ಸಂಕ್ಷಿಪ್ತ ಮತ್ತು ವಿಸ್ತ್ರತವಾದ ಮತ್ತು ಅವಸ್ಥಾನುರೂಪವಾದ ಚಿಕಿತ್ಸೆ, ಇವುಗಳನ್ನು ಹೇಳಿದರು. ||೧೬೧||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ವಾತರಕ್ತ ಚಿಕಿತ್ಸಿತಂ ನಾಮ ಏಕೋನತ್ರಿಂಶತ್ತಮೋಽಧ್ಯಾಯಃ ||೨೯||**

**ಅರ್ಥ—** ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕ ಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ **ವಾತರಕ್ತ ಚಿಕಿತ್ಸೆ ಎಂಬ** ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಶ್ರೀ ಮದಾದ್ಯ ಬಾಬಾಚಾರ್ಯರ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ **ಚರಕ 'ಚಿಕಿತ್ಸಾ-ಬೋಧಿನಿ'** ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ವಾತರಕ್ತ** ಚಿಕಿತ್ಸೆ ಎಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



# ೩೦ನೇ ಅಧ್ಯಾಯ

## ಯೋನಿವ್ಯಾಪ ಚಿಕಿತ್ಸೆ

ವಾತರಕ್ತ ಚಿಕಿತ್ಸೆಯ ನಂತರ ವಾತಜನ್ಯರೋಗವಾದ ಮತ್ತು ಉಳಿದ ಯೋನಿವ್ಯಾಪ ಚಿಕಿತ್ಸೆಯನ್ನು ಹೇಳುತ್ತಾರೆ—

**ಅಥಾತೋ ಯೋನಿವ್ಯಾಪಚ್ಚಿಕಿತ್ಸಿತಂ ವ್ಯಾಖ್ಯಾಸ್ಯಾಮಃ ||**

**ಅರ್ಥ—** ಇನ್ನುಮೇಲೆ ಯೋನಿ ರೋಗಗಳ ಚಿಕಿತ್ಸೆಯನ್ನು ಹೇಳುತ್ತೇವೆ:—

**ಇತಿ ಹ ಸ್ಮಾಹ ಭಗವಾನಾತ್ರೇಯಃ ||**

**ಅರ್ಥ—** ಪೂಜ್ಯರಾದ ಆತ್ರೇಯ ಋಷಿಗಳು ಹೀಗೆ ಹೇಳಿದರು:—

**ತೀರ್ಥದಿವ್ಯೌಷಧಿಮತಶ್ಚಿತ್ರಧಾತುಶಿಲಾವತಃ ||**
**ಪುಣ್ಯೇ ಹಿಮವತಃ ಪಾರ್ಶ್ವೇ ಸುರಸಿದ್ಧರ್ಷಿಸೇವಿತೇ || ೧ ||**

**ವಿಹರಂತಂ ತಪೋಯೋಗಾತ್ ತತ್ವಜ್ಞಾನಾರ್ಥದರ್ಶಿನಮ್ ||**
**ಕೃಷ್ಣಾತ್ರೇಯಃ ಜಿತಾತ್ಮಾನಮಗ್ನಿವೇಶೋಽನುಪೃಷ್ಟವಾನ್ || ೨ ||**

**ಭಗವನ್ ಯದಪತ್ಯಾನಾಂ ಮೂಲಂ ನಾರ್ಯಃ ಪರಂನೃಣಾಮ್ ||**
**ತದ್ವಿಘಾತೋ ಗದೈಶ್ಚಾಸಾಂ ಕ್ರಿಯತೇ ಯೋನಿಮಾಶ್ರಿತೈಃ || ೩ ||**

**ತಸ್ಮಾತ್ತೇಷಾಂ ಸಮುತ್ಪತ್ತಿಮುತ್ಪನ್ನಾನಾಂ ಚ ಲಕ್ಷಣಮ್ ||**
**ಸೌಷಧಂ ಶ್ರೋತಮಿಚ್ಛಾಮಿ ಪ್ರಜಾನುಗ್ರಹಕಾಮ್ಯಯಾ || ೪ ||**

**ಇತಿ ಶಿಷ್ಯೇಣ ಪೃಷ್ಟಸ್ತು ಪ್ರೋವಾಚರ್ಷಿವರೋಽತ್ರಿಜಃ ||**
**ವಿಂಶತಿರ್ವ್ಯಾಪದೋ ಯೋನೇರ್ನಿರ್ದಿಷ್ಟಾ ರೋಗಸಂಗ್ರಹೇ || ೫ ||**

**ಮಿಥ್ಯಾಚಾರೇಣ ತಾಃ ಸ್ತ್ರೀಣಾಂ ಪ್ರದುಷ್ಟೇನಾರ್ತವೇನ ಚ ||**
**ಜಾಯಂತೇ ಬೀಜದೋಷಾಚ್ಚ ದೈವಾಚ್ಚ ಶೃಣು ತಾಃ ಪೃಥಕ್ || ೬ ||**

**ಅರ್ಥ—** ಪವಿತ್ರ ತೀರ್ಥ, ದಿವ್ಯೌಷಧಿ ಮತ್ತು ತರತರದ ಧಾತು ಮತ್ತು ಶಿಲೆಗಳುಳ್ಳ ಹಿಮಾಲಯದ, ದೇವತೆ-ಸಿದ್ಧ ಹಾಗೂ ಋಷಿಗಳು ವಾಸಮಾಡಿದ ಪವಿತ್ರವಾದ ಪಾರ್ಶ್ವದಲ್ಲಿ ||೧|| ತಿರುಗಾಡುವ ಮತ್ತು ತನ್ನ ತಪಃಪ್ರಭಾವದಿಂದ ಉಂಟಾದ ತತ್ವಜ್ಞಾನದಿಂದ ಎಲ್ಲ ವಸ್ತುಗಳನ್ನು ನೋಡುವ, ಜಿತೇಂದ್ರಿಯನಾದ ಕೃಷ್ಣಾತ್ರೇಯರನ್ನು ಕುರಿತು ಅಗ್ನಿವೇಶನು ಪ್ರಶ್ನೆಮಾಡಿದನು. ||೨|| ಪೂಜ್ಯರೇ, ಮನುಷ್ಯರ ಸಂತತಿಗೆ ಸ್ತ್ರೀಯರು ಮೂಲ ಕಾರಣರಾಗಿದ್ದಾರೆ. ಅವರ ಯೋನಿಯಲ್ಲುಂಟಾಗುವ ರೋಗಗಳಿಂದ ಅದಕ್ಕೆ ಬಾಧೆ ಬರುತ್ತದೆ. ||೩|| ಆದ್ದರಿಂದ ಆ ರೋಗಗಳ ಕಾರಣ, ಲಕ್ಷಣ, ಔಷಧಗಳನ್ನು ಜನರ ಕಲ್ಯಾಣಕ್ಕಾಗಿ ಕೇಳಬಯಸುತ್ತೇನೆ. ||೪|| ಈ ರೀತಿಯಾಗಿ ಶಿಷ್ಯರಿಂದ ಕೇಳಲ್ಪಟ್ಟ ಆತ್ರೇಯ ಮುನಿಶ್ರೇಷ್ಠರು ಹೇಳಿದರು:— ಅಷ್ಟೋದರೀಯ ಅಧ್ಯಾಯದಲ್ಲಿ ೨೦ ಯೋನಿರೋಗಗಳೆಂದು ಹೇಳಲ್ಪಟ್ಟಿದೆ. ||೫|| ಅವು ಸ್ತ್ರೀಯರ ದುರಾಹಾರ ವಿಹಾರದಿಂದಲೂ ದುಷ್ಟ ಆರ್ತವದಿಂದಲೂ ಬೀಜದೋಷದಿಂದಲೂ ಪೂರ್ವಕರ್ಮದಿಂದಲೂ ಉಂಟಾಗುತ್ತವೆ. ಅವುಗಳನ್ನು ಬೇರೆ ಬೇರೆಯಾಗಿ ಹೇಳುವೆನು ಕೇಳು. ||೬||

೨೦ ಯೋನಿರೋಗಗಳನ್ನು ಅವುಗಳ ಲಕ್ಷಣಗಳನ್ನುಹೇಳುತ್ತಾರೆ—

**ವಾತಲಾಹಾರಚೇಷ್ಟಾಯಾಃ ವಾತಲಾಯಾಃ ಸಮೀರಣಃ ||**
**ವಿವೃದ್ಧೋ ಯೋನಿಮಾಶ್ರಿತ್ಯ ಯೋನೇಸ್ತೋದಂ ಸವೇದನಮ್ ||೭||**
**ಸ್ತಂಭಂ ಪಿಪೀಲಿಕಾಸೃಪ್ತಿಮಿವ ಕರ್ಕಶತಾಂ ತಥಾ ||**
**ಕರೋತಿ ಸುಪ್ತಿಮಾಯಾಸಂ ವಾತಜಾಂಶ್ಚಾಪರಾನ್ ಗದಾನ್ || ೮ ||**

**ಸಾ ಸ್ಯಾತ್ ಸಶಬ್ದರುಕ್ ಫೇನತನುರೂಕ್ಷಾರ್ತವಾನಿಲಾತ್ ||**
**ವ್ಯಾಪಲ್ಲವಣಕಟ್ವಮ್ಲಕ್ಷಾರಾದ್ಯೈಃ ಪಿತ್ತಜಾ ಭವೇತ್ ||೯||**

**ದಾಹಪಾಕಜ್ವರೋಷ್ಣಾರ್ತಾ ನೀಲಪೀತಾಸಿತಾರ್ತವಾ ||**
**ಭೃಶೋಷ್ಣಕುಣಪಸ್ರಾವಾ ಯೋನಿಃ ಸ್ಯಾತ್ ಪಿತ್ತದೂಷಿತಾ ||೧೦||**
**ಕಫೋಽಭಿಷ್ಯಂದಿಭಿರ್ವೃದ್ಧೋ ಯೋನಿಂ ಚೇದ್ ದೂಷಯೇತ್ ಸ್ತ್ರಿಯಾಃ ||**
**ಸ ಕುರ್ಯಾತ್ ಪಿಚ್ಛಿಲಾಂ ಶೀತಾಂ ಕಂಡೂಗ್ರಸ್ತಾಮವೇದನಾಮ್ || ೧೧ ||**

ಪಾಂಡುವರ್ಣಾಂ ತಥಾ ಪಾಂಡುಪಿಚ್ಛಿಲಾರ್ತವವಾಹಿನೀಮ್ ||
ಸಮುಶ್ನಂತ್ಯಾ ರಸಾನ್ ಸರ್ವಾನ್ ದೂಷಯಿತ್ವಾ ತ್ರಯೋ ಮಲಾಃ
|| ೧೨ ||

ಯೋನಿಗರ್ಭಾಶಯಸ್ಥಾಃ ಸ್ವೈರ್ಯೋನಿಂ ಯುಂಜಂತಿ ಲಕ್ಷಣೈಃ ||
ಸಾ ಭವೇದ್ ದಾಹಶೂಲಾರ್ತಾ ಶುಕ್ಲಪಿಚ್ಛಿಲವಾಹಿನೀ || ೧೩ ||

ಪಿತ್ತರಕ್ತಕರೈರ್ನಾರ್ಯಾ ರಕ್ತಂ ಪಿತ್ತೇನ ದೂಷಿತಮ್ ||
ಅತಿಪ್ರವರ್ತತೇ ಯೋನ್ಯಾಂ ಲಬ್ಧೇ ಗರ್ಭೇಽಪಿ ಸಾಸೃಜಾ || ೧೪ ||

ಯೋನಿಗರ್ಭಾಶಯಸ್ಥಂ ಚೇತ್ ಪಿತ್ತಂ ಸಂದೂಷಯೇದಸೃಕ್ ||
ಸಾರಜಸ್ಕಾ ಮತಾ ಕಾರ್ಶ್ಯವೈವರ್ಣ್ಯಜನನೀ ಭೃಶಮ್ || ೧೫ ||

ಯೋನ್ಯಾಮಧಾವನಾತ್ ಕಂಡೂರ್ಜಾತಾಃ ಕುರ್ವಂತಿ ಜಂತವಃ ||
ಸಾ ಸ್ಯಾದಚರಣಾ ಕಂಡ್ವಾ ತಯಾತಿನರಕಾಂಕ್ಷಿಣೀ || ೧೬ ||

ಅತಿವ್ಯವಾಯಾತ್ ಪವನಃ ಶೋಥಸುಪ್ತಿರುಜಃ ಸ್ತ್ರಿಯಃ ||
ಯೌನ್ ಕರೋತಿ ಕುಪಿತಃ ಸಾ ಚಾತಿಚರಣಾ ಮತಾ || ೧೭ ||

ಮೈಥುನಾದತಿಬಾಲಾಯಾಃ ಪೃಷ್ಠಕಟ್ಯೂರುವಂಕ್ಷಣಮ್ ||
ರುಜಯನ್ ದೂಷಯೇದ್ ಯೋನಿಂ ವಾಯುಃ ಪ್ರಾಕ್‌ಚರಣಾ ಹಿ
ಸಾ || ೧೮ ||

ಗರ್ಭಿಣ್ಯಾಃ ಶ್ಲೇಷ್ಮಲಾಭ್ಯಾಸಾಚ್ಛರ್ದಿನಿಶ್ವಾಸನಿಗ್ರಹಾತ್ ||
ವಾಯುರ್ವೃದ್ಧಃ ಕಫಂ ಯೋನಿಮುಪನೀಯ ಪ್ರದೂಷಯೇತ್ ||೧೯||

ಪಾಂಡುಂ ಸತೋದಮಾಸ್ರಾವಂ ಶ್ವೇತಂ ಸ್ರವತಿ ವಾ ಕಫಮ್ ||
ಕಫವಾತಾಮಯವ್ಯಾಪ್ತಾ ಸಾ ಸ್ಯಾದ್ ಯೋನಿರುಪಪ್ಲುತಾ || ೨೦ ||

ಪಿತ್ತಲಾಯಾ ನೃಸಂವಾಸೇ ಕ್ಷವಥೂದ್ಗಾರಧಾರಣಾತ್ ||
ಪಿತ್ತಸಮ್ಮೂರ್ಚ್ಛಿತೋ ವಾಯುರ್ಯೋನಿಂ ದೂಷಯತಿ ಸ್ತ್ರಿಯಾಃ
|| ೨೧ ||

ಶೂನಾ ಸ್ಪರ್ಶಾಸಹಾ ಸಾರ್ತಿರ್ನೀಲಪೀತಮಸೃಕ್‌ಸ್ರವೇತ್ ||
ಶ್ರೋಣಿವಂಕ್ಷಣಪೃಷ್ಠಾರ್ತಿಜ್ವರಾರ್ತಾಯಾಃಪರಿಪ್ಲುತಾ ||೨೨||

ವೇಗೋದಾವರ್ತನಾದ್ ಯೋನಿಮಾವರ್ತಯತಿ ಮಾರುತಃ ||
ಸಾ ರುಗಾರ್ತಾ ರಜಃ ಕೃಚ್ಛ್ರೇಣೋದಾವೃತ್ಯ ವಿಮುಂಚತಿ || ೨೩ ||

ಆರ್ತವೇ ಯಾ ವಿಮುಕ್ತೇ ತು ತತ್ಕ್ಷಣಂ ಲಭತೇ ಸುಖಮ್ ||
ರಜಸೋ ಗಮನಾದೂರ್ಧ್ವಂ ಜ್ಞೇಯೋದಾವರ್ತಿನೀ ಬುಧೈಃ || ೨೪ ||

ಅಕಾಲೇ ವಾಹಮಾನಾಯಾ ಗರ್ಭೇಣ ಪಿಹಿತೋಽನಿಲಃ ||
ಕರ್ಣಿಕಾ ಜನಯೇದ್ ಯೋನೌ ಶ್ಲೇಷ್ಮರಕ್ತೇನ ಮೂರ್ಚ್ಛಿತಃ ||೨೫||

ರಕ್ತಮಾರ್ಗವಿರೋಧಿನ್ಯಾ ತಯಾ ಕರ್ಣಿಕಯಾನ್ವಿತಾ ||
ಸಾ ಯೋನಿಃ ಸರ್ವಭಿಷಜಾ ನಾಮತಃ ಕರ್ಣಿನೀ ಮತಾ || ೨೬ ||

ರೌಕ್ಷ್ಯಾದ್ ವಾಯುರ್ಯದಾ ಗರ್ಭಂ ಜಾತಂಜಾತಂ ವಿನಾಶಯೇತ್ ||
ದುಷ್ಟಶೋಣಿತಜಂ ನಾರ್ಯಾಃ ಪುತ್ರಘ್ನೀನಾಮಸಾಮತಾ || ೨೭ ||

ವ್ಯವಾಯಮತಿತೃಪ್ತಾಯಾ ಭಜಂತ್ಯಾಸ್ತ್ವನ್ನಪೀಡಿತಃ ||
ವಾಯುರ್ಮಿಥ್ಯಾಸ್ಥಿತಾಂಗಾಯಾ ಯೋನಿಸ್ರೋತಸಿಸಂಸ್ಥಿತಃ || ೨೮ ||

ಯೋನೇರ್ಮುಖಂ ವಕ್ರಯತಿ ಸಾಸ್ಥಿಮಾಂಸಾನಿಲಾರ್ತಿಭಿಃ ||
ಭೃಶಾರ್ತಿರ್ಮೈಥುನಾಸಕ್ತಾ ಯೋನಿರಂತರ್ಮುಖೀ ಮತಾ || ೨೯ ||

ಗರ್ಭಸ್ಥಾಯಾಃ ಸ್ತ್ರಿಯಾ ರೌಕ್ಷ್ಯಾದ್ ವಾಯುರ್ಯೋನಿಂ ಪ್ರದೂಷಯೇತ್ ||
ಮಾತೃದೋಷಾದಣುದ್ವಾರಾಂ ಕುರ್ಯಾತ್ ಸೂಚೀಮುಖೀ ತು ಸಾ || ೩೦ ||

ವ್ಯವಾಯಕಾಲೇ ರುಂಧಂತ್ಯಾ ವೇಗಾನ್ ಪ್ರಕುಪಿತೋಽನಿಲಃ ||
ಕುರ್ಯಾದ್ ವಿಣ್ಮೂತ್ರಸಂಗಾರ್ತಾಂ ಶೋಷಂ ಯೋನಿಮುಖಸ್ಯ ಚ ||೩೧||

ಷಡಹಾತ್ ಸಪ್ತರಾತ್ರಾದ್ವಾ ಶುಕ್ರಂ ಗರ್ಭಾಶಯಂ ಗತಮ್ ||
ಸರುಜಂ ನೀರುಜಂ ವಾಪಿ ಯಾ ಸ್ರವೇತ್ ಸಾ ತು ವಾಮಿನೀ ||೩೨||

ಬೀಜದೋಷಾತ್ ತು ಗರ್ಭಸ್ಥಮಾರುತೋಪಹತಾಶಯಾ ||
ನೃದ್ವೇಷಿಣ್ಯಸ್ತನೀ ಯಾ ಸಾ ಷಂಡೀ ಸ್ಯಾದನುಪಕ್ರಮಾ || ೩೩ ||

ವಿಷಮದುಃಖಶಯ್ಯಾತಿಮೈಥುನಾತ್ ಕುಪಿತೋಽನಿಲಃ ||
ಗರ್ಭಾಶಯಸ್ಯ ಯೋನ್ಯಾಶ್ಚ ಮುಖಂ ವಿಷ್ಟಂಭಯೇತ್ ಸ್ತ್ರಿಯಾಃ || ೩೪ ||

ಅಸಂವೃತಮುಖೀ ಸಾರ್ತಿಃ ಸಫೇನಾರ್ತವವಾಹಿನೀ ||
ಮಾಂಸೋತ್ಸನ್ನಾ ಮಹಾಯೋನಿಃ ಪರ್ವವಂಕ್ಷಣಶೂಲಿನೀ ||೩೫||

ಇತ್ಯೇತೈರ್ಲ  ಃ ಪ್ರೋಕ್ತಾ ವಿಂಶತಿರ್ಯೋನಿಜಾಗದಾಃ
ನ ಶುಕ್ರಂ ಧಾರಯೇತ್ಯೇಭಿರ್ದೋಷೈರ್ಯೋನಿರುಪದ್ರುತಾ ||೩೬||
ತಸ್ಮಾದ್‌ಗರ್ಭಂ ನ ಗೃಹ್ಣಾತಿ ಸ್ತ್ರೀ ಗಚ್ಛತ್ಯಾಮಯಾನ್ ಬಹೂನ್ ||
ಗುಲ್ಮಾರ್ಶಃಪ್ರದರಾದೀಂಶ್ಚ ವಾತಾದ್ಯೈಶ್ಚಾತಿಪೀಡನಮ್ ||೩೭||

**ಅರ್ಥ—** ವಾತಪ್ರಕೃತಿಯುವಳು ವಾತದ ಆಹಾರವಿಹಾರಗಳನ್ನು ಮಾಡಲು ವಾತವು ಹೆಚ್ಚಾಗಿ, ಯೋನಿಯನ್ನು ಸೇರಿ, ಅದರಲ್ಲಿ ಚುಚ್ಚುವಿಕೆ, ನೋವು || ೭ || ಶಟಿ, ಇರುವು ಹರಿದಾಡಿದಂತೆ ಆಗೋಣ, ಬಿರಸುತನ, ಸ್ಪರ್ಶಜ್ಞಾನಶೂನ್ಯತೆ, ಶ್ರಮ ಮತ್ತು ವಾತದ ಬೇರೆಬೇರೆ ರೋಗಗಳನ್ನು ಉಂಟುಮಾಡುತ್ತದೆ. || ೮ || ಇದರಲ್ಲಿ ಆರ್ತವವು ಬರುವಾಗ ಶಬ್ದ, ನೋವು ಉಂಟಾಗುವದು. ಮತ್ತು ಅದು ಸ್ವಲ್ಪ ಬುರುಗುಬುರುಗು ಮತ್ತು ರೂಕ್ಷ ವಿರುವದು. ಇದು ವಾತದೂಷಿತ ಯೋನಿಯು. ಉಪ್ಪು, ಖಾರ, ಹುಳಿ, ಕ್ಷಾರ ಮುಂತಾದವುಗಳ ಸೇವನೆಯಿಂದ ಪಿತ್ತಜಯೋನಿ ರೋಗವುಂಟಾಗು ತ್ತದೆ. ||೯|| ಇದರಲ್ಲಿ ದಾಹ, ಪಾಕ, ಜ್ವರ, ಕಾವುಗಳು ಇದ್ದು, ಆರ್ತವದ ಬಣ್ಣವು ನೀಲ–ಹಳದಿ–ಕಪ್ಪು ಇರುವದಲ್ಲದೆ, ಸ್ರಾವವು ಬಹಳ ಹೊಲಸು ನಾರುವದು. ಇದು ಪಿತ್ತದೂಷಿತ ಯೋನಿಯು. ||೧೦|| ಕಫಕಾರಕ ದ್ರವ್ಯಗಳಿಂದ ಹೆಚ್ಚಾದ ಕಫವು ಸ್ತ್ರೀಯರ ಯೋನಿಯನ್ನುದುಷ್ಟಮಾಡುವದು. ಅದರಲ್ಲಿ ಜಿಗಟುತನ, ಶೈತ್ಯ, ತುರಿಕೆ, ಬಿಳೀ ಬಣ್ಣಗಳಿರುವವು. ವೇದನೆ ಯಿರುವದಿಲ್ಲ. ||೧೧|| ಬಿಳೀ ಜಿಗಟು ಆರ್ತವವನ್ನು ಸ್ರವಿಸುತ್ತದೆ. ಇದು ಕಫದೂಷಿತಯೋನಿಯು ಎಲ್ಲ ರಸಗಳನ್ನು ತಿನ್ನುವ ಸ್ತ್ರೀಯಳಯೋನಿ ಗರ್ಭಾ ಶಯಗಳಲ್ಲಿರುವ ಮೂರು ದೋಷಗಳು ಯೋನಿಯನ್ನು ದೂಷಿಸಿ, ||೧೨|| ಅದರಲ್ಲಿ ತಮ್ಮ ಲಕ್ಷಣಗಳನ್ನುಂಟುಮಾಡುತ್ತವೆ. ಅದರಲ್ಲಿ ದಾಹ–ಶೂಲಿ ಗಳಿರುವವು. ಬಿಳೀ, ಜಿಗಟು ಆರ್ತವವನ್ನು ಸ್ರವಿಸುವವು. ಇದು ಸನ್ನಿ ಪಾತದೂಷಿತಯೋನಿಯು. ||೧೩|| ಪಿತ್ತ ಮತ್ತು ರಕ್ತವನ್ನುಂಟುಮಾಡುವ ಆಹಾರವನ್ನು ತಿನ್ನುವ ಸ್ತ್ರೀಯಳ ರಕ್ತವು ಪಿತ್ತದಿಂದ ದೂಷಿತವಾಗಿ, ಗರ್ಭವು ನಿಂತರೂ ಯೋನಿಯಿಂದ ಅತಿಶಯ ಆರ್ತವಸ್ರಾವವಾಗುವದು. ಅದು ರಕ್ತಯೋನಿಯು. ||೧೪|| ಯೋನಿ ಗರ್ಭಾಶಯಗಳಲ್ಲಿದ್ದ ದುಷ್ಟ ಪಿತ್ತವು ರಕ್ತವನ್ನು ದೂಷಿಸಿದರೆ, ಆ ಯೋನಿಯಲ್ಲಿ ಆರ್ತವವು ಇರುವದಿಲ್ಲ. ಅದು ಕೃಶತ್ವ ವಿವರ್ಣತೆಗಳನ್ನುಂಟುಮಾಡುತ್ತದೆ. ಇದು ' ಅನಾರ್ತವಾ ಯೋನಿಯು. ' ||೧೫|| ತೊಳೆಯದೇ ಇರುವದರಿಂದ ಯೋನಿಯಲ್ಲಿ ಕ್ರಿಮಿ

ಗಳುಂಟಾಗಿ ತಿಂಡಿಯನ್ನುಂಟುಮಾಡುತ್ತವೆ. ಆ ತಿಂಡಿಯಿಂದ ಅವಳು ಅತಿ ಮೈಥುನವನ್ನು ಅಪೇಕ್ಷಿಸುವಳು. ಇದು ' ಅಚರಣಾ ಯೋನಿಯು ' ||೧೬|| ಅತಿ ಮೈಥುನದಿಂದ ಅತಿ ಸಣ್ಣ ಹುಡಿಗೆಯ ಯೋನಿಯನ್ನು ವಾಯುವು ದೂಷಿಸಿ, ಬೆನ್ನು—ಟೊಂಕ—ತೊಡೆ—ವಂಕ್ಷಣ (ಗೆಜ್ಜಿ) ಗಳಲ್ಲಿ ನೋವನ್ನುಂಟು ಮಾಡುವದು. ಇದಕ್ಕೆ 'ಪ್ರಾಕ್‌ಚರಣ' ಎಂಬ ಹೆಸರು. ||೧೮|| ಗರ್ಭಿಣಿ ಸ್ತ್ರೀಯು ಕಫವನ್ನುಂಟುಮಾಡುವ ಆಹಾರವನ್ನು ಆಗಾಗ್ಗೆ ತಿನ್ನುವದರಿಂದ ವಾಂತಿ ಮತ್ತು ನಿಃಶ್ವಾಸಗಳನ್ನು ತಡೆಯುವದರಿಂದ ಹೆಚ್ಚಾದ ವಾಯುವು ಕಫವನ್ನು ಯೋನಿಗೆ ತಂದು ಅದನ್ನು ದೂಷಿಸುವದು. ||೧೯|| ಅದರಿಂದ ನಸುಗೆಂಪಾದ, ನೋವುಳ್ಳ ಸ್ರಾವವನ್ನು ಅಥವಾ ಬಿಳುಪಾದ ಕಫವನ್ನು ಸ್ರವಿಸುವದು. ಇದರಲ್ಲಿ ಕಫ ವಾತಗಳ ವಿಕಾರವಿರುವದು. ಈ ಯೋನಿಗೆ 'ಉಪಪ್ಲುತಾ' ಎಂಬ ಹೆಸರು. ||೨೦|| ಮೈಥುನ ಕಾಲದಲ್ಲಿ ಸೀನು, ತೇಗುಗಳ ಕಡೆಯಿಂದ ಪಿತ್ತಪ್ರಕೃತಿಯ ಸ್ತ್ರೀಯಳ ಯೋನಿಯನ್ನು ಪಿತ್ತ ಕೂಡಿದ ವಾಯುವು ಕೆಡಿಸುವದು. ||೨೧|| ಈ ಯೋನಿಯಲ್ಲಿ ಸ್ಪರ್ಶ ಸಹನವಾಗದು. ನೋವಿರುವದು. ಮತ್ತು ನೀಲ—ಹಳದಿ ಆರ್ತವ ಸ್ರವಿಸು ವದು. ತಿಗ, ವಂಕ್ಷಣ (ಗೆಜ್ಜೆ), ಬೆನ್ನುಗಳಲ್ಲಿ ನೋವು ಮತ್ತು ಜ್ವರ ಇರು ವದು. ಇದಕ್ಕೆ 'ಪರಿಪ್ಲುತಾ' ಎಂಬ ಹೆಸರು. ||೨೨|| ವೇಗವನ್ನು ತಡೆಯು ವದರಿಂದ ವಾಯುವು ಯೋನಿಯನ್ನು ಮೇಲಕ್ಕೆ ಎತ್ತುವದು. ಆದರಲ್ಲಿ ನೋವು ಇರುವದು. ಒಳ್ಳೆ ಕಷ್ಟದಿಂದ ಆರ್ತವವನ್ನು ಬಿಡುವದು. ||೨೩|| ಆರ್ತವ ಸ್ರಾವವಾಗಲು ಕೂಡಲೇ ಆರಾಮುವೆನಿಸುವದು. ಇದರಲ್ಲಿ ರಜಸ್ಸು ಮೇಲಕ್ಕೆ ತಿರುಗುವದರಿಂದ ಇದಕ್ಕೆ 'ಉದಾವರ್ತಿನೀ' ಎಂದು ಪಂಡಿತರು ಕರೆಯುತ್ತಾರೆ. ||೨೪|| ಬೇನೆ (ಆವಿ)ಗಳುಂಟಾಗದೆ ಅಕಾಲದಲ್ಲಿ ತಿಣಕುವ ಗರ್ಭಿಣಿಯ ಗರ್ಭದಿಂದ ಮುಚ್ಚಲ್ಪಟ್ಟ ಕಫರಕ್ತದಿಂದ ಕೂಡಿದ ವಾಯುವು ||೨೫|| ಯೋನಿಯಲ್ಲಿ ರಕ್ತಮಾರ್ಗವನ್ನು ಪ್ರತಿಬಂಧಿಸುವ ಒಂದು ಗಂಟಿ ನ್ನುಂಟುಮಾಡುತ್ತದೆ. ಆದಕ್ಕೆ ಎಲ್ಲ ವೈದ್ಯರು 'ಕರ್ಣಿನೀ' ಎಂದು ಕರೆಯು ವರು. ||೨೬|| ವಾಯುವಿನಲ್ಲಿ ರುಕ್ಷತೆಯು ಹೆಚ್ಚಾಗಿ ಸ್ತ್ರೀಯ ದುಷ್ಟ ರಕ್ತ ದಿಂದುಂಟಾದ ಗರ್ಭವನ್ನು ಮೇಲಿಂದ ಮೇಲೆ ನಾಶಮಾಡುತ್ತದೆ. ಅವಳ ಯೋನಿಗೆ 'ಪುತ್ರಘ್ನೀ' ಎಂದು ಹೆಸರು. ||೨೭|| ಬಹಳ ಊಟಮಾಡಿ ಪುರುಷ ಸಂಗವನ್ನು ಮಾಡುವ, ಶರೀರವನ್ನು ಸಮವಾಗಿ ಇಡದ ಸ್ತ್ರೀಯು ಅನ್ನದಿಂದ ಪೀಡಿತವಾದ ಯೋನಿಮಾರ್ಗದಲ್ಲಿಯ ವಾಯುವು ||೨೮||

ಯೋನಿಯ ಮುಖವನ್ನು ಡೊಂಕು ಮಾಡುವದು. ಅಸ್ಥಿಮಾಂಸಗಳಲ್ಲಿ ವಾತದ ವೇದನೆಯುಂಟಾಗುವದು. ಪುರುಷ ಸಂಗಕಾಲದಲ್ಲಿ ಬಹಳ ವೇದನೆಯಾಗುವದು. ಆ ಯೋನಿಗೆ 'ಅಂತರ್ಮುಖೀ' ಎಂದು ಹೆಸರು. ||೨೯|| ತಾಯಿಯ ಅಪಥ್ಯದಿಂದ ಕುಪಿತವಾದ ವಾಯುವು ರುಕ್ಷತೆಯಿಂದ ಗರ್ಭದಲ್ಲಿದ್ದ ಹೆಣ್ಣು ಹುಡಿಗೆಯ ಯೋನಿಯನ್ನು ದೂಷಿಸಿ ಅದರ ದ್ವಾರವನ್ನು ಸಣ್ಣದಾಗಿ ಮಾಡುತ್ತದೆ. ಇದಕ್ಕೆ ' ಸೂಚೀಮುಖಿ ' ಎಂದು ಹೆಸರು. ||೩೦|| ಪುರುಷ ಸಂಗ ಕಾಲದಲ್ಲಿ ಮಲಮೂತ್ರ ವೇಗಗಳನ್ನು ತಡೆಯುವ ಸ್ತ್ರೀಯ ವಾತವು ಕುಪಿತವಾಗಿ, ಮಲಮೂತ್ರಗಳ ಪ್ರತಿಬಂಧವನ್ನೂ ಯೋನಿಮುಖದ ಶೋಷವನ್ನೂ ಉಂಟುಮಾಡುವದು. ಅದಕ್ಕೆ 'ಶುಷ್ಕಾ' ಎಂದು ಹೆಸರು ||೩೧|| ಯಾವದು ಗರ್ಭಾಶಯವನ್ನು ಮುಟ್ಟಿದ ಶುಕ್ರವನ್ನು ಆರು ಅಥವಾ ಏಳು ದಿವಸಕ್ಕೆ ವೇದನೆಯಾಗಿ ಅಥವಾ ಆಗದಲೆ ಸ್ರವಿಸುವದೊ ಆ ಯೋನಿಯು 'ವಾಮಿನಿ' ||೩೨|| ಬೀಜದ ದೋಷದಿಂದ ಗರ್ಭದಲ್ಲಿ ಇದ್ದಾಗಯೇ ಯಾವಳ ಗರ್ಭಾಶಯವು ವಾತದಿಂದ ನಾಶವಾಗಿದೆಯೋ, ಪುರುಷಸಂಗವನ್ನು ದ್ವೇಷಿಸುವವಳೊ, ಸ್ತನಗಳು ಇರುವದಿಲ್ಲವೊ ಆಕೆಯ ಯೋನಿಗೆ 'ಷಂಡೀ' ಎಂಬ ಹೆಸರು. ಅದಕ್ಕೆ ಚಿಕಿತ್ಸೆ ಇಲ್ಲ. ||೩೩|| ಸರಿಯಾಗಿ ಇಲ್ಲದ, ದುಃಖಕರ ಹಾಸಿಗೆಯಲ್ಲಿ ಸಿಕ್ಕಂತೆ ಪುರುಷಸಂಗವನ್ನು ಮಾಡುವದರಿಂದ ಕುಪಿತವಾದ ವಾಯುವು ಸ್ತ್ರೀಯಳ ಗರ್ಭಾಶಯ ಮತ್ತು ಯೋನಿಯ ಮುಖವನ್ನು ಸ್ತಬ್ಧ ಮಾಡುವದು. ||೩೪|| ಯೋನಿಯ ಮುಖವು ಮುಚ್ಚದೆ ಹಾಗೇ ಉಳಿಯುವದು. ನೋವು ಬುರುಗುಗಳುಳ್ಳ ಆರ್ತವವನ್ನು ಸ್ರವಿಸುವದು. ಅದಕ್ಕೆ 'ವಿವೃತಾ' ಎಂದು ಹೆಸು. ಯೋನಿಯ ಮಾಂಸವು ಮೇಲಕ್ಕೆ ಎದ್ದು ಬಂದಿದ್ದು, ಸಂಧಿ ಮತ್ತು ಗೆಜ್ಜೆಗಳಲ್ಲಿ ಶೂಲವಿದ್ದರೆ ಅದಕ್ಕೆ 'ಮಹಾಯೋನಿ' ಎಂಬ ಹೆಸರು. ||೩೫|| ಈ ಪ್ರಕಾರ ೨೦ ಯೋನಿಗಳ ಲಕ್ಷಣಗಳು ಹೇಳಲ್ಪಟ್ಟವು. ಈ ರೋಗಗಳಿಂದ ಪೀಡಿತರಾದವರು ಶುಕ್ರಧಾರಣವನ್ನು ಮಾಡಲು ಅಸಮರ್ಥರಾಗುವರು. ||೩೬|| ಆದ್ದರಿಂದ ಅವರು ಗರ್ಭಧರಿಸರು; ಗುಲ್ಮ, ಮೂಲವ್ಯಾಧಿ ಪ್ರದರ ಮುಂತಾದ ಬಹಳ ರೋಗಗಳನ್ನೂ ವಾತದ ಪೀಡೆಯನ್ನೂ ಹೊಂದುವರು. ||೩೭||

**ಈ ಯೋನಿಗಳ ಚಿಕಿತ್ಸಾ ತತ್ವವನ್ನೂ ವಿಶೇಷ ಚಿಕಿತ್ಸೆಯನ್ನೂ ಹೇಳುತ್ತಾರೆ-**

**ಆಸಾಂ ಷೋಡಶ ಯಾಸ್ತ್ವಂತ್ಯಾ ಆದ್ಯೇ ದ್ವೇ ಪಿತ್ತದೋಷಜೇ ||**
**ಪರಿಪ್ಲುತಾ ವಾಮಿನೀ ಚ ವಾತಪಿತ್ತಾತ್ಮಿಕೇ ಮತೇ ||೩೮||**

ಕರ್ಣಿನ್ಯುಪಪ್ಲುತೇ ವಾತಕಫಾತ್ ಶೇಷಾಸ್ತು ವಾತಜಾಃ ||
ದೇಹಂ ವಾತದಯಸ್ತಾಸಾಂ ಸ್ವೈರ್ಲಿಂಗೈಃ ಪೀಡಯಂತಿ ಹಿ ||೩೯||

ಸ್ನೇಹನಸ್ವೇದಬಸ್ತ್ಯಾದಿ ವಾತಜಾಸ್ವನಿಲಾಪಹಮ್ ||
ಕಾರಯೇತ್ ರಕ್ತಪಿತ್ತಘ್ನಂ ಶೀತಂ ಪಿತ್ತಕೃತಾಸು ಚ ||೪೦||

ಶ್ಲೇಷ್ಮಜಾಸು ತು ರೂಕ್ಷೋಷ್ಣಂ ಕರ್ಮ ಕುರ್ಯಾದ್ವಿಚಕ್ಷಣಃ ||
ಸನ್ನಿಪಾತೇ ವಿಮಿಶ್ರಂ ತು ಸಂಸೃಷ್ಟಾಸು ಚ ಕಾರಯೇತ್ ||೪೧||

ಸ್ನಿಗ್ಧಸ್ವಿನ್ನಾಂ ತಥಾ ಯೋನಿಂ ದುಃಖಿತಾಂ ಸ್ಥಾಪಯೇತ್ಪುನಃ ||
ಪಾಣಿನಾ ನಾಮಯೇಜ್ಜಿಹ್ಮಾಂ ಸಂವೃತಾಂ ವರ್ಧಯೇತ್ಪುನಃ ||೪೨||

ಪ್ರವೇಶನ್ನಿಃಸೃತಾಂ ಚ ವಿವೃತಾಂ ಪರಿವರ್ತಯೇತ್ ||
ಯೋನಿಃ ಸ್ಥಾನಾಪವೃತ್ತಾ ಹಿ ಶಲ್ಯಭೂತಾ ಮತಾ ಸ್ತ್ರಿಯಾಃ ||೪೩||

ಸರ್ವಾಂ ವ್ಯಾಪನ್ನಯೋನಿಂ ತು ಕರ್ಮಭಿರ್ವಮನಾದಿಭಿಃ ||
ಮೃದುಭಿಃ ಪಂಚಭಿರ್ನಾರೀಂ ಸ್ನಿಗ್ಧಸ್ವಿನ್ನಾಮುಪಾಚರೇತ್ ||೪೪||

ಸರ್ವತಃ ಸುವಿಶುದ್ಧಾಯಾಃ ಶೇಷಂ ಕರ್ಮ ವಿಧೀಯತೇ ||
ವಾತವ್ಯಾಧಿಹರಂ ಕರ್ಮ ವಾತಾರ್ತಾನಾಂ ಸದಾ ಹಿತಮ್ ||೪೫||
ಔದಕಾನೂಪಜೈರ್ಮಾಂಸೈಃ ಕ್ಷೀರೈಃ ಸತಿಲತಂಡುಲೈಃ ||
ಸವಾತಘ್ನೌಷಧೈರ್ನಾಡೀ ಕುಂಭೀಸ್ವೇದೈರುಪಾಚರೇತ್ ||೪೬||
ಆಕ್ರಾಂ ಲವಣತೈಲೇನ ಸಾಶ್ಮಪ್ರಸ್ತರಸಂಕರೈಃ ||
ಸ್ವಿನ್ನಾಮುಷ್ಣಾಂಬುಸಿಕ್ತಾಂಗೀಂ ವಾತಘ್ನೈರ್ಭೋಜಯೇದ್ ರಸೈಃ
||೪೭||

**ಅರ್ಥ—** ಇವುಗಳಲ್ಲಿ ಕಡೆಯ ಹದಿನಾರು ರೋಗಗಳಲ್ಲಿ ಮೊದಲಿನ 'ರಕ್ತಯೋನಿ' ಮತ್ತು 'ಅರಜಸ್ಕ' ಇವು ಎರಡು ರೋಗಗಳು ಪಿತ್ತಜನ್ಯವಾಗಿವೆ. 'ಪರಿಪ್ಲುತ' ಮತ್ತು 'ವಾಮಿನೀ' ಇವೆರಡು ವಾತಪಿತ್ತಜನ್ಯಗಳು. ||೩೮|| 'ಕರ್ಣಿನೀ' ಮತ್ತು 'ಉಪಪ್ಲುತ' ಇವು ವಾತಕಫದಿಂದ ಉಳಿದ ಹದಿನಾಲ್ಕು ವಾತದಿಂದ ಉಂಟಾಗುತ್ತವೆ. ವಾತಾದಿ ದೋಷಗಳು ತಮ್ಮ ಗುಣದಿಂದ ಇವರ ದೇಹವನ್ನು ಪೀಡಿಸುತ್ತವೆ. ||೩೯|| ಆದ್ದರಿಂದ ವಾತಜ ಯೋನಿರೋಗಗಳಲ್ಲಿ ಸ್ನೇಹನ, ಸ್ವೇದ ಬಸ್ತಿ ಮುಂತಾದ ವಾತನಾಶಕ ಚಿಕಿತ್ಸೆಯನ್ನೂ ಪಿತ್ತಜ ಯೋನಿ ರೋಗಗಳಲ್ಲಿ ರಕ್ತಪಿತ್ತನಾಶಕ ಶೀತ ಉಪಚಾರವನ್ನೂ ||೪೦|| ಕಫಜ ಯೋನಿರೋಗಗಳಲ್ಲಿ ರುಕ್ಷ, ಉಷ್ಣ, ಉಪಚಾರ

ವನ್ನು ಪಂಡಿತನು ಮಾಡಬೇಕು. ಸನ್ನಿಪಾತಜ ರೋಗಗಳಲ್ಲಿ ಮತ್ತು ಸಂಸರ್ಗ ರೋಗಗಳಲ್ಲಿ ಮಿಶ್ರ ಉಪಚಾರವನ್ನು ಮಾಡಬೇಕು. ||೪೧|| ಸ್ಥಾನದಿಂದ ಸರಿದ ಯೋನಿಯನ್ನು ಸ್ನೇಹ, ಸ್ವೇದ ಕೊಟ್ಟು ಪುನಃ ಸರಿಯಾಗಿ ಕೂಡಿಸಬೇಕು. ಡೊಂಕವಾದದ್ದನ್ನೇ ಕೈಯಿಂದ ಕೆಳಗೆ ಸರಿಸಿ ಸರಳ ಮಾಡಬೇಕು. ಸಂಕುಚಿತವಾದದ್ದನ್ನು ವಿಸ್ತರಿಸಬೇಕು. ||೪೨|| ಹೊರಗೆ ಬಂದದ್ದನ್ನು ಒಳಗೆ ಸರಿಸಬೇಕು. ವಿವೃತ ಯೋನಿಯನ್ನು ಸಂಕುಚಿತ ಮಾಡಬೇಕು. ಯೋನಿಯು ಸ್ಥಾನಬಿಟ್ಟು ಸರಿದರೆ ಅದು ಹೆಂಗಸಿಗೆ ಶಲ್ಯವೇ ಆಗುವದು. ||೪೩|| ಎಲ್ಲ ಯೋನಿರೋಗಗಳಲ್ಲಿ ಸ್ತ್ರೀಯರಿಗೆ ಸ್ನೇಹ ಸ್ವೇದಕೊಟ್ಟು ವಮನ ಮುಂತಾದ ಪಂಚಕರ್ಮಗಳಿಂದ ಉಪಚರಿಸಬೇಕು. ||೪೪|| ಒಳಹೊರಗೆ ಶುದ್ಧಿಯಾದನಂತರ ಉಳಿದ ಚಿಕಿತ್ಸೆಯನ್ನು ಮಾಡಬೇಕು. ವಾತದಿಂದ ಪೀಡಿತರಾದವರಿಗೆ ವಾತನಾಶಕವಾದ (ಮುಂದೆಹೇಳಿದ) ಚಿಕಿತ್ಸೆಯನ್ನು ಮಾಡಬೇಕು. ||೪೫|| ನೀರಿನಲ್ಲಿರುವ ಅಥವಾ ಮಲೆನಾಡಿನಲ್ಲಿರುವ ಪ್ರಾಣಿಗಳ ಮಾಂಸದಿಂದ ಅಥವಾ ಎಳ್ಳು, ಅಕ್ಕಿ ಹಾಕಿ ಕುದಿಸಿದ ಅಥವಾ ವಾತನಾಶಕ ಔಷಧ ಹಾಕಿ ಕುದಿಸಿದ ಹಾಲುಗಳಿಂದ ನಾಡೀಸ್ವೇದ ಕುಂಭೀ ಸ್ವೇದಗಳನ್ನು ಮಾಡಬೇಕು. ||೪೬|| ಸೈಂಧವಲವಣ ಹಾಕಿದ ತೈಲದಿಂದ ಲೇಪಮಾಡಿ, ಅಶ್ಮಸ್ವೇದ, ಪ್ರಸ್ಥರಸ್ವೇದ, ಸಂಕರ ಸ್ವೇದಗಳನ್ನು ಕೊಟ್ಟು, ಬಿಸಿನೀರಿನ ಪರಿಷೇಕ ಮಾಡಿಸಿ, ವಾತನಾಶಕ ಮಾಂಸರಸಗಳನ್ನು ತಿನ್ನಿಸಬೇಕು. ||೪೭||

ಬಲಾತೈಲವನ್ನು ಹೇಳುತ್ತಾರೆ—

**ಬಲಾದ್ರೋಣದ್ವಯಕ್ವಾಥೇ ಘೃತತೈಲಾಢಕಂ ಪಚೇತ್ ||**
**ಸ್ಥಿರಾಪಯಸ್ಯಾಜೀವಂತೀವೀರರ್ಷಭಕಜೀವಕೈಃ ||೪೮||**

**ಶ್ರಾವಣೀಪಿಪ್ಪಲೀಮೂಲಪೀಲುಮಾಷಾಖ್ಯಪರ್ಣಿಭಿಃ ||**
**ಶರ್ಕರಾಕ್ಷೀರಕಾಕೋಲಿ-ಕಾಕನಾಸಾಭಿರೇವ ಚ ||೪೯||**

**ಪಿಷ್ಟೈಶ್ಚ ತುರ್ಗುಣಕ್ಷೀರೇ ಸಿದ್ಧಂ ಪೇಯಂ ಯಥಾಬಲಂ ||**
**ವಾತಪಿತ್ತಕೃತಾನ್ ರೋಗಾನ್ ಹತ್ವಾ ಗರ್ಭಂ ದದಾತಿ ತತ್ ||೫೦||**

**ಅರ್ಥ—** ಕಳ್ಳಂಗಡ್ಲೆ ೨೦೪೮ ತೊಲಿ ತಕ್ಕೊಂಡು ೮ ದ್ರೋಣ ನೀರಿನಲ್ಲಿ ಕುದಿಸಿ, ನಾಲ್ಕನೇ ಪಾಲು ಉಳಿಯಲು ಅದರಲ್ಲಿ ಒಂದೆಲೆಹೊನ್ನೆ ಹಾಲ

ನೆಲಗುಂಬಳ, ಜೀವಂತೀ, ಕಾಕೋಲಿ, ಋಷಭಕ, ಜೀವಕ ||೪೮|| ಮುಂಡಿ, ಮೋಡಿ, ಹೆಗ್ಗೋರಟಿಗೆ, ಅಡವೀಉದ್ದು, ಸಕ್ಕರೆ, ಕ್ಷೀರಕಾಕೋಲಿ, ಕಾಕನಾಸ (ಕಾಕೇಗಿಡ) ಇವುಗಳ ಕಲ್ಕವನ್ನು ಸ್ನೇಹದ ನಾಲ್ಕನೇ ಪಾಲು ಹಾಕಿ ||೪೯|| ಘೃತ ತೈಲಗಳನ್ನು ಪ್ರತ್ಯೇಕವಾಗಿ ೧೬ಲ ತೊಲಿ, ಅವುಗಳ ೪ ಪಾಲು ಹಾಲು ಕೂಡಿಸಿ ಸ್ನೇಹವನ್ನು ಸಿದ್ಧಮಾಡಿ, ಯಥಾಶಕ್ತಿ ಕುಡಿಯಬೇಕು. ಇದು ವಾತಪಿತ್ತಜ ರೋಗಗಳನ್ನು ಕಳೆದು, ಗರ್ಭವನ್ನು ಕೊಡುತ್ತದೆ. ||೫೦||

ಕಾಶ್ಮರ್ಯಾದಿ ಘೃತವನ್ನು ಹೇಳುತ್ತಾರೆ—

**ಕಾಶ್ಮರ್ಯತ್ರಿಫಲಾದ್ರಾಕ್ಷಾಕಾಸಮರ್ದಪರೂಷಕೈಃ ||**
**ಪುನರ್ನವಾದ್ವಿರಜನೀಕಾಕನಾಸಾಸಹಾಚರೈಃ ||೫೧||**

**ಶತಾವರ್ಯಾ-ಗುಡೂಚ್ಯಾಶ್ಚ ಪ್ರಸ್ಥಮಕ್ಷಸಮೈರ್ಘೃತಾತ್ ||**
**ಸಿದ್ಧಂ ಪಿಬೇದ್ ವಾತಯೋನಿದೋಷಘ್ನಂ ಗರ್ಭದಂಪರಮ್ ||೫೨||**

**ಅರ್ಥ—** ಶಿವನಿಕ್ಕೇಕಾಯಿ, ತ್ರಿಫಳೆ, ದ್ರಾಕ್ಷೆ, ಯಲವರಿಗೆ, ಪರೂಷಕ, ಬಿಳೇಗಣಜಲಬೇರು, ಅರಿಷಿಣ, ಮರಅರಿಷಿಣ, ಕಾಕನಾಸ, ಮುಳ್ಳುಜಾಜಿ, ||೫೧|| ಶತಾವರಿ, ಅಮೃತಬಳ್ಳಿ, ಇವುಗಳ ಕಲ್ಕವನ್ನು ೧-೧ ತೊಲಿ ಹಾಕಿ ೪ ಪಾಲು ನೀರಿನಲ್ಲಿ ೧೬ಲ ತೊಲಿ ಘೃತವನ್ನು ಸಿದ್ಧಪಡಿಸಿ ಕುಡಿಯಬೇಕು. ಇದು ವಾತಯೋನಿಯ ವಿಕಾರವನ್ನು ಕಳೆದು ಗರ್ಭವನ್ನು ಕೊಡುವದು. ||೫೨||

ಪಿಪ್ಪಲ್ಯಾದಿ ಯೋಗಗಳನ್ನುಹೇಳುತ್ತಾರೆ.

**ಪಿಪ್ಪಲೀಃ ಕಿಂಶುಕಾಜಾಜಿವೃಷಕಂ ಸೈಂಧವಂ ವಚಾಮ್ ||**
**ಯವಕ್ಷಾರಾಜನೋದೇ ಚ ಶರ್ಕರಾಂ ಚಿತ್ರಕಂ ತಥಾ ||೫೩||**

**ಪಿಷ್ಟ್ವಾ ಪ್ರಸನ್ನಯಾಲೋಡ್ಯ ಘೃತಭ್ರಷ್ಟಾನಿ ದಾಪಯೇತ್ ||**
**ಯೋನಿಪಾರ್ಶ್ವಾರ್ತಿಹೃದ್ರೋಗಗುಲ್ಮಾರ್ಶೋವಿನಿವೃತ್ತಯೇ ||೫೪||**

**ವೃಷಕಂ ಮಾತುಲುಂಗಸ್ಯ ಮೂಲಾನಿ ಮದಯಂತಿಕಾಮ್ ||**
**ಪಿಬೇತ್ಸಲವಣೈರ್ಮದ್ಯೈಃ ಪಿಪ್ಪಲೀಕುಂಚಿಕೇ ತಥಾ**

**ರಾಸ್ನಾಶ್ವದಂಷ್ಟ್ರಾವೃಷಕೈಃ ಶೃತಂ ಶೂಲೇ ಪಿಬೇತ್ಪಯಃ ||**
**ಗುಡೂಚೀತ್ರಿಫಲಾದಂತೀಕ್ವಾಥೈಶ್ಚ ಪರಿಷೇಚಯೇತ್ ||೫೬||**

ಸೈಂಧವಂ ತಗರಂ ಕುಷ್ಠಂ ಬೃಹತೀದೇವದಾರು ಚ ||
ಸಮಾಂಶೈಃ ಸಾಧಿತಂ ಕಲ್ಕೈಸ್ತೈಲಂ ಧಾರ್ಯಂ ರುಜಾಪಹಮ್ ||೫೭||
ಗುಡೂಚೀಮಾಲತೀರಾಸ್ನಾಬಲಾಮಧುಕಚಿತ್ರಕೈಃ ||
ನಿದಿಗ್ಧಿಕಾಮಹಾದಾರುಯೂಥಿಕಾಭಿಶ್ಚ ಕಾರ್ಷಿಕೈಃ ||೫೮||
ತೈಲಪ್ರಸ್ಥಂ ಗವಾಂ ಮೂತ್ರೇ ಕ್ಷೀರೇ ಚ ದ್ವಿಗುಣೇ ಪಚೇತ್ ||
ವಾತಾರ್ತಾನಾಂ ಚ ಯೋನೀನಾಂ ಸೇಕಾಭ್ಯಂಗಪಿಚುಕ್ರಿಯಾಃ ||೫೯||
ವಾತಾರ್ತಾಯಾಃ ಪಿಚುಂ ದದ್ಯಾತ್ ಯೋನೌ ಚ ಪ್ರಣಯೇತ್ ತತಃ ||
ಹಿಂಸ್ರಾಕಲ್ಕಂ ತು ವಾತಾರ್ತಾ ಕೋಷ್ಣಮಭ್ಯಜ್ಯ ಧಾರಯೇತ್ ||೬೦||
ಪಂಚವಲ್ಕಸ್ಯ ಪಿತ್ತಾರ್ತಾ ಶ್ಯಾಮಾದೀನಾಂ ಕಫಾತುರಾ ||
ಪಿತ್ತಲಾನಾಂ ತು ಯೋನೀನಾಂ ಸೇಕಾಭ್ಯಂಗಪಿಚುಕ್ರಿಯಾಃ ||೬೧||
ಶೀತಾಃ ಪಿತ್ತಹರಾಃಕಾರ್ಯಾಃ ಸ್ನೇಹನಾರ್ಥಂ ಘೃತಾನಿ ಚ ||
ಪಿತ್ತಘ್ನೌಷಧಸಿದ್ಧಾನಿ ಕಾರ್ಯಾಣಿ ಭಿಷಜಾ ತಥಾ ||೬೨||

**ಅರ್ಥ—** ಹಿಪ್ಪಲಿ, ಮುತ್ತಲ, ಜೀರಿಗೆ, ಅಡಸಾಲ, ಸೈಂಧವ, ಬಜೆ, ಜವಖಾರ, ಅಜಮೋದ, ಸಕ್ಕರೆ, ಚಿತ್ರಕ ಇವುಗಳನ್ನು ||೫೩|| ಮದ್ಯದ ತಿಳಿಯಲ್ಲಿ ಅರೆದು, ತುಪ್ಪದಲ್ಲಿ ಹುರಿದು ಕೊಡಬೇಕು. ಅದು ಯೋನಿಶೂಲ, ಪಾರ್ಶ್ವಶೂಲ, ಹೃದ್ರೋಗ, ಗುಲ್ಮ, ಮೂಲವ್ಯಾಧಿಗಳನ್ನು ಕಳೆಯುವದು. ||೫೪|| ಅಡಸಲ, ಮಾದಳದ ಬೇರು, ಮಲ್ಲಿಗೆ ಇವುಗಳನ್ನು ಮದ್ಯದಲ್ಲಿ ಅರೆದು ಉಪ್ಪು ಹಾಕಿ ಕೊಡಬೇಕು. ಅದರಂತೆ ಹಿಪ್ಪಲಿ, ಕರೀ ಜೀರಿಗೆಗಳನ್ನು ಮದ್ಯದಲ್ಲಿ ಅರೆದು ಸೈಂಧವ ಉಪ್ಪು ಹಾಕಿ ಕೊಡಬೇಕು. ||೫೫|| ಯೋನಿಶೂಲಕ್ಕೆ ರಾಸ್ನೆ, ನೆಗ್ಗಿಲು, ಅಡಸಲ, ಇವುಗಳಿಂದ ಸಿದ್ಧಮಾಡಿದ ಹಾಲನ್ನು ಕುಡಿಯಬೇಕು. ಮತ್ತು ಅಮೃತಬಳ್ಳಿ, ತ್ರಿಫಳೆ, ದಂತಿಮೂಲ, ಇವುಗಳ ಕಷಾಯದಿಂದ ಯೋನಿಗೆ ಪರಿಷೇಕ ಮಾಡಬೇಕು. ||೫೬|| ಸೈಂಧವಾದ್ಯ ತೈಲ— ಸೈಂಧವ, ತಗರ, ಕೋಷ್ಠ, ಹೆಬ್ಬಗುಳ್ಳಬೇರು, ದೇವದಾರು ಇವುಗಳ ಸಮಾಂಶ ಕಲ್ಕಗಳಿಂದ ಸಿದ್ಧಮಾಡಿದ ತೈಲದ ಬತ್ತಿಯನ್ನು ಯೋನಿಯಲ್ಲಿ ಇಡಬೇಕು. ಅದು ನೋವನ್ನು ಕಳೆಯುವದು. ||೫೭|| ಗುಡೂಚ್ಯಾದಿ ತೈಲ— ಅಮೃತಬಳ್ಳಿ, ಮಲ್ಲಿಗೆ, ರಾಸ್ನೆ, ಕಳ್ಳಂಗಡ್ಲೆ, ಜೇಷ್ಠಮಧು, ಚಿತ್ರಕ, ನೆಲಗುಳ್ಳಗಜೇರು, ದೇವದಾರು, ಮಲ್ಲಿಗೆ, ಇವುಗಳ ಕಲ್ಕವನ್ನು ಪ್ರತ್ಯೇಕವಾಗಿ ೧-೧ ತೊಲಿಯನ್ನು ತಕ್ಕೊಂಡು ||೫೮|| ೨೫೬ ತೊಲಿ ಗೋಮೂತ್ರ

೨೫೬ ತೊಲಿ ಹಾಲಿನಲ್ಲಿ ಹಾಕಿ, ೧೫೬ ತೊಲಿ ತೈಲವನ್ನು ಸಿದ್ಧಮಾಡಬೇಕು. ವಾತಪೀಡಿತ ಯೋನಿಗಳಿಗೆ ಇದರಿಂದ ಪರಿಷೇಕ, ಅಭ್ಯಂಗ, ಬತ್ತಿ ಇಡೋಣ ಈ ಚಿಕಿತ್ಸೆಯನ್ನು ಮಾಡಬೇಕು. ||೫೯|| ವಾತಪೀಡಿತ ಯೋನಿಯಲ್ಲಿ ತೈಲದ ಬತ್ತಿಯನ್ನು ಇಟ್ಟು, ಉತ್ತರ ಬಸ್ತಿಯಿಂದ ಅದನ್ನು ಪ್ರವೇಶಿಸಬೇಕು. ವಾತಪೀಡಿತ ಯೋನಿಗೆ ಅಭ್ಯಂಗಮಾಡಿ, ನಸಗುನ್ನಿ ಕಲ್ಕವನ್ನು ಬೆಚ್ಚಗೆ ಮಾಡಿ ಯೋನಿಯಲ್ಲಿ ಹಿಡಿಯಬೇಕು. ||೬೦|| ಪಿತ್ತದಿಂದ ಪೀಡಿತವಾಗಿದ್ದರೆ ಪಂಚವಲ್ಕಗಳ ಕಲ್ಕವನ್ನು, ಕಫದಿಂದ ಪೀಡಿತವಾಗಿದ್ದರೆ ಕರೇತಿಗಡಿ, ಬಿಳೇ ತಿಗಡಿ, ಕಕ್ಕಿ ಮುಂತಾದ (ರೋಗಭಿಷಕ್ ದ್ವಿತಿಯಾಧ್ಯಾಯದಲ್ಲಿ ಹೇಳಿದ) ದ್ರವ್ಯಗಳ ಕಲ್ಕವನ್ನು ಯೋನಿಯಲ್ಲಿ ಧರಿಸಬೇಕು. ಪಿತ್ತದುಷ್ಟಿ ಯೋನಿ ರೋಗಗಳಲ್ಲಿ ಪಿತ್ತನಾಶಕವಾದ ಶೀತ ಪರಿಷೇಕ, ಅಭ್ಯಂಗ, ಬತ್ತಿಗಳನ್ನು ಉಪಯೋಗಿಸಬೇಕು. ||೬೧|| ಸ್ನಿಗ್ಧತೆಗಾಗಿ ಪಿತ್ತನಾಶಕ ಔಷಧಗಳಿಂದ ಸಿದ್ಧಮಾಡಿದ ಘೃತಗಳನ್ನು ವೈದ್ಯನು ಉಪಯೋಗಿಸಬೇಕು. ||೬೨||

ಶತಾವರೀ ಘೃತವನ್ನು ಹೇಳುತ್ತಾರೆ.

**ಶತಾವರೀಮೂಲ ತುಲಾಶ್ಚತಸ್ರಃ ಸಂಪ್ರಪೀಡಯೇತ್ ||**
**ರಸೇನ ಕ್ಷೀರತುಲ್ಯೇನ ಪಚೇತ್ ತೇನ ಘೃತಾಢಕಮ್ ||೬೩||**

**ಜೀವನೀಯೈಃ ಶತಾವರ್ಯಾ ಮೃದ್ವೀಕಾಭಿಃ ಪರೂಷಕೈಃ ||**
**ಪಿಷ್ಟೈಃ ಪಿಯಾಲೈಶ್ಚಾಕ್ಷಾಂಶೈರ್ದ್ವಿಯಷ್ಟಿಮಧುಕೈರ್ಭಿಷಕ್ ||೬೪||**

**ಸಿದ್ಧಶೀತೇ ಚ ಮಧುನಃ ಪಿಪ್ಪಲ್ಯಾಶ್ಚ ಪಲಾಷ್ಟಕಮ್ ||**
**ದತ್ವಾ ದಶಪಲಂ ಚಾತ್ರ ಸಿತಾಯಾಸ್ತದ್ವಿಮಿಶ್ರಿತಮ್ ||೬೫||**

**ಬ್ರಾಹ್ಮಣಾನ್ ಪ್ರಾಶಯೇತ್ ಪೂರ್ವಂ ಲಿಹ್ಯಾತ್ ಪಾಣಿತಲಂತಥಾ ||**
**ಯೋನ್ಯಸೃಕ್ ಶುಕ್ರದೋಷಘ್ನಂ ವೃಷ್ಯಂ ಪುಂಸವನಂ ಚ ತತ್ ||೬೬||**

**ಕ್ಷತಕ್ಷಯಂ ರಕ್ತಪಿತ್ತಂ ಶ್ವಾಸಂ ಕಾಸಂ ಹಲೀಮಕಮ್ ||**
**ಕಾಮಲಾಂ ವಾತರಕ್ತಂ ಚ ವಿಸರ್ಪಂ ಹೃಚ್ಛಿರೋಗ್ರಹಮ್ ||೬೭||**

**ಉನ್ಮಾದಾರತ್ಯಪಸ್ಮಾರಾನ್ ವಾತಪಿತ್ತಾತ್ಮಕಾನ್ ಜಯೇತ್ ||**
**ಶತಾವರೀಘೃತಮಿದಂ ಕೃಷ್ಣಾತ್ರೇಯೇಣ ಪೂಜಿತಮ್ ||೬೮||**

**ಏವಮೇವ ಕ್ಷೀರಸರ್ಪಿರ್ಜೀವನೀಯೋಪಸಾಧಿತಮ್ ||**
**ಗರ್ಭದಂ ಪಿತ್ತಲಾನಾಂ ಚ ರೋಗಾಣಾಂ ಸ್ಯಾದ್ ಭಿಷಗ್ ಜಿತಮ್ ||೬೯||**

**ಅರ್ಥ—** ೧೬೦೦ ತೊಲಿ ಶತಾವರೀ ಬೇರನ್ನು ಹಿಂಡಿ, ಅದರಿಂದ ಹೊರಟ ರಸದಷ್ಟೇ ಹಾಲು ಹಾಕಿ, ||೬೩|| ಅದರಲ್ಲಿ ಜೀವನೀಯಗಣ, ಶತಾವರೀ, ದ್ರಾಕ್ಷೆ, ಪರೂಷಕ, ಪಿಯಾಲ, (ಚಾರೇ ಸೊಪ್ಪು) ಇವುಗಳ ಕಲ್ಕವನ್ನು ೧-೧ ತೊಲಿ, ಜೇಷ್ಠಮಧುವಿನ ಕಲ್ಕವನ್ನು ೨ ತೊಲಿ ಕೂಡಿಸಿ, ವೈದ್ಯನು ೫೧೨ ತೊಲಿ ಘೃತವನ್ನು ಸಿದ್ಧಮಾಡಬೇಕು. ||೬೪|| ಸೋಸಿ ಆರಿಸಿ ಆಮೇಲೆ ಜೇನು ೩೨ ತೊಲಿ, ಹಿಪ್ಪಲಿಚೂರ್ಣ ೩೨ ತೊಲಿ, ಸಕ್ಕರೆ ೪೦ ತೊಲಿ ಕೂಡಿಸಬೇಕು. ||೬೫|| ಮೊದಲು ಬ್ರಾಹ್ಮಣನಿಗೆ ತಿನಿಸಿ ೧ ತೊಲೆಯಷ್ಟು ತಾನು ನೆಕ್ಕಬೇಕು. ಈ ಶತಾವರೀ ಘೃತವು ಯೋನಿರೋಗ ರಜೋದೋಷ, ಶುಕ್ರದೋಷಗಳನ್ನು ಕಳೆಯುವದು. ವೃಷ್ಯ ಮತ್ತು ಪುಂಸವನ (ಗಂಡುಮಕ್ಕಳನ್ನು ಕೊಡುವದು) ಆಗಿರುವದು. ||೬೬|| ಉರಃಕ್ಷತ, ಕ್ಷಯ, ರಕ್ತಪಿತ್ತ, ಕೆಮ್ಮು, ದಮ್ಮು, ಹಲೀಮಕ, (ಪಾಂಡುರೋಗ ಭೇದ) ಕಾಮಾಲೆ, ವಾತರಕ್ತ, ಯಿಸಬು, ಎದೆ ಹಿಡಿಯೋಣ, ತಲೆ ಹಿಡಿಯೋಣ, ||೬೭|| ವಾತಪಿತ್ತದ ಉನ್ಮಾದ, ಅರತಿ, ಅಪಸ್ಮಾರಗಳನ್ನು ಕಳೆಯುವದು. ಈ ಶತಾವರೀಘೃತವು, ಕೃಷ್ಣಾತ್ರೇಯರಿಗೆ ಮಾನ್ಯವಾಗಿದೆ, ||೬೮|| ಇದರಂತೆ ಜೀವನೀಯ ಗಣದ ಕಲ್ಕಗಳಿಂದ ಮಾಡಿದ ಹಾಲಿನಿಂದ ತೆಗೆದ ಘೃತವು ಪಿತ್ತಜ ಯೋನಿರೋಗಗಳನ್ನು ನಾಶಮಾಡಿ ಗರ್ಭವನ್ನುಂಟು ಮಾಡುವ ಔಷಧವಾಗಿದೆ. ||೬೯||

ಕಫದುಷ್ಟಯೋನಿಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಯೋನ್ಯಾಃ ಶ್ಲೇಷ್ಮಪ್ರದುಷ್ಟಾಯಾ ವರ್ತಿಃ ಸಂಶೋಧಿನೀಹಿತಾ ||**
**ವಾರಾಹೇ ಬಹುಶಃ ಪಿತ್ತೇ ಭಾವಿತೈರ್ಲಕ್ತುಕೈಃ ಕೃತಾ || ೭೦ ||**
**ಭಾವಿತಂ ಪಯಸಾರ್ಕೇಣ ಯವಚೂರ್ಣಂ ಸಸೈಂಧವಮ್ ||**
**ವರ್ತಿಃ ಕೃತಾ ಮುಹುರ್ಧಾರ್ಯಾ ತತಃ ಸೇಚ್ಯಾಸುಖಾಂಬುನಾ ||೭೧||**
**ಪಿಪ್ಪಲೀಮರಿಚೈರ್ಮಾಷೈಃ ಶತಾಹ್ವಾಕುಷ್ಠಸೈಂಧವೈಃ ||**
**ವರ್ತಿಸ್ತುಲ್ಯಾ ಪ್ರದೇಶಿನ್ಯಾ ಧಾರ್ಯಾ ಯೋನಿವಿಶೋಧಿನೀ ||೭೨||**

**ಅರ್ಥ—** ಕಫದುಷ್ಟಯೋನಿಯ ಶೋಧನಕ್ಕಾಗಿ ಅನೇಕ ಸಾರೆ ಹಂದಿಯ ಪಿತ್ತದ ಭಾವನೆಕೊಟ್ಟು ಅರಿವೆ ತುಂಡುಗಳಿಂದ ಮಾಡಿದ ಬತ್ತಿಯನ್ನು ಇಡಬೇಕು. ||೭೦|| ಎಕ್ಕೆಯ ಹಾಲಿನ ಭಾವನೆಕೊಟ್ಟು ಜವೆಯ ಹಿಟ್ಟು ಸೈಂಧವಗಳ ಬತ್ತಿಯನ್ನು ಮಾಡಿ ಕೆಲವು ವೇಳೆ ಬಿಟ್ಟು ಬಿಟ್ಟು ಯೋನಿ

ಯಲ್ಲಿ ಇಟ್ಟು ಬೆಚ್ಚಗಿನ ನೀರಿನಿಂದ ತೊಳೆಯಬೇಕು. ||೭೧|| ಹಿಪ್ಪಲಿ, ಮೆಣಸು, ಉದ್ದು, ಬಡೀಸೋಪು, ಕೋಷ್ಠ, ಸೈಂಧವ, ಇವುಗಳಿಂದ ಹೆಬ್ಬೆರಳಿನ ಹತ್ತರಿರುವ ಬೆರಳಿನಷ್ಟು ಬತ್ತಿಮಾಡಿ ಯೋನಿಯಲ್ಲಿ ಇಡಬೇಕು. ಇವು ಯೋನಿಯನ್ನು ಶುದ್ಧಮಾಡುವವು. ||೭೨||

ಉದುಂಬರಾದಿ ತೈಲವನ್ನು ಹೇಳುತ್ತಾರೆ.

**ಉಡುಂಬರಶಲಾಟೂನಾಂ ದ್ರೋಣಮಬ್‌ದ್ರೋಣಸಂಯುತಮ್ ||**
**ಸಪಂಚವಲ್ಕಕುಸಕಮಾಲತೀನಿಂಬಪಲ್ಲವಮ್ ||೭೩||**

**ನಿಶಾಂ ಸ್ಥಾಪ್ಯ ಜಲೇ ತಸ್ಮಿಂಸ್ತೈಲಪ್ರಸ್ಥಂ ವಿಪಾಚಯೇತ್ ||**
**ಲಾಕ್ಷಾಧವಪಲಾಶತ್ವಕ್‌ನಿರ್ಯಾಸೈಃ ಶಾಲ್ಮಲೇನ ಚ ||೭೪||**

**ಪಿಷ್ಟೈಃ ಸಿದ್ಧಂತು ತತ್ತೈಲಪಿಚುರ್ಯೋನೌ ರುಜಾಪಹಃ ||**
**ಸಶರ್ಕರೈಃಕಷಾಯೈಶ್ಚ ಶೀತೈಃಕುರ್ವೀತಸೇಚನಮ್ ||೭೫||**

**ಪಿಚ್ಛಿಲಾ ವಿವೃತಾ ಕಾಲದುಷ್ಟಾ ಯೋನಿಶ್ಚ ದಾರುಣಾ ||**
**ಸಪ್ತಾಹಾತ್ ಸಿಧ್ಯತಿ ಕ್ಷಿಪ್ರಮಪತ್ಯಂ ಚಾಪಿ ವಿಂದತಿ ||೭೬||**

**ಉಡುಂಬರಸ್ಯ ದುಗ್ಧೇನ ಷಟ್‌ಕೃತ್ವೋ ಭಾವಿತಾತಾ ತಿಲಾತ್ ||**
**ತೈಲಂ ಕ್ವಾಥೇನ ತಸ್ಯೈವಸಿದ್ಧಂ ಧಾರ್ಯಂಚ ಪೂರ್ವವತ್ ||೭೭||**

**ಅರ್ಥ—** ಎಳೇ ಅತ್ತೀಕಾಯಿಗಳನ್ನು ಮತ್ತು ಪಂಚವಲ್ಕ (ಆಲ ಮುಂತಾದವುಗಳ ತೊಗಟೆ) ಕುಲಕ (ಕಹಿಪಡವಲ), ಮಲ್ಲಿಗೆ, ಬೇವುಗಳ ಎಲೆಗಳನ್ನು ೧೦೨೪ ತೊಲಿ ತಕ್ಕೊಂಡು ಅದರಲ್ಲಿ ೨ ದ್ರೋಣ ನೀರುಹಾಕಿ ||೭೩|| ಒಂದು ರಾತ್ರಿ ನೆನೆಯಿಟ್ಟು, ಮುಂಜಾನೆ ಹಿಂಡಿ ಸೋಸಿ ತೆಗೆದುಕೊಂಡು ಅದರಲ್ಲಿ ಅರಗು, ಧವ (ದಿಂಡಿಲಮರ), ಮುತ್ತಲುಗಳ ತ್ವಚೆ ಮತ್ತು ಅಂಟು, ಬೂರಲ ಅಂಟುಗಳನ್ನು ೩೨ ತೊಲಿ ಹಾಕಿ ||೭೪|| ೧೨೮ ತೊಲಿ ತೈಲವನ್ನು ಸಿದ್ಧಮಾಡಿ ಅದರ ಬತ್ತಿಯನ್ನು ಯೋನಿಯಲ್ಲಿ ಇಡಬೇಕು. ಅದು ನೋವನ್ನು ಕಳೆಯುವದು ಮತ್ತು (ಹಿಂದೆ ಹೇಳಿದ) ಅತ್ತೀಕಾಯಿ, ಪಂಚವಲ್ಕಲ ಮುಂತಾದವುಗಳ ಶೀತ ಕಷಾಯದಲ್ಲಿ ಸಕ್ಕರೆ ಕೂಡಿಸಿ ಸೇಚನಮಾಡಬೇಕು. ||೭೫|| ಇದರಿಂದ ಬಹಳದಿವಸದಿಂದ ದುಷ್ಟವಾದ ಬೀಜದಮುಜ್ಜ ಪಿಚ್ಛಿಲಾ, ವಿವೃತಾ ಮುಂತಾದ ಭಯಂಕರ ಯೋನಿಗಳು ೭ ದಿನಗಳಲ್ಲಿ ಗುಣ ಹೊಂದುವವು. ಮತ್ತು ಅಪತ್ಯವನ್ನು ಪಡೆಯುವವು. ||೭೬|| ಅತ್ತಿಯ ಹಾಲಿನಿಂದ

ಆರುಸಾರೆ ಎಳ್ಳುಗಳಿಗೆ ಭಾವನೆಕೊಟ್ಟು, ಅದರಿಂದ ತೆಗೆದ ತೈಲವನ್ನು ಅತ್ತಿ ಕಷಾಯದಲ್ಲಿ ಸಿದ್ಧಮಾಡಿ ಯೋನಿಯಲ್ಲಿ ಧರಿಸಿದರೆ ಮೇಲೆ ಹೇಳಿದ ಲಾಭಗಳು ಆಗುವವು. ||೭೭||

ಧಾತಕ್ಯಾದಿ ತೈಲವನ್ನು ಹೇಳುತ್ತಾರೆ—

**ಧಾತಕ್ಯಾಮಲಕೀಪತ್ರಸ್ರೋತೋಜಮಧುಕೋತ್ಪಲೈಃ ||**
**ಜಂಬ್ವಾಮ್ರಮಧ್ಯಕಾಶೀಶಲೋಧ್ರಕಟ್‌ಫಲತಿಂದುಕೈಃ ||೭೮||**
**ಸೌರಾಷ್ಟ್ರಿಕಾದಾಡಿಮತ್ವಗುಡುಂಬರಶಲಾಟುಭಿಃ ||**
**ಅಕ್ಷಮಾತ್ರೈರಜಾಮೂತ್ರೇ ಕ್ಷೀರೇ ಚ ದ್ವಿಗುಣೇ ಪಚೇತ್ ||೭೯||**
**ತೈಲಪ್ರಸ್ಥಂ ಪಿಚುಂ ದದ್ಯಾದ್ ಯೋನೌ ಚ ಪ್ರಣಯೇತ್ತತಃ ||**
**ಕಟೀಪೃಷ್ಠತ್ರಿಕಾಭ್ಯಂಗಂ ಸ್ನೇಹಬಸ್ತಿಂ ಚ ದಾಪಯೇತ್ ||೮೦||**
**ಪಿಚ್ಛಿಲಾ ಸ್ರಾವಿಣೀ ಯೋನಿರ್ವಿಪ್ಲುತೋಪಪ್ಲುತಾ ತಥಾ ||**
**ಉತ್ತಾನಾ ಚೋನ್ನತಾ ಶೂನಾ ಸಿಧ್ಯೇತ್ ಸಸ್ಫೋಟಶೂಲಿನೀ ||೮೧||**

**ಅರ್ಥ—** ಧಾತಕಿಯ ಎಲೆ, ನೆಲ್ಲಿಯ ಎಲೆ, ಶಂಖನಾಭಿ, ಜೇಷ್ಠಮಧು, ನೀಲಕಮಲ, ನೀರಲ ಮತ್ತು ಮಾವುಗಳ ಬೀಜದ ಮಜ್ಜ, ಹಿರಾಕಸ, ಲೋಧ್ರ, ಎಲವಿಗೆ, ತಿಂದುಕ (ತುಂಬರ) ||೭೮|| ಪಟಿಕ ದಾಳಿಂಬದ ತೊಗಟೆ, ಅತ್ತಿಯ ಸಣ್ಣಕಾಯಿ, ಇವುಗಳ ಕಲ್ಕವನ್ನು ೧-೧ ತೊಲೆ ತಕ್ಕೊಂಡು ೬೪ ತೊಲೆ ಆಡಿನಮೂತ್ರ, ೬೪ ತೊಲೆ ಆಡಿನ ಹಾಲು ಹಾಕಿ ೧೨೮ ತೊಲೆ ತೈಲವನ್ನು ಸಿದ್ಧಮಾಡಬೇಕು. ||೭೯|| ಅದರ ಬತ್ತಿಯನ್ನು ಯೋನಿಯಲ್ಲಿ ಇಡಬೇಕು. ಅದರಿಂದ ತೊಂಕ, ಬೆನ್ನು, ತಿಗಗಳಿಗೆ ಅಭ್ಯಂಗ ಮಾಡಬೇಕು. ಸ್ನೇಹಬಸ್ತಿಯನ್ನು ಕೊಡಬೇಕು. ||೮೦|| ಅದರಿಂದ ಜಿಗಟುಳ್ಳ, ಸ್ರಾವವುಳ್ಳ, ಯೋನಿಗಳೂ ಉಪ್ಲುತ, ಉಪಪ್ಲುತ, ಉತ್ತಾನ, ಉನ್ನತ, ಬಾತ, ಬಕ್ಕೆ, ಶೂಲಗಳುಳ್ಳ ಯೋನಿಗಳೂ ಗುಣಹೊಂದುವವು. ||೮೧||

ಭಾವನ ಬಸ್ತಿಗಳನ್ನು ಹೇಳುತ್ತಾರೆ—

**ಕರೀರಧವನಿಂಬಾರ್ಕವೇಣುಕೋಷಾಮ್ರಜಾಂಬವೈಃ ||**
**ಜಿಂಗಿನೀವೃಷಮೂಲಾನಾಂ ಕ್ವಾಥೈರ್ಮಾರ್ಧ್ವೀಕಸೀಧುಭಿಃ ||೮೨||**
**ಸಂಶುಕ್ತೈರ್ಭಾವನಂ ಮಿಶ್ರೈರ್ಯೋನಿಸ್ರಾವನಿವಾರಣಮ್ ||**
**ಕುರ್ಯಾತ್ ಸತಕ್ರಗೋಮೂತ್ರಶುಕ್ತೈರ್ವಾ ತ್ರಿಫಲಾರಸೈಃ ||೮೩||**

**ಪಿಪ್ಪಲ್ಯಯೋರಜಃಪಥ್ಯಾಪ್ರಯೋಗಾ ಮಧುನಾಹಿತಾಃ ||**
**ಶ್ಲೇಷ್ಮಲಾಯಾಂ ಕಟುಪ್ರಾಯಾಃ ಸಮೂತ್ರಾ ಬಸ್ತಯೋಹಿತಾಃ||೮೪||**

**ಪಿತ್ತೇ ಸಮಧುರಕ್ಷೀರಾ ವಾತೇ ತೈಲಾಮ್ಲಸಂಯುತಾಃ ||**
**ಸನ್ನಿಪಾತಸಮುತ್ಥಾಯಾಃ ಕರ್ಮ ಸಾಧಾರಣಂ ಮತಮ್ ||೮೫||**

ಅರ್ಥ— ನೇಪತ್ಯ ಧವ ದಿಂಡಿಲ ಮರ, ಬೇವು, ಎಕ್ಕಿ, ಬಿದರಿನ ಅಂಕುರ, ಕೋಶಾಮ್ರ, ನೇರಿಲಗಳ ಕಷಾಯ, ಜಿಂಗಿನೀ ( ಮಂಜಿಷ್ಠಾ ) ಆಡಸಲಬೇರುಗಳ ಕಷಾಯ, ಮಾಧ್ವೀಯ ( ದ್ರಾಕ್ಷದ ಮದ್ಯ ), ಕಬ್ಬಿನ ಮದ್ಯ ||೮೨|| ಇವುಗಳನ್ನು ಕೂಡಿಸಿ ಧಾವನವನ್ನು ಮಾಡಬೇಕು. ಅದು ಯೋನಿಸ್ರಾವವನ್ನು ಕಳಿಯುವದು. ಅಥವಾ ಮಜ್ಜಿಗೆ, ಗೋಮೂತ್ರ, ಶುಕ್ತಗಳಿಂದ ಅಥವಾ ತ್ರಿಫಳಾ ರಸದಿಂದ ಯೋನಿಧಾನವನ್ನು ಮಾಡಬೇಕು. ||೮೩|| ಹಿಪ್ಪಲಿ ಚೂರ್ಣವನ್ನು ಅಥವಾ ಲೋಹಭಸ್ಮವನ್ನು ಅಥವಾ ಅಳ್ಳೀಕಾಯಿಯನ್ನು ಜೇನಿನೊಡನೆ ಪ್ರಯೋಗಿಸಬೇಕು. ಕಫಜ ಯೋನಿ ರೋಗದಲ್ಲಿ ಗೋಮೂತ್ರ ಹಾಕಿದ ಕಾರಬಸ್ತಿಗಳು ಹಿತಕರವು ||೮೪|| ಪಿತ್ತಜಯೋನಿರೋಗದಲ್ಲಿ ಮಧುಕದ್ರವ್ಯ ಮತ್ತು ಹಾಲು ಹಾಕಿದ, ವಾತಜ ಯೋನಿರೋಗದಲ್ಲಿ ತೈಲ ಮತ್ತು ಹುಳಿ ದ್ರವ್ಯ ಹಾಕಿದಬಸ್ತಿಗಳು ಹಿತಕರವು. ಸನ್ನಿವಾತಯೋನಿರೋಗದಲ್ಲಿ ಮೂರೂ ದೋಷಗಳ ಸಾಮಾನ್ಯ ಚಿಕಿತ್ಸೆ ಯನ್ನು ಮಾಡಬೇಕು. ||೮೫||

ರಕ್ತಯೋನಿ ಚಿಕಿತ್ಸೆಯನ್ನು ಹೇಳುತ್ತಾರೆ.

**ರಕ್ತಯೋನ್ಯಾಮಸೃಗ್ವರ್ಣೈರನುಬಂಧಂ ಸಮೀಕ್ಷ್ಯ ಚ ||**
**ತತಃ ಕುರ್ಯಾದ್ ಯಥಾದೋಷಂ ರಕ್ತಸ್ಥಾಪನಮೌಷಧಮ್||೮೬||**

**ತಿಲಚೂರ್ಣಂ ದಧಿಘೃತಂ ಫಾಣಿತಂ ಶೌಕರೀ ವಸಾ ||**
**ಕ್ಷೌದ್ರೇಣ ಸಂಯುತಂ ಪೇಯಂ ವಾತಾಸೃಗ್ದರನಾಶನಮ್ ||೮೭||**

**ವರಾಹಸ್ಯ ರಸೋ ಮೇಧ್ಯಃ ಸಕೌಲತ್ಥೋಽನಿಲಾಧಿಕೇ ||**
**ಶರ್ಕರಾಕ್ಷೌದ್ರಯಷ್ಟ್ಯಾಹ್ವನಾಗರೈರ್ವಾ ಯುತಂ ದಧಿ ||೮೮||**

**ಪಯಸ್ಯೋತ್ಪಲಶಾಲೂಕಂ ಬಿಸಕಾಲೀಯಕಾಂಬುದಮ್ ||**
**ಸಪಯಃ ಶರ್ಕರಾಕ್ಷೌದ್ರಮೋಕಶೋಽಸೃಗ್ದರೇ ಪಿಬೇತ್ ||೮೯||**

**ಅರ್ಥ—** ರಕ್ತದುಷ್ಟಯೋನಿಯಲ್ಲಿ ಪ್ರವಿಸುವ ರಕ್ತದ ಬಣ್ಣದಿಂದ ಯಾವ ದೋಷಗಳ ಸಂಸರ್ಗವಿದೆಯೆಂಬುದನ್ನು ಆಲೋಚಿಸಿ ಆ ದೋಷಕ್ಕೆ ಅನುಸಾರವಾಗಿ ರಕ್ತಸ್ತಂಭನ ಔಷಧವನ್ನು ಕೊಡಬೇಕು. ।೮೬॥ ಎಳ್ಳುಪುಡಿ ಮೊಸರು, ತುಪ್ಪ, ಕಾಕಂಬಿ, ಹಂದಿಯನೆಣ, ಇವರಲ್ಲಿ ಜೇನುಹಾಕಿ ಕುಡಿಯ ಬೇಕು. ಇದು ವಾತಜ ರಕ್ತ ಯೋನಿಯನ್ನು ಗುಣಪಡಿಸುವದು. ॥೮೭॥ ಅದರಂತೆ ಹುರಳೀ ಕಷಾಯದಲ್ಲಿ ಪುಷ್ಟ ಹಂದಿಯ ಮಾಂಸರಸವನ್ನು ಹಾಕಿ ವಾತಾಧಿಕ ಪ್ರದರದಲ್ಲಿ ಕೊಡಬೇಕು. ಅಥವಾ ಸಕ್ಕರೆ, ಜೇನು, ಜೇಷ್ಠ ಮಧು, ಶುಂಠಿಗಳ ಕಲ್ಕವನ್ನು ಹಾಕಿದ ಮೊಸರನ್ನೂ ।೮೮॥ ಹಾಲು, ನೆಲ ಗುಂಬಳ, ನೀಲಕಮಲ, ಶಾಲೂಕ, (ಕಮಲದಕಂದ) ಕಮಲದಪೇಟು ಕಾಲೀ ಯಕಕಾಷ್ಠ, ಜೇಕು, ಇವುಗಳಲ್ಲಿ ಒಂದೊಂದರ ಕಲ್ಕವನ್ನು ಹಾಲು, ಸಕ್ಕರೆ, ಜೇನುತುಪ್ಪದಲ್ಲಿ ಕಲಿಸಿ ವಾತಜರಕ್ತಪ್ರದರದಲ್ಲಿ ಕುಡಿಯಬೇಕು. ॥೮೯॥

ಪುಷ್ಯಾನುಗ ಚೂರ್ಣವನ್ನು ಹೇಳುತ್ತಾರೆ—

**ಪಾಠಾಜಂಬ್ವಾಮ್ರಯೋರ್ಮಧ್ಯಂ ಶಿಲೋದ್ಭೇದಂ ರಜಾಂಜನಮ್ ॥**
**ಅಂಬಷ್ಠಾ ಶಾಲ್ಮಲೀವೇಷ್ಟಂ ಸಮಂಗಾ ವತ್ಸಕತ್ವಚಂ ॥೯೦॥**

**ಬಾಹ್ಲೀಕಾತಿವಿಷೇ ಲೋಧ್ರಂ ಬಿಲ್ವಂ ಮುಸ್ತಂ ಸಗೈರಿಕಮ್ ॥**
**ಕಟ್ವಂಗಂ ಮಧುಕಂ ಶುಂಠೀ ಮೃದ್ವೀಕಾ ರಕ್ತಚಂದನಮ್ ॥೯೧॥**

**ಕಟ್ಫಲಂ ವತ್ಸಕಾನಂತಾ ಧಾತಕೀ ಮಧುಕಾರ್ಜುನಮ್ ॥**
**ಪುಷ್ಯೇಣೋಧೃತ್ಯ ತುಲ್ಯಾನಿ ಶ್ಲಕ್ಷ್ಣಚೂರ್ಣಾನಿ ಕಾರಯೇತ್ ॥೯೨॥**

**ತಾನಿ ಕ್ಷೌದ್ರೇಣ ಸಂಯುಜ್ಯ ಪಿಬೇತ್ ತಂಡುಲವಾರಿಣಾ ॥**
**ಅರ್ಶಃಸು ಚಾತಿ ಸಾರೇಷು ರಕ್ತಂ ಯಚ್ಚೋಪವೇಶ್ಯತೇ ॥೯೩॥**

**ದೋಷಾಗಂತುಕೃತಾ ಯೇ ಚ ಬಾಲಾನಾಂ ತಾಂಶ್ಚ ನಾಶಯೇತ್ ॥**
**ಯೋನಿದೋಷಂ ರಜೋದೋಷಂ ಶ್ವೇತಂ ನೀಲಂ ಸಪೀತಕಮ್ ॥೯೪॥**

**ಸ್ತ್ರೀಣಾಂ ಶ್ಯಾವಾರುಣಂ ಯಚ್ಚ ಪ್ರಸಹ್ಯಾಪಿ ನಿರ್ವರ್ತಯೇತ್ ॥**
**ಚೂರ್ಣಂ ಪುಷ್ಯಾನುಗಂ ನಾಮ ಹಿತಮಾತ್ರೇಯ ಪೂಜಿತಮ್ ॥೯೫॥**

**ಅರ್ಥ—** ಅಗಳಶುಂಠಿ, ನೀರಿಲ ಮತ್ತು ಮಾವಿನಬೀಜಗಳ ಮಜ್ಜ, ( ಪಾಷಾಣಭೇದ ), ರಸಾಂಜನ, ಅಂಬಷ್ಠೆ ( ಅಗಳಸುಂಠಿಭೇದ ) ಬೂರಲ ತೋಟೆ, ಮುಟ್ಟಲಮುರಕ, ಆಲಗತ್ತಿಯ ತೋಟೆ ॥೯೦॥ ಇಂಗು, ಕೇಶರ,

ಅತಿವಿಷ, ಲೋಧ್ರ, ಬಿಲ್ವ, ಜೇಕು, ಕಾವಿ, ಕಿಪ್ಪುರ, .ಜೇಷ್ಟಮಧು, ಸುಂಠಿ, ದ್ರಾಕ್ಷೆ, ರಕ್ತಚಂದನ. || ೯೧ || ಎಲವರಿಗೆ, ಇಂದ್ರಜವಿ, ಅನಂತ ಮೂಲ, ಧಾತಕೀಪುಷ್ಪ, ಜೇಷ್ಟಮಧು, ಮತ್ತಿಯ ತೊಗಟೆ, ಇವುಗಳನ್ನು ಪುಷ್ಯನಕ್ಷತ್ರದ ಮೇಲೆ ತೆಗೆದು ಸಮವಾಗಿ ತಕ್ಕೊಂಡು ಸಣ್ಣ ಪುಡಿಯನ್ನು ಮಾಡಬೇಕು. || ೯೨ || ಅದನ್ನು ಜೇನಿನಲ್ಲಿ ಕಲಸಿ, ಅಕ್ಕಿಯ ನೀರಿನಲ್ಲಿ ಕುಡಿಯಬೇಕು. ಇದು ಮೂಲವ್ಯಾಧಿ, ಅತಿಸಾರ, ರಕ್ತಾತಿಸಾರ. || ೯೩ || ಹುಡುಗರ ದೋಷಜ, ಆಗಂತು ರೋಗಗಳನ್ನೂ ಯೋನಿದೋಷವನ್ನೂ ಬಿಳೀ ಕಬಿ, ಹಳದಿ. || ೯೪ || ಮತ್ತು ಕಪ್ಪು, ಕೆಂಪು ಪ್ರದರಗಳನ್ನು ಬಲಾ ತ್ಕಾರದಿಂದ ಕಳೆಯುವದು. ಇದು ಆತ್ರೇಯರಿಗೆ ಮಾನ್ಯವಾದ ' ಪುಷ್ಯಾನು ' ಗವೆಂಬ ಚೂರ್ಣವು. || ೯೫ ||

ರಕ್ತಪ್ರದರದ ಬೇರೆ ಔಷಧಗಳನ್ನು ಹೇಳುತ್ತಾರೆ—

**ತಂಡುಲೀಯಕಮೂಲಂ ತು ಸಕ್ಷೌದ್ರಂ ತಂಡುಲಾಂಬುನಾ |**
**ರಸಾಂಜನಂ ಚ ಲಾಕ್ಷಾಂ ಚ ಛಾಗೇನ ಪಯಸಾ ಪಿಬೇತ್ ||೯೬||**

**ಪತ್ರಕಲ್ಕೌ ಘೃತಭೃಷ್ಟೌ ರಾಜದನಕಪಿತ್ಥಯೋಃ |**
**ಪಿತ್ತಾನಿಲಹರೌ ಪಿತ್ತೇ ಸರ್ವಥೈವಾಸ್ರಪಿತ್ತಜಿತ್ ||೯೭||**

**ಮಧುಕಂ ತ್ರಿಫಲಾ ಲೋಧ್ರಂ ಮುಸ್ತಂ ಸೌರಾಷ್ಟ್ರಿಕಾ ಮಧು**
**ಮದ್ಯೈರ್ನಿಂಬಗುಡೂಚ್ಯಾ ವಾ ಕಫಜೇಽಸೃಗ್ದರೇ ಪಿಬೇತ್ ||೯೮||**

**ವಿರೇಚನಂ ಮಹಾತಿಕ್ತಂ ಪಿತ್ತಜೇಽಸೃಗ್ದರೇ ಹಿತಮ್ |**
**ಹಿತಂ ಗರ್ಭಪರಿಸ್ರಾವೇ ಯಚ್ಚೋಕ್ತಂ ತಚ್ಚ ಕಾರಯೇತ್ ||೯೯||**

**ಕಾಶ್ಮರ್ಯಕುಟಜಕ್ವಾಥಸಿದ್ಧಮುಸ್ತರಬಸ್ತಿನಾ |**
**ರಕ್ತಯೋನ್ಯರಜಸ್ಕಾನಾಂ ಪುತ್ರಘ್ನ್ಯಾಶ್ಚ ಹಿತಂ ಘೃತಮ್ ||೧೦೦||**

**ಅರ್ಥ—** ಕೆಂಪು-ಕಿರಕಸಾಲಿಯ ಬೇರನ್ನು ಚೂರ್ಣಮಾಡಿ ಜೇನಿನೊಡನೆ ಕಲಸಿ, ಅಕ್ಕಿಯ ನೀರಿನೊಡನೆ ಕುಡಿಯಬೇಕು. ಅಥವಾ ರಸಾಂಜನ ಅಥವಾ ಅರಗು ಇವುಗಳ ಚೂರ್ಣವನ್ನು ಆಡಿನ ಹಾಲಿನೊಳಗೆ ಕೊಡಬೇಕು ||೯೬||ರಾಜಾದನ (ಹಾಲೇಮರ) ಮತ್ತು ಬೇಲದ ಇವುಗಳಕಲ್ಕವನು ತುಪ್ಪದಲ್ಲಿ ಕರಿದು ಕೊಡಬೇಕು ಇದು ವಾತ-ಪಿತ್ತವನ್ನು ಕಳೆಯುವದು ಪಿತ್ತಜ ರಕ್ತಪ್ರದರದಲ್ಲಿ ಸಂಪೂರ್ಣವಾಗಿ ರಕ್ತಪಿತ್ತ ಚಿಕಿತ್ಸೆಯನ್ನು ಮಾಡಬೇಕು.

|| ೯೭ || ಕಫಜರಕ್ತಪ್ರದರದಲ್ಲಿ ಜೇಷ್ಠಮಧು, ತ್ರಿಫಳೆ, ಲೋಧ್ರ, ಜೇನು ಪಟಿಕ ಇವುಗಳ ಚೂರ್ಣವನ್ನು ಜೇನಿನೊಳಗೆ ಕಲಸಿ, ಮದ್ಯದೊಡನೆ ಕುಡಿಯಬೇಕು. || ೯೮ || ಪಿತ್ತಜರಕ್ತಪ್ರದರದಲ್ಲಿ ವಿರೇಚನವನ್ನು ಮಹಾ ತಿಕ್ತಘೃತವನ್ನು ಕೊಡಬೇಕು. ಅಥವಾ ( ಜಾತಿಸೂತ್ರಿಯ ಅಧ್ಯಾಯದಲ್ಲಿ ಹೇಳಿದ ) ಗರ್ಭಸ್ರಾವದ ಉಪಚಾರವನ್ನು ಮಾಡಬೇಕು. || ೯೯ || ಬಿಪನ್ನೇ ಫಲ, ಹಲಗತ್ತೀ ತೊಗಟೆ, ಇವುಗಳ ಕಷಾಯದಲ್ಲಿ ಸಿದ್ಧಮಾಡಿದ ಘೃತ ವನ್ನು ಉತ್ತರಬಸ್ತಿಯಿಂದ ರಕ್ತಯೋನಿ, ಅರಜಸ್ಕಯೋನಿ, ಪುತ್ರಘ್ನಿ ಯೋನಿ ರೋಗಗಳಲ್ಲಿ ಕೊಡುವದು ಹಿತಕರವು || ೧೦೦ ||

ಬೇರೆ ಬೇರೆ ಯೋನಿರೋಗಗಳ ಚಿಕಿತ್ಸೆಯನ್ನು ಹೇಳುತ್ತಾರೆ—

ಮೃಗಜಾವಿವರಾಹಾಸೃಗ್ದಧ್ಯಮ್ಲಕ್ಷೌದ್ರಸರ್ಪಿಷಾ ।
ಅರಜಸ್ಕಾ ಪಿಬೇತ್ ಸಿದ್ಧಂ ಜೀವನೀಯೈಃ ಪಯೋಽಪಿ ವಾ ||೧೦೧||

ಕರ್ಣಿನ್ಯಚರಣಾಶುಷ್ಕಯೋನಿಪ್ರಾಕ್ ಚರಣಾಸು ಚ ।
ಕಫವಾತೇ ಚ ದಾತವ್ಯಂ ತೈಲಮುತ್ತರಬಸ್ತಿನಾ ||೧೦೨||

ಗೋಪಿತ್ತೇ ಮತ್ಸ್ಯಪಿತ್ತೇ ವಾ ಕ್ಷೌಮಂ ತ್ರಿಃಸಪ್ತಭಾವಿತಮ್ ।
ಮಧುನಾ ಕಿಣ್ವಚೂರ್ಣಂ ವಾ ದದ್ಯಾದಚರಣಾಪಹಮ್ ||೧೦೩||

ಸ್ರೋತಸಾಂ ಶೋಧನಂ ಕ್ಲೇದಶೋಥಕಂಡೂಹರಂ ಚ ತತ್
ವಾತೈಃ ಶತಪಾಕ್ಯೈಶ್ಚ ತೈಲೈಃ ಪ್ರಾಗತಿಚಾರಿಣೀ ||೧೦೪||

ಆಸ್ಥಾಪ್ಯಾ ಚಾನುವಾಸ್ಯಾ ವಾ ಸ್ವೇದ್ಯಾ ಚಾನಿಲಸೂದನೈಃ ||
ಸ್ನೇಹದ್ರವ್ಯೈಸ್ತಥಾ ಹಾರ್ಯೈರುಪನಾಹೈಶ್ಚ ಯುಕ್ತಿತಃ ||೧೦೫||

ಶತಾಹ್ವಾಯವಗೋಧೂಮ ಕಿಣ್ವ ಕುಷ್ಠ ಪ್ರಿಯಂಗುಭಿಃ ||
ಬಲಾಖುಪರ್ಣಿಕಾಶ್ರ್ಯಾಹ್ವೈ ಸಂಯಾವಾ ಧಾರಣೇ ಮತಾಃ ||೧೦೬||

ವಾಮಿನ್ಯುಪಪ್ಲುತಾನಾಂ ಚ ಸ್ನೇಹಸ್ವೇದಾದಿಕಃ ಕ್ರಮಃ ||
ಕಾರ್ಯಾಸ್ತತಃ ಸ್ನೇಹಪಿಚುಸ್ತತಃ ಸಂತರ್ಪಣಂ ಭವೇತ್ ||೧೦೭||

ಹಲ್ಲಕೀಜಿಂಗಿನೀಜಂಬೂಧವತ್ವಕ್ ಪಂಚವಲ್ಕಲೈಃ ||
ಕಷಾಯೈಃ ಸಾಧಿತಃ ಸ್ನೇಹಪಿಚುಃ ಸ್ಯಾದ್ವಿಪ್ಲುತಾಪಹಃ ||೧೦೮||

ಕರ್ಣಿನ್ಯಾಂ ವರ್ತಿಕಾಕುಷ್ಠಪಿಪ್ಪಲ್ಯರ್ಕಾಗ್ರಸೈಂಧವೈಃ ||
ಬಸ್ತಮೂತ್ರಕೃತಾ ಧಾರ್ಯಾ ಸರ್ವಂ ಚ ಶ್ಲೇಷ್ಮನುದ್ಧಿತಮ್ ||೧೦೯||

ತ್ರೈವೃತಃ ಸ್ನೇಹನಂ ಸ್ವೇದೋ ಗ್ರಾಮ್ಯಾನೂಪೌದಕಾ ರಸಾಃ ||
ದಶಮೂಲೀಪಯೋಬಸ್ತಿಶ್ಚೋದಾವರ್ತಾನಿಲಾರ್ತಿಷು ||೧೧೦||

ತ್ರೈವೃತಂ ನಾನುವಾಸ್ಯೈವ ಬಸ್ತಿರುತ್ತರಸಂಜ್ಞಕಃ ||
ಏತದೇವ ಮಹಾಯೋನ್ಯಾ ಸ್ರಸ್ತಾಯಾಂ ಚ ವಿಧೀಯತೆ ||೧೧೧||

ವರಾಹಕುಕ್ಕುಟವಸಾಘೃತಂ ಮಧುರಕೈಃ ಶೃತಮ್ ||
ಸಂಪ್ರವೇಶ್ಯ ಮಹಾಯೋನಿಂ ಬಧ್ನೀಯಾತ್ ಕ್ಷೌಮಲಕ್ತಕೈಃ ||೧೧೨||
ಪ್ರಸ್ರಸ್ತಾಂ ಸರ್ಪಿಷಾಭ್ಯಜ್ಯ ಕ್ಷೀರಸ್ವಿನ್ನಾಂ ಪ್ರವೇಶಯೇತ್ ||
ಬಧ್ನೀಯಾದ್ ವೇಶವಾರಸ್ಯ ಪಿಂಡೇನಾಮೂತ್ರಕಾಲತಃ ||೧೧೩||
ಯಚ್ಚ ವಾತವಿಕಾರಾಣಾಂ ಕರ್ಮೋಕ್ತಂ ತಚ್ಚ ಕಾರಯೇತ್ ||
ಸರ್ವವ್ಯಾಪತ್ಸು ಮತಿಮಾನ್ ಮಹಾಯೋನ್ಯಾಂ ವಿಶೇಷತಃ ||೧೧೪||
ನ ಹಿ ವಾತಾದೃತೇ ಯೋನಿರ್ನಾರೀಣಾಂ ಸಂಪ್ರದುಷ್ಯತಿ ||
ಶಮಯಿತ್ವಾ ತಮಸ್ಯಸ್ಯ ಕುರ್ಯಾದ್ ದೋಷಸ್ಯ ಭೇಷಜಮ್ ||೧೧೫||

**ಅರ್ಥ—** ಚಿಗರಿ, ಅಥವಾ ಆಡು ಅಥವಾ ಕುರಿ ಅಥವಾ ಹಂದಿ ಇವುಗಳ ರಕ್ತವನ್ನು ಹುಳಿಮೊಸರು ಅಥವಾ ಜೇನು ಅಥವಾ ತುಪ್ಪದೊಡನೆ ಕುಡಿಯಬೇಕು. ಅಥವಾ ಜೀವನೀಯಗಣದ ಕಲ್ಕದಿಂದ ಸಿದ್ಧಮಾಡಿದ ಹಾಲನ್ನು ಕುಡಿಯಬೇಕು. ಅವುಗಳಿಂದ ಅರಜಸ್ಕಯೋನಿರೋಗವು ಗುಣವಾಗುವದು. || ೧೧೧ || ಕರ್ಣಿನಿ, ಅಚರಣಾ, ಶುಷ್ಕಾ, ಪ್ರಾಕ್ಚರಣ, ಯೋನಿ ರೋಗಗಳಲ್ಲಿ ಮತ್ತು ಇತರ ಕಫ—ವಾತಜನ್ಯ ಯೋನಿರೋಗಗಳಲ್ಲಿ ಆಯಾ ದೋಷನಾಶಕ ತೈಲವನ್ನು ಉತ್ತರ ಬಸ್ತಿಯಿಂದ ಕೊಡಬೇಕು. || ೧೧೨ || ನಾರವಸ್ತ್ರಕ್ಕೆ ಆಕಳ ಪಿತ್ತದ ಅಥವಾ ಮೀನಿನ ಪಿತ್ತದ ೨೧ ಭಾವನೆಯನ್ನು ಕೊಟ್ಟು ಅದನ್ನು ಅಚರಣಾಯೋನಿಯಲ್ಲಿ ಇಡಬೇಕು. ಅಥವಾ ಮತ್ಸ್ಯ ಬೀಜಚೂರ್ಣವನ್ನು ಜೇನಿನಲ್ಲಿ ಕಲಸಿ ಇಡಬೇಕು. || ೧೧೩ || ಅದು ಯೋನಿಸ್ರೋತಸ್ಸಿನ ಶೋಧನಮಾಡಿ ಅದರಲ್ಲಿಯ ಕ್ಲೇದ-ಬಾವು-ತಿಂಡಿಗಳನ್ನು ಕಳೆಯುವದು. ಪ್ರಾಕ್‌ಚರಣ, ಅತಿಚರಣ ಎಂಬ ಯೋನಿಗಳಲ್ಲಿ ವಾತನಾಶಕ ಶತಪಾಕ ತೈಲಗಳಿಂದ || ೧೧೪ || ಅನುವಾಸನ ನಿರೂಹ ಬಸ್ತಿಗಳನ್ನು ಕೊಡಬೇಕು. ವಾತನಾಶಕ ಸ್ನೇಹ ದ್ರವ್ಯಗಳಿಂದ ಸ್ವೇದಕೊಡಬೇಕು. ಅದರಂತೆ ವಾತನಾಶಕ ಆಹಾರ ಉಪನಾಹಗಳಿಂದ ಯೋಗ್ಯವಾಗಿ ಉಪಚಾರ ಮಾಡಬೇಕು. || ೧೧೫ || ಬಡೇಸೋಪು, ಜವೆಗೋದಿ, ಸುರಾಬೀಜ, ಕೋಷ್ಠ, ಪ್ರಿಯಂಗು, ಕಳ್ಳಂಗಡ್ಲೆ

ಇಲಿಕಿವಿ, ಮತ್ತು ಗಂಧಾಭಿರೋಚಾಗಳಿಂದ ಮಾಡಿದ ಬತ್ತಿಗಳನ್ನು ಯೋನಿಯಲ್ಲಿಡಬೇಕು. ॥ ೧೦೬ ॥ ವಾಮಿನಿ, ಉಪಪ್ಲುತಯೋನಿಗಳಲ್ಲಿ ಸ್ನೇಹ, ಸ್ವೇದ ಮುಂತಾದ ಕ್ರಮವನ್ನು ಮಾಡಬೇಕು. ಆಮೇಲೆ ಸ್ನೇಹಯುಕ್ತ ಬತ್ತಿಯನ್ನಿಡಬೇಕು. ತರುವಾಯ ಸಂತರ್ಪಣವನ್ನು ಮಾಡಬೇಕು ॥೧೦೭॥ ಶಲ್ಲಕೀ ( ವೃಕ್ಷವಿಶೇಷ ), ಮಂಜಿಷ್ಠೆ, ನೀರಿಲ, ದಿಂಡಿಲು, ಇವುಗಳಜೊತೆ ಪಂಚವಲ್ಕಲ ಇವುಗಳ ಕಷಾಯದಲ್ಲಿ ಸಿದ್ಧಮಾಡಿದ ಸ್ನೇಹದ ಬತ್ತಿಯು ವಿಪ್ಲುತಾಯೋನಿಯನ್ನು ಗುಣಪಡಿಸುವದು. ॥ ೧೦೮ ॥ ಕರಣಿನೀಯೋನಿಯಲ್ಲಿ ಕೋಷ್ಠ, ಹಿಪ್ಪಲಿ, ಎಕ್ಕೆಯ ಮುಗುಳು, ಸೈಂಧವ, ಇವುಗಳ ಚೂರ್ಣದಲ್ಲಿ ಆಡಿನ ಮೂತ್ರ ಹಾಕಿ ಮಾಡಿದ ಬತ್ತಿಯನ್ನು ಇಡಬೇಕು ಎಲ್ಲ ಕಫನಾಶಕ ಚಿಕಿತ್ಸೆ ಮಾಡಬೇಕು. ॥೧೦೯॥ ಉದಾವರ್ತಾ ಯೋನಿರೋಗಗಳಲ್ಲಿ ವಾತದ ವೇದನೆಗಳು ಇದ್ದರೆ ನಿಶೋತ್ತರ ಚೂರ್ಣದ ರೇಚಕ, ಸ್ನೇಹನ ಸ್ವೇದಗಳನ್ನು ಮಾಡಬೇಕು. ಗ್ರಾಮದಲ್ಲಿ, ವ ಲೆನಾಡಿನಲ್ಲಿ ಮತ್ತು ನೀರಿನಲ್ಲಿ ಇರುವ ಪ್ರಾಣಿಗಳ ಮಾಂಸರಸ ಮತ್ತು ದಶಮೂಲದಿಂದ ಸಿದ್ಧಮಾಡಿದ ಹಾಲಿನ ಬಸ್ತಿಯನ್ನು ಕೊಡಬೇಕು ॥೧೧೦॥ ನಿಶೋತ್ತರದಿಂದ ಸಿದ್ಧಮಾಡಿದ ಉತ್ತರ ಬಸ್ತಿಯನ್ನು ಕೊಡಬೇಕು. ಇದನ್ನು ಮಹಾಯೋನಿ ಪ್ರಸ್ರಾಯೋನಿಗಳಲ್ಲಿ ಮಾಡಬೇಕು. ॥೧೧೧॥ ಹಂದಿ ಕೋಳಿಗಳ ನೆಣ ಮತ್ತು ತುಪ್ಪವನ್ನು ಜೀವನೀಯ ಕಲ್ಕದಲ್ಲಿ ಸಿದ್ಧಮಾಡಿ, ಮಹಾಯೋನಿಯನ್ನು ತುಂಬಿ, ಅದನ್ನು ಸರಿಯಾಗಿ ಒಳಗೆ ಕೂಡಿಸಿ ಸ್ನೇಹತೊಡೆದ ನಾರುಬಟ್ಟೆಗಳ ಚಿಂದಿಗಳಿಂದ ಕಟ್ಟಬೇಕು. ॥೧೧೨॥ ಪ್ರಸ್ರಸ್ತ ( ಕೆಳಗೆ ಸರಿದ ) ಯೋನಿಗೆ ತುಪ್ಪವನ್ನು ತೊಡೆದು ಹಾಲಿನ ಸ್ವೇದಕೊಟ್ಟು, ಒಳಗೆ ಸರಿಸಿ, ಕುಟ್ಟಿದ ಮಾಂಸದ ಮುದ್ದೆಯನ್ನು ಒಳಗೆ ಇಟ್ಟು, ಮೂತ್ರಕಾಲದ ವರೆಗೆ ಕಟ್ಟಬೇಕು. ॥೧೧೩॥ ಎಲ್ಲ ಯೋನಿರೋಗಗಳಲ್ಲಿ ಜಾಣಸು ವಾತರೋಗದ ಚಿಕಿತ್ಸೆಯನ್ನು ಮಾಡಬೇಕು. ಮಹಾಯೋನಿಯಲ್ಲಿ ವಿಶೇಷವಾಗಿ ಮಾಡಬೇಕು. ವಾತವಿಲ್ಲದೆ ಹೆಂಗಸರಿಗೆ ಯೋನಿರೋಗವೇ ಆಗುವದಿಲ್ಲ. ಕಾರಣ ಮೊದಲು ಅದರ ಶಮನ ಮಾಡಿ ಆಮೇಲೆ ಬೇರೆ ದೋಷದ ಚಿಕಿತ್ಸೆ ಮಾಡಬೇಕು. ॥ ೧೧೪ ॥

ಶ್ವೇತಪ್ರದರ ಚಿಕಿತ್ಸೆಯನ್ನು ಹೇಳುತ್ತಾರೆ—

**ರೋಹೀತಕಾನ್ಮೂಲಕಲ್ಕಂ ಪಾಂಡುರೇಽಸೃಗ್ದರೇ ಪಿಬೇತ್ ॥**
**ಜಲೇನಾಮಲಕೀಬೀಜಕಲ್ಕಂ ವಾ ಸಸಿತಾಮಧುಮ್ ॥೧೧೫॥**
**ಮಧುನಾಮಲಕಂಚೂರ್ಣಂ ರಸಂ ವಾ ಲೇಹಯೇಚ್ಚ ತಾಮ್ ॥**
**ನ್ಯಗ್ರೋಧಸ್ಯ ಕಷಾಯೇಣ ರೋಧ್ರಕಲ್ಕಂ ತಥಾಪಿಬೇತ್ ॥೧೧೬॥**

ಆಸ್ರಾವೇ ಕ್ಷೌಮಪಟ್ಟಂ ವಾ ಭಾವಿತಂ ತೇನ ಧಾರಯೇತ್ ||
ಶ್ಲಕ್ಷ್ಣಂ ತ್ವಕ್ಚೂರ್ಣಪಿಷ್ಟಂ ವಾ ಧಾರಯೇನ್ಮಧುನಾ ಕೃತಮ್ ||೧೧೮||

ಯೋನ್ಯಾಃ ಸ್ನೇಹಾಕ್ತಯಾ ಲೋಧ್ರಪ್ರಿಯಂಗುಮಧುಕಸ್ಯ ವಾ ||
ಧಾರ್ಯಾ ಮಧುಯುತಾ ವರ್ತಿಃ ಕಷಾಯಾಣಾಂ ಚ ಸರ್ವಶಃ ||೧೧೯||

ಸ್ರಾವಚ್ಛೇದಾರ್ಥಮಭ್ಯಕ್ತಾಂ ಧೂಪಯೇದ್ವಾ ಘೃತಪ್ಲುತೈಃ ||
ಸರಲಾಗುಗ್ಗುಲುಯವೈಃ ಸತೈಲಕಟುಮತ್ಸ್ಯಕೈಃ ||೧೨೦||

ಕಾಸೀಸಂ ತ್ರಿಫಲಾ ಕಾಂಕ್ಷೀ ಸಮಂಗಾಮ್ರಾಸ್ಥಿ ಧಾತಕೀ ||
ಪೈಚ್ಛಿಲ್ಯೇ ಕ್ಷೌದ್ರಸಂಯುಕ್ತಶ್ಚೂರ್ಣೋ ವೈಶದ್ಯಕಾರಕಃ ||೧೨೧||

ಪಲಾಶಸರ್ಜಜಂಬೂತ್ವಕ್ಸಮಂಗಾಮೋಚಧಾತಕೀ ||
ಸಪಿಚ್ಛಿಲಾ ಪರಿಕ್ಲಿನ್ನಾ ಸ್ತಂಭನಃ ಕಲ್ಕ ಇಷ್ಯತೇ ||೧೨೨||

ಸ್ತಬ್ಧಾನಾಂ ಕರ್ಕಶಾನಾಂ ಚ ಕಾರ್ಯಂ ಮಾರ್ದವಕಾರಕಮ್ ||
ಧಾರಯೇದ್ ವೇಶವಾರಂ ವಾ ಕೃಶರಾಂ ಪಾಯಸಂ ತಥಾ ||೧೨೩||

ದುರ್ಗಂಧಾನಾಂ ಕಷಾಯಃ ಸ್ಯಾತ್ತೈಲಂ ವಾ ಕಲ್ಕ ಏವ ವಾ ||
ಚೂರ್ಣೋ ವಾ ಸರ್ವಗಂಧಾನಾಂ ಪೂತಿಗಂಧಾಪಕರ್ಷಣಃ ||೧೨೪||

ಏವಂ ಯೋನಿಷು ಶುದ್ಧಾಸು ಗರ್ಭಂ ವಿಂದತಿ ಯೋಷಿತಃ ||
ಅದುಷ್ಟೇ ಪ್ರಾಕೃತೇ ಬೀಜೇ ಗರ್ಭಾವಕ್ರಮಣೇ ಸತಿ ||೧೨೫||

ಪಂಚಕರ್ಮವಿಶುದ್ಧಸ್ಯ ಪುರುಷಸ್ಯಾಪಿ ಚೇಂದ್ರಿಯಮ್ ||
ಪರೀಕ್ಷ್ಯ ವರ್ಣೈರ್ದೋಷಾಣಾಂ ದುಷ್ಟಿಘ್ನೈಸ್ತಮುಪಾಚರೇತ್ ||೧೨೬||

**ಅರ್ಥ—** ಶ್ವೇತಪ್ರದರದಲ್ಲಿ ರೋಹಿತಕ (ಮುಳ್ಳುಮುತ್ತಲ) ದ ಬೇರಿನ ಕಲ್ಕವನ್ನು ನೀರು ಹಾಕಿ ಕುಡಿಯಬೇಕು. ||೧೧೬|| ಆಕೆಗೆ ನೆಲ್ಲೀಚೂರ್ಣ ಅಥವಾ ಕಷಾಯವನ್ನು ಜೇನು ಹಾಕಿ ನೆಕ್ಕಿಸಬೇಕು. ಅಥವಾ ಲೋಧ್ರದ ಕಲ್ಕವನ್ನು ಆಲದ ತೊಗಟೆಯ ಕಷಾಯದಲ್ಲಿ ಹಾಕಿ ಕುಡಿಯಬೇಕು. ||೧೧೭|| ಯೋನಿಯಿಂದ ಸ್ರಾವವಾಗುತ್ತಿದ್ದರೆ ಆಲದ ತೊಗಟೆಯ ಕಷಾಯದ ಅಥವಾ ಲೋಧ್ರದ ಕಲ್ಕದ ಭಾವನೆಕೊಟ್ಟ ನಾರುಬಟ್ಟೆಯನ್ನೇ ಯೋನಿಯಲ್ಲಿ ಇಡಬೇಕು. ಅಥವಾ ಸಣ್ಣಾಗಿ ಅರೆದ ಬಸರಿಯ ತೊಗಟೆಯ ಚೂರ್ಣದಲ್ಲಿ ಜೇನು ಕಲೆಸಿ ಮುದ್ದಿಮಾಡಿ ಇಡಬೇಕು. ||೧೧೮|| ಯೋನಿಗೆ ಸ್ನೇಹವನ್ನು ತೊಡೆದು ಲೋಧ್ರ ಗವಲಾ ಜೇಷ್ಠಮಧುಗಳ ಅಥವಾ ಎಲ್ಲ ಒಗರು ಪದಾರ್ಥಗಳ ಚೂರ್ಣ

ದಲ್ಲಿ ಜೇನು ಕಲೆಸಿಮಾಡಿದ ಬತ್ತಿಯನ್ನು ಇಡಬೇಕು. ||೧೯|| ಸ್ರಾವವು ಕಡಿಯುವದಕ್ಕಾಗಿ ಅಭ್ಯಂಗಮಾಡಿ, ತೈಲ, ಕಾರಮಿಾನು. ಸರಳವೃಕ್ಷದ ಅಂಟು–ಗುಗ್ಗಳ–ಹವೆ, ಇವುಗಳಲ್ಲಿ ತುಪ್ಪ ಕಲೆಸಿ, ಅವುಗಳ ಧೂಪಕೊಡ ಬೇಕು. ||೨೦|| ಜಿಗುಟು ಹೋಗುವದಕ್ಕಾಗಿ ಹಿರಾಕಸ, ತ್ರಿಫಳೆ, ಪಟಿಕ, ಸಮಂಗಾ ( ಮಂಜಿಷ್ಠ ), ಮಾವಿನ ಬೀಜ, ಧಾತಕೀಪುಷ್ಪಗಳ ಚೂರ್ಣದಲ್ಲಿ ಜೇನು ಕಲಿಸಿ ಲೇಪಮಾಡಬೇಕು. ಅಂದರೆ ಅದು ಸ್ವಚ್ಛವಾಗುವದು. ||೨೧|| ಮುತ್ತಲು, ರಾಳ ನೇರಿಲತೋಟೆ, ಮಂಜಿಷ್ಠ ಬೂರಲು ಅಂಟು, ಧಾತಕೀ ಪುಷ್ಪ ಇವುಗಳ ಕಲ್ಕವು ಜಿಗಟು ಮತ್ತು ಕ್ಲೇದ ಬಹಳವಿರುವ ಯೋನಿಗಳನ್ನು ಗುಣಪಡಿಸುವದು. ||೨೨|| ಕುಟ್ಟಿದಮಾಂಸ, ಹುಗ್ಗಿ ಅಥವಾ ಪಾಯಸ ವನ್ನು ಯೋನಿಯಲ್ಲಿ ಇಟ್ಟರೆ ಅದು ಸ್ತಬ್ಧ ಬಿರಿಸು ಯೋನಿಗಳನ್ನು ಮೃದು ಮಾಡುವದು. ||೨೩|| ಎಲ್ಲ ಗಂಧದ್ರವ್ಯಗಳ ಕಷಾಯ, ತೈಲ, ಕಲ್ಕ ಅಥವಾ ಚೂರ್ಣವು ದುರ್ಗಂಧ, ಯೋನಿಗಳ ದುರ್ಗಂಧವನ್ನು ಕಳೆಯುವದು. ||೨೪|| ಈ ರೀತಿ ಯೋನಿಗಳು ಶುದ್ಧವಾಗಿ ಅವುಗಳಲ್ಲಿ ಅವಿಕೃತಬೀಜವು ಬಿದ್ದು ಗರ್ಭಾಶಯವನ್ನು ಸೇರಲು ಹೆಂಗಸರು ಗರ್ಭವನ್ನು ಧಾರಣಮಾಡು ತ್ತಾರೆ. ||೨೫|| ಪುರುಷನ ಶುಕ್ರವನ್ನು ಅದರ ವರ್ಣದಿಂದ ಪರೀಕ್ಷಿಸಿ, ಪಂಚಕರ್ಮದಿಂದ ಶೋಧನವನ್ನು ಮಾಡಿ, ದೋಷಗಳ ದೋಷನಾಶಕ ಗಳಾದ ಔಷಧಗಳಿಂದ ಅವನನ್ನು ಚಿಕಿತ್ಸಿಸಬೇಕು. ||೨೬||

ನಪುಂಸಕತ್ವ ಪ್ರವರದ ವಿಷಯವಾಗಿ ಅಗ್ನಿವೇಶನು ಪ್ರಶ್ನೆಗಳನ್ನು ಮಾಡು ತ್ತಾನೆ—

ಭವತಿ ಚಾತ್ರ

**ಸಲಿಂಗಾ ವ್ಯಾಪದೋ ಯೋತ್ತೇಃ ಸನಿದಾನಚಿಕಿತ್ಸಿತಾಃ ||**
**ಉಕ್ತಾ ವಿಸ್ತರತಃ ಸಮ್ಯಕ್ ಮುನಿನಾ ತತ್ತ್ವದರ್ಶಿನಾ　　||೨೭||**

**ಪುನರೇವಾಗ್ನಿವೇಶಸ್ತು ಪ್ರಪಚ್ಛ ಭಿಷಜಾಂ ವರಮ್ ||**
**ಆತ್ರೇಯಮುಪಸಂಗಮ್ಯ ಶುಕ್ರದೋಷಾಸ್ತ್ವಯೋನಘ　　||೨೮||**

**ರೋಗಾಧ್ಯಾಯೇ ಸಮುದ್ದಿಷ್ಟಾಸ್ತ್ವಷ್ಟೌ ಪುಂಸಾಮಶೇಷತಃ ||**
**ತೇಷಾಂ ಹೇತುಂ ಪೃಥಕ್ ಶ್ರೇಷ್ಠ ದುಷ್ಟಾದುಷ್ಟಸ್ಯ ಚಾಕೃತಿಮ್　　||೨೯||**

ಚಿಕಿತ್ಸಿತಂ ಚ ಕಾರ್ತ್ಸ್ನ್ಯೇನ ಕ್ಲೈಬ್ಯಂ ಯಚ್ಚ ಚತುರ್ವಿಧಮ್ ||
ಉಪದ್ರವೇಷು ಯೋನೀನಾಂ ಪ್ರದರೋ ಯಶ್ಚ ಕೀರ್ತಿತಃ ||೧೩೦||
ತೇಷಾಂ ನಿದಾನಂ ಲಿಂಗಂ ಚ ಚಿಕಿತ್ಸಾಂ ಚೈವ ತತ್ತ್ವತಃ ||
ಸಮಾಸವ್ಯಾಸಭೇದೇನ ಬ್ರೂಹಿ ನೋ ಭಿಷಜಾಂ ವರ ||೧೩೧||

**ಅರ್ಥ—** ತತ್ತ್ವಜ್ಞಾನಿಗಳಾದ ಆತ್ರೇಯ ಋಷಿಗಳು ಯೋನಿರೋಗದ ಲಕ್ಷಣ, ಕಾರಣ, ಚಿಕಿತ್ಸೆಗಳನ್ನು ಚೆನ್ನಾಗಿ ವಿಸ್ತಾರದಿಂದ ಹೇಳಿದರು. || ೧೨೭ || ಅಗ್ನಿವೇಶರು ಪುನಃ ವೈದ್ಯಶ್ರೇಷ್ಠರಾದ ಆತ್ರೇಯರ ಹತ್ತಿರ ಬಂದು, ಪ್ರಣಾಮಂತರೇ, ತಾವು ಅಷ್ಟೋದರಿ ಅಧ್ಯಾಯದಲ್ಲಿ ಗಂಡಸರ ಶುಕ್ರದೋಷಗಳು || ೧೨೮ || ಎಲ್ಲಕೂಡಿ ಎಂಟು ಎಂದು ಹೇಳಿದಿರಿ. ಅವುಗಳ ಕಾರಣ, ದುಷ್ಟ-ಅದುಷ್ಟಗಳ ಲಕ್ಷಣ || ೧೨೯ || ಮತ್ತು ಅವುಗಳ ಚಿಕಿತ್ಸೆ, ನಾಲ್ಕು ತರದ ನಪುಂಸಕತ್ವ, ಯೋನಿರೋಗಗಳಲ್ಲಿ ಹೇಳಿದ ಪ್ರದರ || ೧೩೦ || ಕಾರಣ, ಲಕ್ಷಣ ಮತ್ತು ಚಿಕಿತ್ಸೆಯನ್ನು ಸಂಕ್ಷೇಪ ಮತ್ತು ವಿಸ್ತಾರದಿಂದ ತಾತ್ವಿಕವಾಗಿ ಮತ್ತು ಸಂಪೂರ್ಣವಾಗಿ ವೈದ್ಯಶ್ರೇಷ್ಠರೇ ನಮಗೆ ಹೇಳಿರಿ. || ೧೩೧ ||

ಆತ್ರೇಯರು ಶುಕ್ರದೋಷದ ಕಾರಣವನ್ನು ಹೇಳುತ್ತಾರೆ—

ತಸ್ಮೈ ಶುಶ್ರೂಷಮಾಣಾಯ ಪ್ರೋವಾಚ ಮುನಿಪುಂಗವಃ ||
ಬೀಜಂ ಯಸ್ಮಾದ್ ವ್ಯವಾಯೇಷು ಹರ್ಷಯೋನಿಸಮುತ್ಥಿತಮ್ ||೧೩೨||
ಶುಕ್ರಂ ಪೌರುಷಮಿತ್ಯುಕ್ತಂ ತಸ್ಮಾದ್ ವಕ್ಷ್ಯಾಮಿ ತಚ್ಛೃಣು ||
ಯಥಾಬೀಜಮಕಾಲಾಂಬುಕ್ರಿಮಿಕೀಟಾಗ್ನಿದೂಷಿತಮ್ ||೧೩೩||
ನ ವಿರೋಹತಿ ಸಂದುಷ್ಟಂ ತಥಾ ಶುಕ್ರಂ ಶರೀರಿಣಾಮ್ ||
ಅತಿವ್ಯವಾಯಾದ್ ವ್ಯಾಯಾಮಾದಸಾತ್ಮ್ಯಾನಾಂ ಚ ಸೇವನಾತ್ ||೧೩೪||
ಅಕಾಲೇ ವಾಪ್ಯಯೋನೌ ವಾ ಮೈಥುನಂ ನ ಚ ಗಚ್ಛತಃ ||
ರೂಕ್ಷತಿಕ್ತಕಷಾಯಾತಿಲವಣಾಮ್ಲೋಷ್ಣ ಸೇವನಾತ್ ||೧೩೫||
ನಾರೀಣಾಮರಸಜ್ಞತ್ವಾತ್ ಸ್ರವಣಾಜ್ಜರಯಾ ತಥಾ
ಚಿಂತಾಶೋಕಾದವಿಸ್ರಂಭಾಚ್ಛಸ್ತ್ರಕ್ಷಾರಾಗ್ನಿವಿಭ್ರಮಾತ್ ||೧೩೬||

ಭಯಾತ್ ಕ್ರೋಧಾದಭೀಚಾರಾದ್ವ್ಯಾದಿಭಿಃ ಕರ್ಷಿತಸ್ಯ ಚ ||
ವೇಗಾಘಾತಾತ್ಸಾತ್ ಕ್ಷತಾಚ್ಚಾಪಿ ಧಾತೂನಾಂ ಸಂಪ್ರದೂಷಣಾತ್ ||೧೩೭||

ದೋಷಾಃ ಪೃಥಕ್ ಸಮಸ್ತಾ ವಾ ಪ್ರಾಪ್ಯ ರೇತೋವಹಾಃ ಸಿರಾಃ ||
ಶುಕ್ರಂ ಸಂದೂಷಯಂತ್ಯಾಶು ತದ್ ವಕ್ಷ್ಯಾಮಿ ವಿಭಾಗತಃ ||೧೩೮||

**ಅರ್ಥ**— ಕೇಳಲಿಚ್ಛಿಸುವ ಅಗ್ನಿವೇಶನಿಗೆ ಮುನಿ ಶ್ರೇಷ್ಠರಾದ ಆತ್ರೇಯರು ಹೇಳುತ್ತಾರೆ— ಮೈಥುನಗಳಲ್ಲಿ ಕಾಮುಕರಿಂದ ಪ್ರಕಟವಾಗುವ ಪುರುಷರ ಶುಕ್ರಕ್ಕೆ ಬೀಜವೆನ್ನುವರು. ||೧೩೨|| ಅದನ್ನು ಹೇಳುತ್ತೇನೆ ಕೇಳಿರಿ- ಹೇಗೆ ಯೋಗ್ಯ ಕಾಲದಲ್ಲಿ ನೀರುಹಾಕದ ಕ್ರಿಮಿ-ಕೀಟ ಜಂತಿಗಳಿಂದ ದೂಷಿತವಾದ ಬೀಜವು ಅಂಕುರಿಸುವದಿಲ್ಲವೋ ||೧೩೩|| ಅದರಂತೆ ದುಷ್ಟವಾದ ಮನುಷ್ಯರ ಶುಕ್ರವು ಫಲಕಾರಿಯಾಗದು. ಅತಿ ಮೈಥುನ, ಬಹಳ ವ್ಯಾಯಾಮ, ಅಸಾತ್ಮ್ಯ ಆಹಾರಗಳಿಂದ ||೧೩೪|| ಅಯೋಗ್ಯಕಾಲದಲ್ಲಿ ಅಥವಾ ಅಯೋನಿಯಲ್ಲಿ ಮೈಥುನಮಾಡುವದರಿಂದ ಮತ್ತು ಬಹುಕಾಲ ಬ್ರಹ್ಮಚರ್ಯದಿಂದಲೇ ಇರುವದರಿಂದ ರುಕ್ಷ, ಕಹಿ, ಒಗರು, ಉಪ್ಪು ಹುಳಿ ಮತ್ತು ಉಷ್ಣಪದಾರ್ಥಗಳನ್ನು ಅತಿಯಾಗಿ ಸೇವಿಸುವದರಿಂದ ||೧೩೫|| ಸ್ತ್ರೀಯರ ಅರಸಿಕತೆಯಿಂದ, ಶುಕ್ರಸ್ರಾವದಿಂದ ಮುಪ್ಪಿನಿಂದ, ಚಿಂತೆ-ಶೋಕ-ಅಸಮಾಧಾನಗಳಿಂದ ಶಸ್ತ್ರಕ್ಷಾರ, ದಾಹ ಚಿಕಿತ್ಸೆಯಲ್ಲಿ ತಪ್ಪಾಗುವದರಿಂದ ||೧೩೬|| ಅಂಜಿಕೆ-ಸಿಟ್ಟು-ಜೇಡಿಗಳಿಂದ, ಬೇನೆಯಿಂದ ಸೊರಗುವದರಿಂದ, ವೇಗದ ಪ್ರತಿಬಂಧದಿಂದ, ಗಾಯದಿಂದ ಧಾತುದುಷ್ಟಿಯಿಂದ ||೧೩೭|| ವಾತಾದಿ ದೋಷಗಳು ಒಂದೊಂದೇ ಅಥವಾ ಎಲ್ಲವೂ ದುಷ್ಟವಾಗಿ ಶುಕ್ರವಾಹಕ ಶಿರಗಳನ್ನೂ ಸೇರಿ, ಶುಕ್ರದ ದುಷ್ಟಿಯನ್ನುಂಟುಮಾಡುವವು. ಅವುಗಳನ್ನು ಬೇರೆ ಬೇರೆಯಾಗಿ ಹೇಳುವೆನು ಕೇಳಿರಿ. ||೧೩೮||

ಶುದ್ಧಾಶುದ್ಧ ಶುಕ್ರಗಳ ಲಕ್ಷಣಗಳನ್ನು ಹೇಳುತ್ತಾರೆ—

ಫೇನಿಲಂ ತನು ರೂಕ್ಷಂ ಚ ವಿವರ್ಣಂ ಪೂತಿ ಪಿಚ್ಛಿಲಮ್ ||
ಅನ್ಯಧಾತೂಪಸಂಸೃಷ್ಟಮವಸಾದಿ ತಥಾಷ್ಟಮಮ್ ||೧೩೯||
ಫೇನಿಲಂ ತನು ರೂಕ್ಷಂ ಚ ಕೃಚ್ಛ್ರೇಣಾಲ್ಪಂ ಚ ಮಾರುತಾತ್ ||
ಭವತ್ಯುಪಹತಂ ಶುಕ್ರಂ ನ ತದ್ ಗರ್ಭಾಯ ಕಲ್ಪತೇ ||೧೪೦||

**ಸನೀಲಮಥವಾಪೀತಮತ್ಯುಷ್ಣಂ ಪೂತಿ ಗಂಧಿ ವಾ**
**ದಹಲ್ಲಿಂಗಂ ವಿನಿರ್ಯಾತಿ ಶುಕ್ರಂ ಪಿತ್ತೇನ ದೂಷಿತಮ್ ||೧೪೧||**

**ಶ್ಲೇಷ್ಮಣಾ ರುದ್ಧಮಾರ್ಗಂ ತು ಭವತ್ಯತ್ಯರ್ಥ ಪಿಚ್ಛಿಲಮ್ ||**
**ಸ್ತ್ರೀಣಾಮತ್ಯರ್ಥಗಮನಾದ್‌ಭಿಘಾತಾತ್ ಕ್ಷತಾದಪಿ ||೧೪೨||**
**ಶುಕ್ರಂ ಪ್ರವರ್ತತೇ ಜಂತೋಃ ಪ್ರಾಯೇಣ ರುಧಿರಾನ್ವಯಮ್ ||**
**ವೇಗಸಂಧಾರಣಾಚ್ಛುಕ್ರಂ ವಾಯುನಾ ವಿಹತೇ ಪಥಿ ||೧೪೩||**
**ಕೃಚ್ಛ್ರೇಣ ಯಾತಿ ಗ್ರಥಿತಮವಸಾದಿ ತದಷ್ಟಮಮ್ ||**
**ಇತಿ ದೋಷಾಃ ಸಮಾಖ್ಯಾತಾಃ ಶುಕ್ರಸ್ಯಾಷ್ಟೌ ಸಲಕ್ಷಣಾಃ ||೧೪೪||**

**ಸ್ನಿಗ್ಧಂ ಘನಂ ಪಿಚ್ಛಿಲಂ ಚ ಮಧುರಂ ಚಾವಿದಾಹಿ ಚ ||**
**ರೇತಃ ಶುದ್ಧಂ ವಿಜಾನೀಯಾತ್ ಶುದ್ಧಸ್ಫಟಿಕಸನ್ನಿಭಮ್ ||೧೪೫||**

**ಅರ್ಥ—** ೧ ಬುರುಗುಳ್ಳ, ೨ ತೆಳ್ಳಗಿನ ೩ ರುಕ್ಷ ೪ ಬೇರೆಬಣ್ಣದ ೫ ಹೊಲಸು ನಾರುವ, ೬ ಜಿಗಟಾದ ೭ ಬೇರೆ ಧಾತುಗಳಿಂದ ಕೂಡಿದ ೮ ಅವಸಾದಿ ( ಬಹುಕಷ್ಟದಿಂದ ಸ್ವಲ್ಪೇ ಬೀಳುವ ) ಎಂದು ಎಂಟು ತರದ ದುಷ್ಟಶುಕ್ರಗಳು ಇರುತ್ತವೆ. || ೧೩೯ || ಬುರುಗು, ತೆಳ್ಳಗೆ, ರುಕ್ಷವಿದ್ದು ಕಷ್ಟದಿಂದ ಸ್ವಲ್ಪೇ ಬೀಳುವ ( ಅವಸಾದಿ ) ಶುಕ್ರವು ವಾತಜವು. ಅದು ಗರ್ಭವನ್ನುಂಟುಮಾಡಲಾರದು. || ೧೪೦ || ನೀಲ, ಅಥವಾ ಹಳದಿ, ಬಿಸಿ, ಹೊಲಸು ನಾರುತ್ತಿದ್ದು ಅಂಗವನ್ನು ಸುಡುತ್ತ ಹೊರಬೀಳುವ ಶುಕ್ರವು ಪಿತ್ತದೂಷಿತವು. || ೧೪೧ || ಬಹಳ ಜಿಗುಟು ಮತ್ತು ಮಾರ್ಗವನ್ನು ಪ್ರತಿಬಂಧಿಸುವ ಶುಕ್ರವು ಕಫದೂಷಿತವು. ಅತಿಮೈಥುನದಿಂದ, ಆಘಾತ ದಿಂದ, ಕ್ಷತದಿಂದ || ೧೪೨ || ಬಹಳವಾಗಿ ಪುರುಷನ ಶುಕ್ರವು ರಕ್ತ ದಿಂದ ಕೂಡಿ ಬರುವದು. ( ಮಲ-ಮೂತ್ರಾದಿಗಳ ) ವೇಗಧಾರಣದಿಂದ ಕುಪಿತವಾದ ವಾಯುವು ಹಾದಿಯಲ್ಲಿ ಪ್ರತಿಬಂಧ ಮಾಡುವದರಿಂದ ||೧೪೩|| ಗಂಟುಕಟ್ಟಿದ ಶುಕ್ರವು ಕಷ್ಟದಿಂದ ಬೀಳುತ್ತದೆ. ಇದೇ ಅವಸಾದಿ ಶುಕ್ರವು ಈ ಪ್ರಕಾರ ಶುಕ್ರದ ಎಂಟು ಲಕ್ಷಣಗಳನ್ನು ಲಕ್ಷಪೂರ್ವಕ ಹೇಳಿದೆವು. || ೧೪೪ || ಶುಕ್ರವು ಸ್ನಿಗ್ಧ, ಗಟ್ಟಿ, ಜಿಗಟು, ಮಧು, ದಾಹರಹಿತ ಮತ್ತು ಸ್ವಚ್ಛಸ್ಫಟಿಕದಂತೆ ಬೆಳ್ಳಗಿದ್ದರೆ ಶುದ್ಧವೆಂದು ತಿಳಿಯತಕ್ಕದ್ದು. ||೧೪೫||

ಶುಕ್ರ ಚಿಕಿತ್ಸೆಯನ್ನು ಹೇಳುತ್ತಾರೆ—

**ವಾಜೀಕರಣಯೋಗೈಸ್ತೈರುಪಯೋಗೈಃ ಸುಖೈರ್ಹಿತೈಃ ||**
**ರಕ್ತಪಿತ್ತಹರೈರ್ಯೋಗೈರ್ಯೋನಿವ್ಯಾಪದಿಕೈಸ್ತಥಾ ||೧೪೬||**

ದುಷ್ಟಾ ಭವೇದ್ ಯದಾ ಶುಕ್ರಂ ತದಾ ತತ್ ಸಮುಪಾಚರೇತ್ ||
ಘೃತಂ ಯಜ್ಜೀವನೀಯೋಕ್ತಂ ಚ್ಯವನಪ್ರಾಶ ಏವ ಚ ||೧೪೭||
ಗಿರಿಜಸ್ಯ ಪ್ರಯೋಗಶ್ಚ ರೇತೋದೋಷಾನ್ ವ್ಯಪೋಹತಿ ||
ವಾತಾನ್ವಿತೇ ಹಿತಾಃ ಶುಕ್ರೇ ನಿರೂಹಾಃ ಸಾನುವಾಸನಾಃ ||೧೪೮||

ಬ್ರಾಹ್ಮ್ಯಮಾಮಲಕೀಯಂ ಚ ಪೈತ್ತೇ ಶಸ್ತಂ ವಿರೇಚನಮ್ ||
ಮಾಗಧ್ಯಮೃತಲೋಹಾನಾಂ ತ್ರಿಫಲಾಯಾ ರಸಾಯನಂ ||೧೪೯||

ಕಫೋದ್ಭವಂ ಶುಕ್ರದೋಷಂ ಹನ್ಯಾದ್ ಭಲ್ಲಾತಕಸ್ಯ ಚ ||
ಅನ್ಯಧಾತೂಪಸಂಸೃಷ್ಟಂ ಶುಕ್ರಂ ವೀಕ್ಷ್ಯ ಭಿಷಕ್ ಕ್ರಿಯಾಮ್ ||೧೫೦||
ಯಥಾದೋಷಂ ಪ್ರಯುಂಜೀತ ದೋಷಧಾತುಭಿಷಗ್‌ಜಿತಮ್ ||
ಸರ್ಪಿಃ ಪಯೋ ರಸಾಃ ಶಾಲಿಯವಗೋಧೂಮಷಷ್ಟಿಕಾಃ ||೧೫೧||

ಪ್ರಶಸ್ತಾಃ ಶುಕ್ರದೋಷೇಷು ಬಸ್ತಿಕರ್ಮ ವಿಶೇಷತಃ ||
ಇತ್ಯಷ್ಟಶುಕ್ರದೋಷಾಣಾಂ ಮುನಿನೋಕ್ತಂ ಚಿಕಿತ್ಸಿತಂ ||೧೫೨||

**ಅರ್ಥ—** ಶುಕ್ರವು ದುಷ್ಟವಾಗಲು ಅದಕ್ಕೆ ಯೋಗ್ಯ, ಸುಖಕರ, ಹಿತಕರವಾದ ವಾಜೀಕರಣ ಔಷಧ, ರಕ್ತಪಿತ್ತನಾಶಕ ಔಷಧ, ಮತ್ತು ಯೋನಿರೋಗಕ್ಕೆ ಹೇಳಿದ ಔಷಧಗಳನ್ನು ಕೊಡಬೇಕು.
|| ೧೪೬ || ಜೀವನೀಯ ಘೃತ, ಚ್ಯವನಪ್ರಾಶ, || ೧೪೭ || ಶಿಲಾಜಿತು ಇವು ಶುಕ್ರದೋಷಗಳನ್ನು ಕಳೆಯುವವು. ವಾತ ದುಷ್ಟಶುಕ್ರದಲ್ಲಿ ನಿರೂಹ ಅನುವಾಸನ ಬಸ್ತಿಗಳು || ೧೪೮ || ಬ್ರಾಹ್ಮರಸಾಯನ, ಆಮಲಕೀರಸಾಯನಗಳು ಹಿತಕರವು. ಪಿತ್ತದುಷ್ಟಶುಕ್ರದಲ್ಲಿ ವಿರೇಚನವನ್ನು ಕೊಟ್ಟು, ಪಿಪ್ಪಲೀ ವರ್ಧಮಾನ, ಅಮೃತಸಾರಲೋಹ, ತ್ರಿಫಲಾರಸಾಯನವನ್ನು ಕೊಡಬೇಕು. || ೧೪೯ || ಕಫಜಶುಕ್ರದೋಷವನ್ನು ಭಲ್ಲಾತಕ ರಸಾಯನವು ಕಳೆಯುವದು. ಶುಕ್ರವು ಬೇರೆಧಾತುವಿನಿಂದ ಕೂಡಿದ್ದರೆ || ೧೫೦ || ವೈದ್ಯನು ಅದರಲ್ಲಿಯ ದೋಷವನ್ನು ವಿಚಾರಿಸಿ ಆ ದೋಷ ಮತ್ತು ಕೂಡಿದ ಧಾತುಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡಬೇಕು. ಶುಕ್ರದೋಷಗಳಲ್ಲಿ ತುಪ್ಪ, ಹಾಲು, ಮಾಂಸರಸ, ಅಕ್ಕಿ, ಜವೆಗೋದಿ, ಷಷ್ಟಿಕ ಅಕ್ಕಿಗಳೂ || ೧೫೧ || ವಿಶೇಷವಾಗಿ ಬಸ್ತಿಕರ್ಮವೂ ಹಿತಕರವಾಗಿವೆ. ಈ ಪ್ರಕಾರ ಎಂಟು ಶುಕ್ರದೋಷಗಳ ಚಿಕಿತ್ಸೆಯನ್ನು ಆತ್ರೇಯ ಋಷಿಗಳು ಹೇಳಿದರು. || ೧೫೨ ||

ನಪುಂಸಕತ್ವದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ—

ರೇತೋದೋಷೋದ್ಭವಂ ಕ್ಲೈಬ್ಯಂ ಯಸ್ಮಾಚ್ಛುದ್ಧ್ಯೈವ ಸಿದ್ಧ್ಯತಿ ||
ಅತೋ ವಕ್ಷ್ಯಾಮಿ ತೇ ಸಮ್ಯಗಗ್ನಿವೇಶ ಯಥಾಯಥಮ್ ||೧೫೩||

ಬೀಜಧ್ವಜೋಪಘಾತಾಭ್ಯಾಂ ಜರಯಾ ಶುಕ್ರಸಂಕ್ಷಯಾತ್ ||
ಕ್ಲೈಬ್ಯಂ ಸಂಪದ್ಯತೇ ತಸ್ಯ ಶೃಣು ಸಾಮಾನ್ಯಲಕ್ಷಣಮ್ ||೧೫೪||

ಸಂಕಲ್ಪಪ್ರವಣೋ ನಿತ್ಯಂ ಪ್ರಿಯಾಂ ವಶ್ಯಾಮಪಿ ಸ್ತ್ರಿಯಮ್ ||
ನ ಯಾತಿ ಲಿಂಗಶೈಥಿಲ್ಯಾತ್ ಕದಾಚಿದ್ ಯಾತಿ ವಾ ಯದಿ ||೧೫೫||

ಶ್ವಾಸಾರ್ತಃ ಸ್ವಿನ್ನಗಾತ್ರಶ್ಚ ಮೋಘಸಂಕಲ್ಪಚೇಷ್ಟಿತಃ ||
ಮ್ಲಾನಶಿಶ್ನಶ್ಚ ನಿರ್ವೀರ್ಯಃ ಸ್ಯಾದೇತತ್ ಕ್ಲೈಬ್ಯಲಕ್ಷಣಮ್ ||೧೫೬||

ಸಾಮಾನ್ಯಲಕ್ಷಣಂ ಹ್ಯೇತದ್ ವಿಸ್ತರೇಣ ಪ್ರವಕ್ಷ್ಯತೇ ||
ಶೀತರೂಕ್ಷಾಲ್ಪ ಸಂಕ್ಲಿಷ್ಟ ವಿಷಮಾಸಾತ್ಮ್ಯಭೋಜನಾತ್ ||೧೫೭||

ಶೋಕಚಿಂತಾಭಯತ್ರಾಸಾತ್ ಸ್ತ್ರೀಣಾಂ ಚಾತಿನಿಷೇವಣಾತ್ ||
ಅಭಿಚಾರಾದವಿಸ್ರಂಭಾತ್ ರಸಾದೀನಾಂ ಚ ಸಂಕ್ಷಯಾತ್ ||೧೫೮||

ವಾತಾದೀನಾಂ ಚ ವೈಷಮ್ಯಾದ್ ವಿರುದ್ಧಾಧ್ಯಶನಾತ್ ಶ್ರಮಾತ್ ||
ನಾರೀಣಾಮರಸಜ್ಞತ್ವಾತ್ ಪಂಚಕರ್ಮಾಪಚಾರತಃ ||೧೫೯||

ಬೀಜೋಪಘಾತಾದ್ ಭವತಿ ಪಾಂಡುವರ್ಣಃ ಸುದುರ್ಬಲಃ ||
ಅಲ್ಪಪ್ರಾಣೋಽಲ್ಪಹರ್ಷಶ್ಚ ಪ್ರಮದಾಸು ಭವೇನ್ನರಃ ||೧೬೦||

ಹೃತ್ಪಾಂಡುಕಾಮಲಾರೋಗತಮಕಶ್ರಮಪೀಡಿತಃ ||
ಛರ್ದ್ಯತೀಸಾರಶೂಲಾರ್ತಃ ಕಾಸಜ್ವರನಿಪೀಡಿತಃ | ||೧೬೧||

ಬೀಜೋಪಘಾತಜಂ ಕ್ಲೈಬ್ಯಂ ಧ್ವಜಭಂಗಕೃತಂ ಶೃಣು ||
ಅತ್ಯಮ್ಲಲವಣಕ್ಷಾರವಿರುದ್ಧಾಸಾತ್ಮ್ಯಭೋಜನಾತ್ ||೧೬೨||

ಅತ್ಯಂಬುಪಾನಾದ್ ವಿಷಮಾತ್ ಪಿಷ್ಟಾನ್ನಗುರುಭೋಜನಾತ್ ||
ದಧಿಕ್ಷೀರಾನೂಪಮಾಂಸಸೇವನಾದ್ ವ್ಯಾಧಿಕರ್ಷಣಾತ್ ||೧೬೩||

ಕನ್ಯಾನಾಂ ಗಮನಾಚ್ಚಾಪಿ ಅಯೋನಿಗಮನಾದಪಿ ||
ಧೀರ್ಘರೋಗಾಂ ಚಿರೋತ್ಸೃಷ್ಟಾಂ ತಥೈವ ಚ ರಜಸ್ವಲಾಂ ||೧೬೪||

ದುರ್ಗಂಧಾಂ ದುಷ್ಟಯೋನಿಂ ಚ ತಥೈವ ಚ ಪರಿಸ್ರುತಾಂ ||
ಈದೃಶೀಂ ಪ್ರಮದಾಂ ಮೋಹಾದ್ ಯೋ ಗಚ್ಛೇತ್ ಕಾಮಹರ್ಷಿತಃ ||೧೬೫||

ಚತುಷ್ಪದಾಭಿಗಮನಾಚ್ಛೇಫಸಶ್ಚಾಭಿಘಾತತಃ ||
ಅಧಾವನಾದ್ ವಾ ಮೇಢ್ರಸ್ಯ ಶಸ್ತ್ರದಂತನಖಕ್ಷತಾತ್ ||೧೬೬||

ಕಾಷ್ಠಪ್ರಹಾರನಿಷ್ಪೇಷಾತ್ ಶೂಕಾನಾಂ ಚಾತಿ ಸೇವನಾತ್ ||
ರೇತಸಶ್ಚ ಪ್ರತೀಘಾತಾದ್ ಧ್ವಜಭಂಗಃ ಪ್ರವರ್ತತೇ ||೧೬೭||

ಶ್ವಯಥುರ್ವೇದನಾ ಮೇಢ್ರೇ ರಾಗಶ್ಚೈವೋಪಜಾಯತೇ ||
ಸ್ಫೋಟಾಸ್ತೀವ್ರಾಶ್ಚ ಜಾಯಂತೇ ಲಿಂಗಪಾಕೋ ಭವತ್ಯಪಿ ||೧೬೮||

ಮಾಂಸವೃದ್ಧಿರ್ಭವೇಚ್ಚಾಸ್ಯ ವ್ರಣಾಃ ಕ್ಷಿಪ್ರಂ ಭವಂತ್ಯಪಿ ||
ಪುಲಾಕೋದಕ ಸಂಕಾಶಃ ಸ್ರಾವಃ ಶ್ಯಾವಾರುಣಸ್ತಥಾ ||೧೬೯||

ವಲಯೀಕುರುತೇ ಚಾಪಿ ಕಠಿನಶ್ಚ ಪರಿಗ್ರಹಃ ||
ಜ್ವರಸ್ತೃಷ್ಣಾ ಭ್ರಮೋ ಮೂರ್ಛಾ ಛರ್ದಿಶ್ಚಾಪ್ಯುಪಜಾಯತೇ ||೧೭೦||

ರಕ್ತಂ ಕೃಷ್ಣಂ ಸ್ರವೇಚ್ಚಾಪಿ ನೀಲಮಾವಿಲಲೋಹಿತಮ್ ||
ಅಗ್ನಿನೇವ ಚ ದಗ್ಧಸ್ಯ ತೀವ್ರೋ ದಾಹಃ ಪ್ರವರ್ತತೇ ೧೭೧||

ಬಸ್ತೌ ವೃಷಣಯೋರ್ವಾಪಿ ಸೇವನ್ಯಾಂ ವಂಕ್ಷಣೇಷು ಚ ||
ಕದಾಚಿತ್ ಪಿಚ್ಛಿಲೋ ವಾಪಿ ಪಾಂಡುಃ ಸ್ರಾವಶ್ಚ ಜಾಯತೇ ||೧೭೨||

ಶ್ವಯಥುರ್ಜಾಯತೇ ಮಂದಃ ಸ್ತಿಮಿತೋಽಲ್ಪಪರಿಸ್ರವಃ ||
ಚಿರಾದುಪೈತಿ ವಾ ಪಾಕಂ ಶೀಘ್ರಂ ವಾಥ ಪ್ರಮುಚ್ಯತೇ ||೧೭೩||

ಜಾಯಂತೇ ಕ್ರಿಮಯಶ್ಚಾಪಿ ಕ್ಲಿದ್ಯತೇ ಪೂತಿಗಂಧಿ ಚ ||
ವಿಶೀರ್ಯತೇ ಮಣಿಶ್ಚಾಸ್ಯ ಮೇಢ್ರಂ ಮುಷ್ಕಮಥಾಪಿ ವಾ ||೧೭೪||

ಧ್ವಜಭಂಗಕೃತಂ ಕ್ಲೈಬ್ಯಮಿತ್ಯೇತತ್ ಸಮುದಾಹೃತಮ್ ||
ಏತಂ ಪಂಚವಿಧಂ ಕೇಚಿತ್ ಧ್ವಜಭಂಗಂ ಪ್ರಚಕ್ಷತೇ ||೧೭೫||

ಕ್ಲೈಬ್ಯಂ ಜರಾಸಂಭವಂ ಹಿ ಪ್ರವಕ್ಷ್ಯಾಮ್ಯಥ ತಚ್ಛೃಣು ||
ಜಘನ್ಯಮಧ್ಯಪ್ರವರಂ ವಯಸ್ತ್ರಿವಿಧಮುಚ್ಯತೇ ||೧೭೬||

ಅಥ ಪ್ರವಯಸಾಂ ಶುಕ್ರಂ ಪ್ರಾಯಶಃ ಕ್ಷೀಯತೇನೃಣಾಮ್ ||
ರಸಾದೀನಾಂ ಸಂಕ್ಷಯಾಚ್ಚ ತಥೈವಾವೃಷ್ಯಸೇವನಾತ್ ||೧೭೭||

ಬಲವೀರ್ಯೇಂದ್ರಿಯಾಣಾಂ ಚ ಕ್ರಮೇಣೈವ ಪರಿಕ್ಷಯಾತ್ ||
ಪರಿಕ್ಷೀಣಾದಾಯುಷಶ್ಚಾಪ್ಯನಾಹಾರಾಚ್ಛ್ರಮಾತ್ ಕ್ಲಮಾತ್ ||೧೭೮||

ಜರಾಸಂಭವಜಂ ಕ್ಲೈಬ್ಯಮಿತ್ಯೇತೈಃ ಹೇತುಭಿರ್ನೃಣಾಮ್ ॥
ಜಾಯತೇ ತೇನ ಸಕ್ಷಿಪ್ರಂ ಕ್ಷೀಣಧಾತುಃ ಸುದುರ್ಬಲಃ ॥೧೭೯॥

ವಿವರ್ಣೋ ದುರ್ಬಲೋ ದೀನಃ ಸ ಕ್ಷಿಪ್ರಂ ವ್ಯಾಧಿಮೃಚ್ಛತಿ ॥
ಏತಜ್ಜರಾಸಂಭವಂ ಹಿ ಚತುರ್ಥಂ ಕ್ಷಯಜಂ ಶೃಣು ॥೧೮೦॥

ಅತೀವಚಿಂತನಾಚ್ಚೈವ ಶೋಕಾತ್ ಕ್ರೋಧಾದ್ ಭಯಾತ್ ತಥಾ ॥
ಈರ್ಷ್ಯೋತ್ಕಂಠಾಮದೋದ್ವೇಗಾಸ್ ಸದಾ ವಿಶತಿ ಯೋ ನರಃ ॥೧೮೧॥

ಕೃಶೋ ವಾ ಸೇವತೇ ರೂಕ್ಷಮನ್ನಪಾನಂ ತಥೌಷಧಮ್ ॥
ದುರ್ಬಲಪ್ರಕೃತಿಶ್ಚೈವಾಷ್ಯನಾಹರೋ ಭವೇದ್ ಯದಿ ॥೧೮೨॥

ಅಸಾತ್ಮ್ಯಭೋಜನೋ ಯೋ ಹಿ ಹೃದಯೋ ಯೋ ವ್ಯವಸ್ಥಿತಃ ॥
ರಸಃ ಪ್ರಧಾನಧಾತುರ್ಹಿ ಕ್ಷೀಯೇತಾಶು ತತೋ ನೃಣಾಮ್ ॥೧೮೩॥

ರಕ್ತಾದಯಶ್ಚ ಕ್ಷೀಯಂತೇ ಕ್ಷೀಯಂತೇ ದೇಹಿನಸ್ತತಃ ॥
ಶುಕ್ರಾವಸಾನಾಸ್ತೇಭ್ಯೋಽಪಿ ಶುಕ್ರಂ ಧಾಮ ಪರಂ ಮತಮ್ ॥೧೮೪॥

ಚೇತಸೋ ವಾತಿಹರ್ಷೇಣ ವ್ಯವಾಯಂ ಸೇವತ್ಯೇತಿ ಯಃ ॥
ತಸ್ಯಾಶು ಕ್ಷೀಯತೇ ಶುಕ್ರಂ ತತಃ ಪ್ರಾಪ್ನೋತಿ ಸಂಕ್ಷಯಮ್ ॥೧೮೫॥

ಘೋರಂ ವಾಧಿಮವಾಪ್ನೋತಿ ಮರಣಂ ವಾ ಸಮೃಚ್ಛತಿ ॥
ಶುಕ್ರಂ ತಸ್ಮಾದ್ ವಿಶೇಷೇಣ ರಕ್ಷ್ಯಮಾರೋಗ್ಯಮಿಚ್ಛತಾ ॥೧೮೬॥

ಏತನ್ನಿದಾನಲಿಂಗಾಭ್ಯಾಮುಕ್ತಂ ಕ್ಲೈಬ್ಯಂ ಚತುರ್ವಿಧಮ್ ॥
ಕೇಚಿತ್‌ಕ್ಲೈಬ್ಯೇ ತ್ವಸಾಧ್ಯೇ ದ್ವೇ ಧ್ವಜಭಂಗಕ್ಷಯೋದ್ಭವೇ ॥೧೮೭॥

ವದಂತಿ ಶೇಫಸಚ್ಛೇದಾದ್ ವೃಷಣೋತ್ಪಾಟನೇನ ಚ ॥
ಮಾತಾಪಿತ್ರೋರ್ಬೀಜದೋಷಾದಶುಭೈಶ್ಚಾಕೃತಾತ್ಮನಃ ॥೧೮೮॥

ಗರ್ಭಸ್ಥಸ್ಯ ಯದಾ ದೋಷಾಃ ಪ್ರಾಪ್ಯ ರೇತೋವಹಾಃ ಸಿರಾಃ ॥
ಶೋಷಯಂತ್ಯಾಶು ತನ್ನಾಶಾದ್ ರೇತಶ್ಚಾಪ್ಯುಪಹನ್ಯತೇ ॥೧೮೯॥

ತತ್ರಸಂಪೂರ್ಣಸರ್ವಾಂಗಃ ಸ ಭವತ್ಯಪುಮಾನ್ ಪುಮಾನ್ ॥
ಏತೇ ತ್ವಸಾಧ್ಯಾ ವ್ಯಾಖ್ಯಾತಾಃ ಸನ್ನಿಪಾತಸಮುಚ್ಛ್ರಯಾತ್॥೧೯೦॥

ಅರ್ಥ— ಶುಕ್ರದೋಷದಿಂದ ಉತ್ಪನ್ನವಾಗುವ ನಪುಂಸಕತ್ವವು ಶುಕ್ರದ ಶುದ್ಧಿಯಿಂದಲೇ ಗುಣಹೊಂದುವದರಿಂದ ಅಗ್ನಿವೇಶನೇ, ಅದನ್ನು ಸಂಪೂರ್ಣವಾಗಿ ಹೇಳುವೆನು ಕೇಳು. ॥ ೧೭೩ ॥ ಶುಕ್ರದೋಷದಿಂದ

ಧ್ವಜ ( ಶಿಶ್ನ ) ಭಾಗದಿಂದ, ಮುಪ್ಪಿನಿಂದ, ಮತ್ತು ಶುಕ್ರಕ್ಷಯದಿಂದ, ಹೀಗೆ ನಾಲ್ಕು ಕಾರಣಗಳಿಂದ ನಪುಂಸಕತ್ವ ವುಂಟಾಗುತ್ತದೆ. ಅದರ ಸಾಮಾನ್ಯ ಲಕ್ಷಣವನ್ನು ಹೇಳುತ್ತೇನೆ ಕೇಳು. ॥ ೧೫೪ ॥

**ನಪುಂಸಕತ್ವದ ಸಾಮಾನ್ಯ ಲಕ್ಷಣವನ್ನು ಹೇಳುತ್ತಾರೆ—**

ಯಾವಾಗಲೂ ಮೈಥುನೇಚ್ಛೆಯು ಇದ್ದರೂ ಹೆಂಡತಿಯು ಪ್ರೀಯಳೂ ವಶ್ಯಳೂ ಇದ್ದರೂ ಲಿಂಗದ ಶೈಥಿಲ್ಯದಿಂದ ಸಂಭೋಗವು ಅಶಕ್ಯವಾಗೋಣ ಒಮ್ಮೊಮ್ಮೆ ಯಾವಾಗಾದರೂ ಲಿಂಗಶೈಥಿಲ್ಯವಾಗದೆ ॥ ೧೫೫ ॥ ಸಂಭೋಗ ಮಾಡಹತ್ತಲು ದಮ್ಮುಹತ್ತಿ, ಮೈ ಬೆವರಿ, ಶಿಶ್ನವು ಬಾಡಿ, ಸಂಭೋಗೇಚ್ಛೆ ಮತ್ತು ಕ್ರಿಯೆಗಳು ವ್ಯರ್ಥವಾಗುವವು; ಶುಕ್ರಪಾತವಾಗುವದು. ಇದು ನಪುಂಸಕತ್ವದ ಸಾಮಾನ್ಯ ಲಕ್ಷಣವು ॥ ೧೫೬ ॥ ಇದನ್ನು ವಿಸ್ತಾರದಿಂದ ಹೇಳುವೆವು.

**ಶುಕ್ರದೋಷದಿಂದ ಉಂಟಾಗುವ ನಪುಂಸಕತ್ವದ ಕಾರಣ ಲಕ್ಷಣಗಳನ್ನು ಹೇಳುತ್ತಾರೆ—**

ಶೀತ,ರುಕ್ಷ, ಸ್ವಲ್ಪ, ಕೆಟ್ಟ, ವಿಷಮ ಭೋಜನ, ಅಸಾತ್ಯ ಆಹಾರಗಳಿಂದ ॥ ೧೫೭ ॥ ಶೋಕ, ಚಿಂತೆ, ಭಯ, ತ್ರಾಸಗಳಿಂದ, ಅತಿ ಸ್ತ್ರೀಸೇವನೆ ಯಿಂದ, ತೀಡಿಗಳಿಂದ, ಏಕಾಂತಸ್ಥಳವಿಲ್ಲದಿರುವದರಿಂದ, ರಸರಕ್ತಾದಿಗಳ ಕ್ಷಯದಿಂದ ॥ ೧೫೮ ॥ ವಾತಾದಿದೋಷಗಳ ವಿಷಮತೆಯಿಂದ, ವಿರುದ್ಧಾ ಹಾರದಿಂದ, ಅಧ್ಯಶನದಿಂದ, ಶ್ರಮದಿಂದ, ಸ್ತ್ರೀಯರ ಅರಸಿಕತೆಯಿಂದ, ಪಂಚಕರ್ಮದಲ್ಲಿ ಆದ ತಪ್ಪಿನಿಂದ ॥ ೧೫೯ ॥ ಶುಕ್ರವು ದುಷ್ಟವಾಗುತ್ತದೆ. ಆದರಿಂದ ಮನುಷ್ಯನು ಬೆಳ್ಳಗೆ ಅಶಕ್ತನಾಗುವನು. ಸಂಭೋಗದಶಕ್ತಿಯು ಮತ್ತು ಇಚ್ಛೆಯು ಕಡಿಮೆಯಾಗುವದು. ॥ ೧೬೦ ॥ ಹೃದ್ರೋಗ ಪಾಂಡು ಕಾಮಾಲೆ, ತಮಕಶ್ವಾಸ, ದಣುವು, ವಾಂತಿ, ಅತಿಸಾರ, ಶೂಲಿ, ಕೆಮ್ಮು ಜ್ವರ ಇವುಗಳಿಂದ ಪೀಡಿತನಾಗುವನು. ॥ ೧೬೧ ॥ ಇದು ಬೀಜದುಷ್ಟಿ ಯಿಂದಾಗುವ ನಪುಂಸಕತ್ವವು. ಇನ್ನು ಮೇಲೆ ಧ್ವಜಭಂಗದಿಂದಾಗುವ ನಪುಂಸ ಕತ್ವವನ್ನು ಕೇಳಿರಿ.

**ಧ್ವಜಭಂಗದಿಂದುಂಟಾಗುವ ನಪುಂಸಕತ್ವದ ಕಾರಣ ಲಕ್ಷಣಗಳನ್ನು ಹೇಳು ತ್ತಾರೆ—**

ಬಹಳ ಹುಳಿ, ಉಪ್ಪು, ಕ್ಷಾರ, ವಿರುದ್ಧ ಆಹಾರ, ಅಸಾತ್ಮ್ಯ ಆಹಾರ ॥ ೧೬೨ ॥ ಬಹಳ ನೀರು ಕುಡಿಯೋಣ, ವಿಷಮಾಹಾರ, ಹಿಟ್ಟಿನ ಪದಾರ್ಥ

ಜಡಪದಾರ್ಥ ತಿನ್ನೋಣ, ಮೊಸರು, ಹಾಲು, ಮಲೆನಾಡ ಪ್ರಾಣಿಗಳ ಮಾಂಸವನ್ನು ತಿನ್ನೋಣ, ಬೇನೆಯಿಂದ ಕೃಶವಾಗೋಣ ॥ ೧೬೩ ॥ ಸಣ್ಣ ಹುಡುಗೆಯರ ಸಂಭೋಗ, ಯೋನಿಯು ಹೊರತಾಗಿ ಬೇರೆ ಗುದ ಮುಂತಾದವುಗಳ ಸಂಭೋಗ, ಇವುಗಳಿಂದಲೂ ದೀರ್ಘರೋಗಿ, ಬಹು ದಿವಸ ಬಿಟ್ಟು, ರಜಸ್ವತಿ, ॥ ೧೬೪ ॥ ದುರ್ಗಂಧ, ದುಷ್ಟ, ಪರಿಸ್ರುತ ಯೋನಿ ಯುಳ್ಳವಳನ್ನು ಕಾಮಹರ್ಷಿತನಾಗಿ ಮೂರ್ಖತನದಿಂದ ಹೋಗುವದರಿಂದ ॥ ೧೬೫ ॥ ಪಶುಗಳ ಸಂಭೋಗದಿಂದ ಶಿಶ್ನಕ್ಕೆ ಆಘಾತವಾಗುವದರಿಂದಲೂ ಶಸ್ತ್ರ, ದಂತ, ಅಥವಾ ನಖಗಳಿಂದುಂಟಾಗುವ ವ್ರಣದಿಂದ ॥ ೧೬೬ ॥ ಕಟ್ಟಿಗೆಯ ಹೊಡತದಿಂದ, ಅಥವಾ ಜಬ್ಬುವದರಿಂದ ಶಿಶ್ನವೃದ್ಧಿಗಾಗಿ ಶೂಕೇ ( ಒಂದು ತರದ ಹುಳ ) ಗಳ ಅತಿ ವಿಷಯೋಗದಿಂದ, ಶುಕ್ರದ ಪ್ರತಿಬಂಧ ದಿಂದ ಧ್ವಜಭಂಗವುಂಟಾಗುವದು. ॥೧೬೭॥ ಅದರಿಂದ ಶಿಶ್ನದಲ್ಲಿ ಬಾವು, ನೋವು, ಕೆಂಪು ಬಂಣಗಳುಂಟಾಗುತ್ತವೆ. ಬಹಳ ನೋವುಳ್ಳ ಬಕ್ಕೆಗಳೂ, ಲಿಂಗಪಾಕವೂ ಆಗುವದು. ॥೧೬೮॥ ಅವರಲ್ಲಿ ಮಾಂಸವೃದ್ಧಿಯಾಗುವದು. ವ್ರಣಗಳು ತೀವ್ರವಾಗಿ ಉಂಟಾಗುವವು. ಅಕ್ಕಿಯ ಗಂಜಿಯಂಥ ಸ್ವಲ್ಪ ಕೆಂಪು, ಕಪ್ಪು ಸ್ರಾವವಾಗುವದು. ॥೧೬೯॥ ಸುತ್ತಲಿನ ಭಾಗವು ಬಿರುಸಾಗಿ ಮುದಡುವದು. ಜ್ವರ, ನೀರಡಿಕೆ, ಭ್ರಮು, ಮೂರ್ಛೆ, ವಾಂತಿಗಳುಂಟಾಗು ವವು. ॥೧೭೦॥ ಕೆಂಪು, ಕಪ್ಪು, ನೀಲಿ, ಹೊಲಸು ರಕ್ತವು ಸೋರುವದು. ಬೆಂಕಿಯಿಂದ ಸುಟ್ಟಂತೆ ತೀವ್ರ ದಾಹವಾಗುವದು. ॥೧೭೧॥ ಮೂತ್ರಾಶಯು, ವೃಷಣ, ಸೀವನೀ, ( ಹೊಲಿದಂತೆ ಇರುವ ಗುದವೃಷಣಗಳ ನಡುವಿನ ಭಾಗ ) ಗೆಜ್ಜಿಗಳಲ್ಲಿ ಒಮ್ಮೆ ಜಿಗಟು, ಬಿಳೀ ಸ್ರಾವವಾದರೂ ಆಗುವದು. ॥೧೭೨॥ ಒಮ್ಮೊಮ್ಮೆ ಬಾವು ಸ್ವಲ್ಪ ಮತ್ತು ಸ್ತಿಮಿತ ಸ್ರಾವವೂ ಸ್ವಲ್ಪವಿದ್ದು ಪಾಕವು ಬಹಳ ದಿವಸಕ್ಕಾಗುವದು. ಅಥವಾ ತೀವ್ರ ಪಾಕವಾಗಿ ಮಾಯುವದು. ॥೧೭೩॥ ಅವರಲ್ಲಿ ಹುಳ ಬೀಳುವವು. ಕಿಚಿಕಿಚಿಯಾಗುವದು. ಹೊಲಸು ನಾರುವದು. ಶಿಶ್ನದ ಮಣಿಯು ಅಥವಾ ವೃಷಣವು ಸೀಳುವದು. ಇದು ಧ್ವಜಭಂಗದಿಂದುಂಟಾದ ನಪುಂಸಕತ್ವವು ಹೇಳಲ್ಪಟ್ಟಿತು. ॥೧೭೪॥ ಕೆಲವರು ( ಸುಶ್ರುತಾಚಾರ್ಯರು ) ಧ್ವಜಭಂಗವು ಐದು ಪ್ರಕಾರವೆಂದು ಹೇಳುತ್ತಾರೆ. ॥೧೭೫॥

**ಟಿಪ್ಪಣಿ—** ಸುಶ್ರುತಾಚಾರ್ಯರು " ವಾತಿಕ, ಪೈತ್ತಿಕ, ಶ್ಲೇಷ್ಮಿಕ, ಸಾನ್ನಿಪಾತಿಕ, ಮತ್ತು ರಕ್ತಜವೆಂದು ಧ್ವಜಭಂಗ (ಉಪದಂಶ)ವು ಐದು ಪ್ರಕಾರ. ಅದರಲ್ಲಿ ವಾತಿಕದಲ್ಲಿ, ಬಿರುಸುತನ, ತ್ವಚೆಬಿರಿಯೋಣ, ಶಿಶ್ನದಲ್ಲಿ

ಸ್ತಬ್ಧತೆ, ಬಿರುಸುಬಾವು, ಅನೇಕತರದ ವಾತ–ವೇದನೆಗಳು ಇರುವವು. ಪೈತ್ತಿಕದಲ್ಲಿ ಜ್ವರ, ಅತ್ತಿಹಣ್ಣಿನಂಥ ಕೆಂಪು ಬಾವು ತೀವ್ರವಾದ ದಾಹ, ಶೀಘ್ರಪಾತ, ಮತ್ತು ಪಿತ್ತದ ವೇದನೆಗಳಿರುವವು. ಶ್ಲೇಷ್ಮಿಕದಲ್ಲಿ ಬಾವು, ತುರಿಕೆ, ಕಾಠಿಣ್ಯ, ಸ್ನಿಗ್ಧತೆ, ಮತ್ತು ಕಫದ ವೇದನೆಗಳಿರುವವು. ಸಾನ್ನಿಪಾತಿಕದಲ್ಲಿ ಎಲ್ಲ ಲಕ್ಷಣಗಳಿದ್ದು ಶಿಶ್ನವು ಸೀಳುವದು; ಕ್ರಿಮಿಗಳುಂಟಾಗುವವು; ಮರಣ ಬರುವದು. ರಕ್ತಜ ಧ್ವಜಭಂಗದಲ್ಲಿ ಕಪ್ಪು ಬಕ್ಕೆಗಳುಂಟಾಗುವವು; ಬಹಳ ರಕ್ತಸ್ರಾವವಾಗುವದು. ಪಿತ್ತದ ಲಕ್ಷಣಗಳಿರುವವು. ಜ್ವರದಾಹಗಳೂ ಶೋಷವೂ ಇರುವದು; ಎಂದು ಹೇಳುವರು. ॥ ೧೭೫ ॥

ವಾರ್ಧಕ್ಯದಿಂದುಂಟಾಗುವ ನಪುಂಸಕತ್ವವನ್ನು ಹೇಳುತ್ತಾರೆ—

ಇನ್ನು ಮೇಲೆ ನಪುಂಸಕತ್ವದಿಂದುಂಟಾಗುವ ನಪುಂಸಕತ್ವವನ್ನು ಹೇಳುವೆವು; ಕೇಳಿರಿ. ಬಾಲ, ತಾರುಣ್ಯ ವಾರ್ಧಕ್ಯವೆಂದು ವಯಸ್ಸು ಮೂರು ಪ್ರಕಾರವಿರುವವು. ॥ ೧೭೬ ॥ ಅವರಲ್ಲಿ ವೃದ್ಧರಾದವರ ಶುಕ್ರವು ರಸ ರಕ್ತಾದಿಗಳ ಕ್ಷಯವಾಗುವದರಿಂದಲೂ ಧಾತು ವರ್ಧಕ ಆಹಾರಗಳನ್ನು ಸೇವಿಸದೆ ಇರುವದರಿಂದಲೂ ॥ ೧೭೭ ॥ ಬಲ ವೀರ್ಯ ಮತ್ತು ಇಂದ್ರಿಯಗಳು ಕ್ರಮದಿಂದ ಕಡಿಮೆಯಾಗುತ್ತ ನಡೆದಿರುವದರಿಂದಲೂ ಆಯುಷ್ಯ ಮತ್ತು ಆಹಾರಗಳು ಕಡಿಮೆಯಾಗುತ್ತಿರುವದರಿಂದಲೂ ಶ್ರಮ ಮತ್ತು ದಣಿವುಗಳಿಂದಲೂ ಬಹಳ ಮಾಡಿ ಕಡಿಮೆಯಾಗುತ್ತದೆ. ॥ ೧೭೮ ॥ ಈ ಕಾರಣಗಳಿಂದ ಜರಾಜನ್ಯ ನಪುಂಸಕತ್ವವುಂಟಾಗುತ್ತದೆ. ಅದರಿಂದ ಅವನಲ್ಲಿ ಧಾತುಕ್ಷಯ, ದೌರ್ಬಲ್ಯ ॥ ೧೭೯ ॥ ವಿವರ್ಣತೆ, ಅಶಕ್ತತೆ, ದೈನ್ಯಗಳು ಉಂಟಾಗಿ ತೀವ್ರವಾಗಿ ಬೇನೆಯನ್ನು ಹೊಂದುವನು. ಈಪ್ರಕಾರ ಜರಾಜನ್ಯ ನಪುಂಸಕತ್ವವು ಹೇಳಲ್ಪಟ್ಟಿತು. ನಾಲ್ಕನೆಯದಾದ ಕ್ಷಯಜನ್ಯ ನಪುಂಸಕತ್ವವನ್ನು ಹೇಳುತ್ತೇನೆ ಕೇಳಿರಿ. ॥ ೧೮೦ ॥

ಕ್ಷಯಜನ್ಯ ನಪುಂಸಕತ್ವವನ್ನು ಹೇಳುತ್ತಾರೆ.—

ಯಾವ ಪುರುಷನು ಬಹಳ ಚಿಂತೆ, ದುಃಖ, ಸಿಟ್ಟು, ಅಂಜಿಕೆಗಳಿಂದ, ಈರ್ಷೆ, ಉತ್ಕಂಠೆ, ಮದ, ದುಃಖಗಳನ್ನು ಯಾವಾಗಲೂ ಹೊಂದಿರುವನೋ ॥ ೧೮೧ ॥ ಅಥವಾ ಕೃಶನಿದ್ದು ರುಕ್ಷ ಅನ್ನ ಪಾನ ಔಷಧಿಗಳನ್ನು ಸೇವಿಸುವನೋ ದುರ್ಬಲ ಪ್ರಕೃತಿಯಿದ್ದರೂ ಉಪವಾಸ ಮಾಡುವನೋ ॥ ೧೮೨ ॥ ಅಥವಾ ತನಗೆ ತಡೆಯದ ಆಹಾರವನ್ನು ತಿನ್ನುವನೋ ಅವನ ಹೃದಯದಲ್ಲಿಯ ಮುಖ್ಯ

ರಸಧಾತುವು ತೀವ್ರವಾಗಿ ಕ್ಷೀಣಹೊಂದುವದು. ಆ ಮೇಲೆ ||೧೬೩|| ರಕ್ತ ಮೊದಲುಗೊಂಡು ಶುಕ್ರದ ವರೆಗೆ ಮನುಷ್ಯನ ಎಲ್ಲ ಧಾತುಗಳು ಕ್ಷೀಣವಾಗುವವು. ಶುಕ್ರವು ಎಲ್ಲ ಧಾತುಗಳ ಮುಖ್ಯಸ್ಥಾನವಾಗಿದೆ. ||೧೬೪||

ಪ್ರತಿಲೋಮ ಕ್ಷಯಜನ್ಯ ನಪುಂಸಕತ್ವವನ್ನು ಹೇಳುತ್ತಾರೆ—

ಮನಸಿನ ಅತಿ ಕಾಮವಿಕಾರದಿಂದ ಯಾವನು ಬಹಳ ಸ್ತ್ರೀಸಂಗ ಮಾಡುವನೋ ಅವನ ಶುಕ್ರವು ಕ್ಷೀಣವಾಗಿ ಆ ಮೇಲೆ ಅವನು ಕ್ಷಯಹೊಂದುವನು. || ೧೬೫ || ಭಯಂಕರ ಜೇನೆ ಅಥವಾ ಮರಣವುಂಟಾಗುವದು. ಆದ್ದರಿಂದ ಆರೋಗ್ಯವನ್ನು ಬಯಸುವವನು ವಿಶೇಷವಾಗಿ ಶುಕ್ರವನ್ನು ರಕ್ಷಿಸಬೇಕು. || ೧೬೬ || ಈ ಪ್ರಕಾರ ನಾಲ್ಕುವಿಧ ನಪುಂಸಕತ್ವಗಳ ಕಾರಣ ಲಕ್ಷಣಗಳನ್ನು ಹೇಳಿದೆವು.

ಸಾಧ್ಯಾಸಾಧ್ಯ ನಂಪುಸಕತೆಗಳನ್ನು ಹೇಳುತ್ತಾರೆ—

ಕೆಲವರು ಧ್ವಜಭಂಗದಿಂದ ಮತ್ತು ಕ್ಷಯದಿಂದ ಉಂಟಾದ ನಪುಂಸಕತೆಗಳು ಅಸಾಧ್ಯವೆಂದು ಹೇಳುತ್ತಾರೆ. || ೧೬೭ || ಶಿಶ್ನದ ಛೇದದಿಂದಲೂ ವೃಷಣವನ್ನು ಕೀಳುವದರಿಂದಲೂ ( ಆಗಂತು ) ನಪುಂಸಕತ್ವವುಂಟಾಗುತ್ತದೆ. ತಂದೆ—ತಾಯಿ ಬೀಜದೋಷದಿಂದ, ದುಷ್ಕರ್ಮಿಯ ಪಾಪಕೃತ್ಯಗಳಿಂದ || ೧೬೮ || ಅವನು ಗರ್ಭದಲ್ಲಿರುವಾಗ ಶುಕ್ರವಹ ಸಿರೆಗಳಲ್ಲಿ ದೋಷಗಳು ಸೇರಿ ಅವನ್ನು ತೀವ್ರವಾಗಿ ಒಣಗಿಸುತ್ತವೆ. ಅವುಗಳ ನಾಶದಿಂದ ಶುಕ್ರವು ನಷ್ಟವಾಗುತ್ತದೆ. || ೧೬೯ || ಆ ಪುರುಷನ ಎಲ್ಲ ಅವಯವಗಳು ಚೆನ್ನಾಗಿದ್ದರೂ ಅವನು ಗಂಡಸು ಇರುವದಿಲ್ಲ. ಇವು ಸನ್ನಿಪಾತಜನ್ಯವಾದ್ದರಿಂದ ಅಸಾಧ್ಯವೆಂದು ಹೇಳಲ್ಪಟ್ಟಿವೆ. || ೧೭೦ ||

ನಪುಂಸಕತ್ವದ ಸಾಮಾನ್ಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಚಿಕಿತ್ಸಿತಮತಶ್ಚೋರ್ಧ್ವಂ ಸಮಾಸವ್ಯಾಸತಃ ಶೃಣು ||**
**ಶುಕ್ರದೋಷೇಷು ನಿರ್ದಿಷ್ಟಂ ಭೇಷಜಂ ಯನ್ಮಯಾನಘ ||೯೦||**

**ಕ್ಲೈಬ್ಯೋಪಶಾಂತಯೇ ಕುರ್ಯಾತ್ ಕ್ಷೀಣಕ್ಷಯಹಿತಂ ಚ ಯತ್ ||**
**ಬಸ್ತಯಃ ಕ್ಷೀರಸರ್ಪಿಶ್ಚ ವೃಷ್ಯಯೋಗಾಶ್ಚ ಯೇ ಮತಾಃ ||೯೨||**

**ರಸಾಯನಪ್ರಯೋಗಾಶ್ಚ ಸರ್ವಾನೇತಾನ್ ಪ್ರಯೋಜಯೇತ್ ||**
**ಸಮೀಕ್ಷ್ಯದೇಹದೋಷಾಗ್ನಿ ಬಲಂ ಭೇಷಜಕಾಲವಿತ್ ||೯೩||**

**ವ್ಯವಾಯಹೇತುಜೇ ಕ್ಲೈಬ್ಯೇ ಕುರ್ಯಾದ್ಧೇತುವಿಪರ್ಯಯಾತ್ ||**
**ದೈವವ್ಯಪಾಶ್ರಯಂ ತತ್ರ ಭೇಷಜೈಶ್ಚಾಭಿಚಾರಜೇ ||೧೯೪||**

**ಸಮಾಸೇನೈತದುದ್ದಿಷ್ಟಂ ಭೇಷಜಂ ಕ್ಲೈಬ್ಯಶಾಂತಯೇ ||**
**ವಿಸ್ತರೇಣ ಪ್ರವಕ್ಷ್ಯಾಮಿ ಕ್ಲೈಬ್ಯಾನಾಂ ಭೇಷಜಂ ಪುನಃ ||೧೯೫||**

**ಅರ್ಥ—** ಇನ್ನು ಮೇಲೆ ಅವರ ಚಿಕಿತ್ಸೆಯನ್ನು ಸಂಕ್ಷೇಪ ಮತ್ತು ವಿಸ್ತಾರ ಹೇಳುವೆನು ಕೇಳಿರಿ. ಎಲೈ ನಿಷ್ಪಾಪ ಅಗ್ನಿವೇಶನೇ. ನಪುಂಸಕತ್ವದ ನಾಶಕ್ಕಾಗಿ ಶುಕ್ರರೋಗಗಳಲ್ಲಿ ।೧೯೧। ಮತ್ತು ಕ್ಷಯ-ಕ್ಷತರೋಗಗಳಲ್ಲಿ ನಾನು ಹೇಳಿದ ಔಷಧಗಳನ್ನು ಕೊಡಬೇಕು. ಅದರಂತೆ ಬಸ್ತಿ, (ಶುಕ್ರವರ್ಧಕ ದ್ರವ್ಯಗಳಿಂದ) ಸಿದ್ಧಮಾಡಿದ ಕ್ಷೀರ, ಘೃತ ||೧೯೨| ವೃಷ್ಯ ಮತ್ತು ರಸಾಯನ ಇವೆಲ್ಲವನ್ನು ಅವನ ದೇಹ-ದೋಷ-ಅಗ್ನಿ-ಬಲಗಳನ್ನು ವಿಚಾರಿಸಿ ಔಷಧ ಮತ್ತು ಕಾಲವನ್ನು ತಿಳಿದ ವೈದ್ಯನು ಉಪಯೋಗಿಸಬೇಕು. ||೧೯೩|| ಅತಿಮೈಥುನದಿಂದ ಉಂಟಾದ ಪ್ರತಿಲೋಮ ಕ್ಷಯಜನ್ಯ ನಪುಂಸಕತ್ವ ಕಾರಣ ವಿರುದ್ಧ ( ಬ್ರಹ್ಮಚರ್ಯ ) ಚಿಕಿತ್ಸೆಯನ್ನು ಮಾಡಬೇಕು. ಚೇಡಿಯಿಂದುಂಟಾದ ನಪುಂಸಕತ್ವಕ್ಕೆ ದೈವವ್ಯಪಾಶ್ರಯ ( ಮಂತ್ರ-ತಂತ್ರ-ದೇವತಾರಾಧನ ) ಮುಂತಾದ ಚಿಕಿತ್ಸೆ ಮಾಡಬೇಕು. ||೧೯೪|| ನಪುಂಸಕತ್ವದ ನಾಶಕ್ಕಾಗಿ ಸಂಕ್ಷೇಪದಿಂದ ಈ ಚಿಕಿತ್ಸೆಯು ಹೇಳಲ್ಪಟ್ಟಿತು. ಇನ್ನು ಮೇಲೆ ಪುನಃ ಇವುಗಳ ಚಿಕಿತ್ಸೆಯನ್ನು ವಿಸ್ತಾರವಾಗಿ ಹೇಳುವೆವು. ||೧೯೫||

ನಪುಂಸಕತ್ವದ ವಿಶೇಷ ಚಿಕಿತ್ಸೆಯನ್ನು ಹೇಳಹೊರಟು, ಮೊದಲು ಬೀಜದೋಷಜನ್ಯ ನಪುಂಸಕತ್ವದ ಚಿಕಿತ್ಸೆಯನ್ನು ಹೇಳುತ್ತಾರೆ—

**ಸುಸ್ನಿಗ್ಧಸ್ವಿನ್ನಗಾತ್ರಸ್ಯ ಸ್ನೇಹಯುಕ್ತಂ ವಿರೇಚನಮ್ ||**
**ಅನ್ವಾಸನಂ ತತಃ ಕುರ್ಯಾದಥವಾಸ್ಥಾಪನಂ ಪುನಃ ||೧೯೬||**

**ಪ್ರದದ್ಯಾನ್ಮತಿಮಾನ್ ವೈದ್ಯಸ್ತತಸ್ತಮನುವಾಸಯೇತ್ ||**
**ಪಲಾಶೈರಂಡಮುಸ್ತಾದ್ಯೈಃ ಪಶ್ಚಾದಾಸ್ಥಾಪಯೇತ್ತತಃ ||೧೯೭||**

**ವಾಜೀಕರಣಯೋಗಾಶ್ಚ ಪೂರ್ವಂ ಯೇ ಸಮುದಾಹೃತಾಃ ||**
**ಭಿಷಜಾ ತೇ ಪ್ರಯೋಜ್ಯಾಃ ಸ್ಯುಃ ಕ್ಲೈಬ್ಯೇ ಬೀಜೋಪಘಾತಜೇ ||೧೯೮||**

**ಧ್ವಜಭಂಗಕೃತಂ ಕ್ಲೈಬ್ಯಂ ಜ್ಞಾತ್ವಾ ತಸ್ಯಾಚರೇತ್ ಕ್ರಿಯಾಮ್ ||**
**ಪ್ರದೇಹಾನ್ ಪರಿಷೇಕಾಂಶ್ಚ ಕುರ್ಯಾದ್ ವಾ ರಕ್ತಮೋಕ್ಷಣಮ್ ||೧೯೯||**

**ಸ್ನೇಹಪಾನಂ ಚ ಕುರ್ವೀತ ಸಸ್ನೇಹಂ ಚ ವಿರೇಚನಮ್ ||**
**ವ್ರಣವಚ್ಚ ಕ್ರಿಯಾಃ ಸರ್ವಾಸ್ತತಃ ಕುರ್ಯಾದ್ ವಿಚಕ್ಷಣಃ ||೨೦೦||**
**ಜರಾಸಂಭವಜೇ ಕ್ಲೈಬ್ಯೇ ಕ್ಷಯಜೇ ಚಾಪಿ ಕಾರಯೇತ್ ||**
**ಸ್ನೇಹಸ್ವೇದೋಪಪನ್ನಸ್ಯ ಸಸ್ನೇಹಂ ಶೋಧನಂ ಹಿತಮ್ ||೨೦೧||**
**ಕ್ಷೀರಸರ್ಪಿರ್ವೃಷ್ಯಯೋಗಾ ಬಸ್ತಯಶ್ಚೈವ ಯಾಪನಾಃ ||**
**ರಸಾಯನಪ್ರಯೋಗಾಶ್ಚ ತಯೋರ್ಭೇಷಜಮುಚ್ಯತೇ ||೨೦೨||**
**ವಿಸ್ತರೇಣೈತದುದ್ದಿಷ್ಟಂ ಕ್ಲೈಬ್ಯಾನಾಂ ಭೇಷಜಂ ಪರಮ್ ||**

**ಅರ್ಥ—** ಶುಕ್ರದೋಷಜನ್ಯ ನಪುಂಸಕತ್ವದಲ್ಲಿ ಸ್ನೇಹ ಮತ್ತು ಸ್ವೇದ ಕೊಟ್ಟು ಸ್ನೇಹವಿರೇಚನ ಕೊಡಬೇಕು. ಅನ್ವಾಸನ ಬಸ್ತಿಯನ್ನು ಅಥವಾ ನಿರೂಹ ಬಸ್ತಿಯನ್ನು ಕೊಡಬೇಕು. ||೧೯೬|| ಜಾಣನಾದ ವೈದ್ಯನು ಆಮೇಲೆ ಪುನಃ ಅನುವಾಸನ ಬಸ್ತಿಯನ್ನು ಕೊಟ್ಟು, ಮುತ್ತುಲು-ಔಡಲು-ಜೇಕುಗಳ ಕಷಾಯದ ನಿರೂಹ ಬಸ್ತಿಯನ್ನು ಕೊಡಬೇಕು. ||೧೯೭|| ಹಿಂದೇ ಹೇಳಿದ ವಾಜೀಕರಣ ಯೋಗಗಳನ್ನು ವೈದ್ಯನು ಪ್ರಯೋಗಿಸಬೇಕು. ||೧೯೮||

ಧ್ವಜಭಂಗಜನ್ಯ ನಪುಂಸಕತ್ವ ಚಿಕಿತ್ಸೆಯನ್ನು ಹೇಳುತ್ತಾರೆ—

ಧ್ವಜಭಂಗದಿಂದ ಉಂಟಾದ ಕ್ಲೈಬ್ಯವನ್ನು ಕಂಡುಹಿಡಿದು, ಅದಕ್ಕೆ ಲೇಪ, ಪರಿಷೇಕ, ರಕ್ತಮೋಕ್ಷ ಮುಂತಾದ ಚಿಕಿತ್ಸೆಯನ್ನು ಮಾಡಬೇಕು. || ೧೯೯ || ಸ್ನೇಹಪಾನ ಮತ್ತು ಸ್ನೇಹಹಾಕಿದ ವಿರೇಚನವನ್ನು ಕೊಡಬೇಕು. ಆಮೇಲೆ ಜಾಣ ವೈದ್ಯನು ವ್ರಣದ ಎಲ್ಲ ಚಿಕಿತ್ಸೆಯನ್ನು ಮಾಡಬೇಕು. ||೨೦೦||

ಜರಾಜನ್ಯ ಮತ್ತು ಕ್ಷಯಜನ್ಯ ನಪುಂಸಕತ್ವ ಚಿಕಿತ್ಸೆಯನ್ನು ಹೇಳುತ್ತಾರೆ—

ಜರಾಜನ್ಯ, ಕ್ಷಯಜನ್ಯ ನಪುಂಸಕತ್ವಗಳಲ್ಲಿ ಸ್ನೇಹ ಸ್ವೇದಕೊಟ್ಟು ಆಮೇಲೆ ಸ್ನೇಹ ಹಾಕಿದ ವಿರೇಚನ ಕೊಡಬೇಕು. ||೨೦೧|| (ಸಿದ್ಧಮಾಡಿದ) ಕ್ಷೀರ, ಘೃತ, ವಾಜೀಕರಣ ಔಷಧ (ಸಿದ್ಧಿಸ್ಥಾನದಲ್ಲಿ ಹೇಳಿದ) ಯಾಪನ, ಬಸ್ತಿ ಮತ್ತು ರಸಾಯನ ಪ್ರಯೋಗಗಳು ಅವುಗಳ ಔಷಧಗಳಾಗಿವೆ. ||೨೦೨|| ಈ ಪ್ರಕಾರ ನಪುಂಸಕತ್ವದ ಔಷಧಗಳು ವಿಸ್ತಾರವಾಗಿ ಹೇಳಲ್ಪಟ್ಟವು. || ೨೦೩|| ||

ಪ್ರದರದ ಸಾಮಾನ್ಯ ಕಾರಣ ಲಕ್ಷಣಗಳನ್ನು ಹೇಳುತ್ತಾರೆ—

**ಯಃ ಪೂರ್ವಮುಕ್ತಃ ಪ್ರದರಃ ಶೃಣು ಹೇತ್ವಾದಿಭಿಃ ಪೃಥಕ್ ||೨೦೪||**
**ಯ್ಯಾತ್ಯರ್ಥಂ ಸೇವತೇ ನಾರೀ ಲವಣಾಮ್ಲಗುರೂಣಿ ಚ ||**
**ಕಟೂನ್ಯಥ ವಿದಾಹೀನಿ ಸ್ನಿಗ್ಧಾನಿ ಪಿಶಿತಾನಿ ಚ ||೨೦೫||**

ಗ್ರಾಮಔದಕಾನಿ ಮೇಧ್ಯಾನಿ ಕೃಶರಾಂ ಪಾಯಸಂ ದಧಿ ||
ಶುಕ್ತಮತ್ಸ್ಯಸುರಾದೀನಿ ಭಜಂತ್ಯಾಃ ಕುಪಿತೋಽನಿಲಂ ||೨೦೫||

ರಕ್ತಂ ಪ್ರಮಾಣಮುತ್ಕ್ರಮ್ಯ ಗರ್ಭಾಶಯಗತಾಃ ಶಿರಾಃ ||
ರಜೋವಹಾಃ ಸಮಾಶ್ರಿತ್ಯ ರಕ್ತಮಾದಾಯ ತದ್ರಜಃ ||೨೦೬||

ತಸ್ಮಾದ್ವಿವೃದ್ಧಯತ್ಯಾಶು ರಸಭಾವಾದ್ ವಿಮಾನತಾ ||
ತಸ್ಮಾದಸೃಗ್‌ದರಂ ಪ್ರಾಹುರೇತತ್ ತಂತ್ರವಿಶಾರದಾಃ ||೨೦೭||
ರಜಃ ಪ್ರದೀರ್ಯತೇ ಯಸ್ಮಾತ್ ಪ್ರದರಸ್ತೇನ ಕಥ್ಯತೇ ||
ಸಾಮಾನ್ಯತಃ ಸಮುದ್ದಿಷ್ಟಂ ಕಾರಣಂ ಲಿಂಗಮೇವಚ ||೨೦೮||

ಹಿಂದೆ ಹೇಳಿದ ಪ್ರದರದ ಕಾರಣ ಲಕ್ಷಣಗಳನ್ನು ಕೇಳಿರಿ. ||೨೦೩|| ಯಾವಳು ಉಪ್ಪು, ಹುಳಿ, ಜಡ, ಕಾರ, ವಿದಾಹಿ ಪದಾರ್ಥಗಳನ್ನು ಮತ್ತು ಸ್ನಿಗ್ಧ, ಗ್ರಾಮ್ಯ ಜಲಚರ ಪುಷ್ಟಪ್ರಾಣಿಗಳ ಮಾಂಸವನ್ನು ||೨೦೪|| ಹುಗ್ಗಿ, ಪಾಯಸ, ಮೊಸರು, ಶುಕ್ತ ( ಕಂದಮೂಲದ ಮದ್ಯ ), ಮೀನ, ಮದ್ಯ ಮುಂತಾದವುಗಳನ್ನು ಹೆಚ್ಚಾಗಿ ತಿನ್ನುವಳೋ ಆವಳ ವಾತವು ಕುಪಿತ ವಾಗಿ, ||೨೦೫|| ರಕ್ತದ ಪ್ರಮಾಣವನ್ನು ಹೆಚ್ಚಿಸಿ, ಗರ್ಭಾಶಯದ ರಜೋವಹ ಸೀರೆಗಳನ್ನು ಸಾರಿ ಆ ರಕ್ತದಿಂದ ರಜಸವನ್ನು ಹೆಚ್ಚಿಸುವದು. ||೨೦೬|| ಅದೂ ರಕ್ತವೇ ಇರುವದರಿಂದ ಮೊದಲಿನ ಪ್ರಮಾಣವು ಹೆಚ್ಚುವದು. ಆದ್ದರಿಂದ ( ಅಸೃಕ್ ಪ್ರದೀಯತೇ—ರಕ್ತವು ಹೆಚ್ಚುವದು ಅಥವಾ ಒಡೆದುಬರುವದು. ) ಇದಕ್ಕೆ ' ಅಸೃಕ್‌ದರ ' ಎಂದು ||೨೦೭|| ಅಥವಾ ' ಪ್ರದರ ' (ಪ್ರದೀರ್ಯ ತೇ=ರಕ್ತವು ಹೆಚ್ಚುವದು—ಒಡೆದು ಬರುವದು ) ಎಂದು ಶಾಸ್ತ್ರಜ್ಞರು ಕರೆ ಯುವದು. ಈಪ್ರಕಾರ ಇದರ ಸಾಮಾನ್ಯ ಕಾರಣ ಲಕ್ಷಣವು ಹೇಳಲ್ಪಟ್ಟಿತು. ||೨೦೮||

ಪ್ರದರದ ವಿಶೇಷ ಲಕ್ಷಣ ಚಿಕಿತ್ಸೆಯನ್ನು ಹೇಳುತ್ತಾರೆ—

ಚತುರ್ವಿಧಂ ವ್ಯಾಸತಸ್ತು ವಾತಾದ್ಯೈಃ ಸನ್ನಿಪಾತತಃ ||
ಅತಃ ಪರಂ ಪ್ರವಕ್ಷ್ಯಾಮಿ ಹೇತ್ವಾಕೃತಿಭಿಷಗ್‌ಜಿತಮ್ ||೨೦೯||

ರೂಕ್ಷಾದಿಭಿರ್ಮಾರುತಸ್ತು ರಕ್ತಮಾದಾಯ ಪೂರ್ವವತ್ ||
ಕುಪಿತಃ ಪ್ರದರಂ ಕುರ್ಯಾಲ್ಲಕ್ಷಣಂ ತಸ್ಯ ಮೇ ಶೃಣು ||೨೧೦||

**ಅರ್ಥ—** ವಾತಜ, ಪಿತ್ತಜ, ಕಫಜ, ಸನ್ನಿಪಾತಜ ಎಂದು ಪ್ರದ ರವು ನಾಲ್ಕು ವಿಧವು. ಆವುಗಳ ಕಾರಣ, ಲಕ್ಷಣ, ಚಿಕಿತ್ಸೆಗಳನ್ನು ಇನ್ನು-

ಮುಂದೆ ವಿಸ್ತಾರವಾಗಿ ಹೇಳುವೆವು. ||೨೦೯|| ಹಿಂದೆ ಹೇಳಿದಂತೆ ರುಕ್ಷಾದಿ ಗಳಿಂದ ಕುಪಿತವಾದ ವಾಯುವು ರಕ್ತವನ್ನು ತಕ್ಕೊಂಡು ಪ್ರದರವನ್ನುಂಟು ಮಾಡುತ್ತದೆ ಆದರ ಲಕ್ಷಣವನ್ನು ಕೇಳಿರಿ. ||೨೧೦||

ವಾತಜ ಪ್ರದರದ ಲಕ್ಷಣವನ್ನು ಹೇಳುತ್ತಾರೆ—

**ತನುಫೇನಿಲರೂಕ್ಷಂ ಚ ಶ್ಯಾವಮಾರುಣಮೇವ ಚ ||**
**ಕಿಂಶುಕೋದಕಸಂಕಾಶಂ ಸರುಜಂ ವಾಥ ನೀರುಜಮ್ ||೨೧೧||**
**ಕಟೀವಂಕ್ಷಣಹೃತ್‌ಪಾರ್ಶ್ವಪೃಷ್ಠಶ್ರೋಣಿಷು ಮಾರುತಃ ||**
**ವೇದನಾಂ ಕುರುತೇ ತೀವ್ರಮೇತದ್ ವಾತಾತ್ಮಕಂ ವಿದುಃ ||೨೧೨||**

**ಅರ್ಥ—** ವಾತಜ ಪ್ರದರದಲ್ಲಿ ತೆಳ್ಳಗೆ, ಬುರುಗುಬರುಗು, ರುಕ್ಷ, ಕಪ್ಪು, ಮುತ್ತುಲ ಸೀರಿನಂತೆ ಸಸುಗೆಂಪು, ನೋವುಳ್ಳ ಅಥವಾ ಇಲ್ಲದಿರುವ ಆರ್ತವವು ಇರುತ್ತದೆ. ||೨೧೧|| ಮತ್ತು ವಾತವು ಟೊಂಕ, ಗೆಜ್ಜಿ, ಎದೆ, ಪಾರ್ಶ್ವ, ಬೆನ್ನು, ತಿಗಗಳಲ್ಲಿ ತೀವ್ರ ವೇದನೆಯನ್ನುಂಟು ಮಾಡುತ್ತದೆ. ||೨೧೨||

ಪಿತ್ತಜ ಪ್ರದರ ಲಕ್ಷಣವನ್ನು ಹೇಳುತ್ತಾರೆ—

**ಆಮ್ಲೋಷ್ಣಲವಣಕ್ಷಾರೈಃ ಪಿತ್ತಂ ಪ್ರಕುಪಿತಂ ಯದಾ ||**
**ಪೂರ್ವವತ್ ಪ್ರದರಂ ಕುರ್ಯಾತ್ ಪೈತ್ತಿಕಂ ಲಿಂಗತಃ ಶೃಣು ||೨೧೩||**
**ಸನೀಲಮಥವಾ ಕೃಷ್ಣಮತ್ಯುಷ್ಣಂ ಪೀತಕಂ ತಥಾ ||**
**ನಿತಾಂತರಕ್ತಂ ಸ್ರವತಿ ಮುಹುರ್ಮುಹುರಥಾರ್ತಿಮತ್ ||೨೧೪||**
**ರಾಗದಾಹತೃಷಾಮೋಹಜ್ವರಭ್ರಮಸಮಾಯುತಮ್ ||**
**ಅಸೃಗ್ದರಂ ಪೈತ್ತಿಕಂ ತತ್ ಶ್ಲೈಷ್ಮಿಕಂ ತು ಪ್ರವಕ್ಷ್ಯತೇ ||೨೧೫||**

**ಅರ್ಥ—** ಹುಳಿ, ಉಷ್ಣ, ಉಪ್ಪು, ಕಾರಗಳಿಂದ ಕುಪಿತವಾದ ಪಿತ್ತವು ಹಿಂದೆ ಹೇಳಿದಂತೆ ರಕ್ತವನ್ನು ಹೆಚ್ಚಿಸಿ, ಪಿತ್ತಜ ಪ್ರದರವನ್ನುಂಟುಮಾಡುತ್ತದೆ ಆದರ ಲಕ್ಷಣವನ್ನು ಕೇಳಿರಿ. ||೨೧೩|| ನೀಲ ಅಥವಾ ಕಪ್ಪು ಬಣ್ಣದ ಅಥವಾ ಹಳದಿ ಬಣ್ಣದ, ಅತ್ಯುಷ್ಣ ಬಹಳ ಆರ್ತವವು ಆಗಾಗ್ಗೆ ಕಷ್ಟದಿಂದ ಸ್ರವಿಸುತ್ತದೆ. ||೨೧೪|| ಇದರಲ್ಲಿ ಕೆಂಪುಬಣ್ಣ, ದಾಹ, ನೀರಡಿಕೆ, ಮೋಹ, ಜ್ವರ, ಭ್ರಮಗಳು ಇರುತ್ತವೆ. ಇದು ಪಿತ್ತಜಪ್ರದರವು. ಇನ್ನು ರಕ್ತಜಪ್ರದರವನ್ನು ಹೇಳುವೆವು. ||೨೧೫||

ಕಫಜ ಪ್ರದರದ ಲಕ್ಷಣವನ್ನು ಹೇಳುತ್ತಾರೆ—

ಗುರ್ವಾದಿಭಿರ್ಹೇತುಭಿಶ್ಚ ಪೂರ್ವವತ್ ಕುಪಿತಃ ಕಫಃ ||
ಪ್ರದರಂ ಕುರುತೇ ತಸ್ಯ ಲಕ್ಷಣಂ ತತ್ವತಃ ಶೃಣು ||೨೧೬||
ಪಿಚ್ಛಿಲಂ ಪಾಂಡುವರ್ಣಂ ಚ ಗುರು ಸ್ನಿಗ್ಧಂ ಚ ಶೀತಲಮ್ ||
ಸ್ರವತ್ಯಸೃಕ್ ಶ್ಲೇಷ್ಮಲಂ ಚ ತಥಾ ಮಂದರುಜಾಕರಮ್ ||೨೧೭||
ಛರ್ದ್ಯರೋಚಕಹೃಲ್ಲಾಸಶ್ವಾಸಕಾಸಸಮಾಯುತಮ್ ||
ತ್ರಿಲಿಂಗಸಂಯುತಂ ವಿದ್ಯಾನ್ನೈಕಾವಸ್ಥಮಸೃಗ್ದರಮ್ ||೨೧೮||
ನಾರೀ ತ್ವತಿಪರಿಕ್ಲಿಷ್ಟಾ ಯದಾ ಪ್ರಕ್ಷೀಣಶೋಣಿತಾ ||
ಸರ್ವಹೇತುಸಮಾಚಾರಾದತಿವೃದ್ಧಸ್ತದಾನಿಲಃ ||೨೧೯||
ರಕ್ತಮಾರ್ಗೇಣ ಸೃಜತಿ ಪ್ರತ್ಯನೀಕಬಲಂ ಕಫಮ್ ||
ದುರ್ಗಂಧಂ ಪಿಚ್ಛಿಲಂ ಶೀತಃ ವಿದಗ್ಧಃ ಪಿತ್ತತೇಜಸಾ ||೨೨೦||
ವಸಾಮೇದಶ್ಚ ಯಾವದ್ಧಿ ತಮುಪಾದಾಯ ವೇಗವಾನ್ ||
ಸೃಜತ್ಯಾರ್ತವಮಾರ್ಗೇಣ ಸರ್ಪಿರ್ಮಜ್ಜವಸೋಪಮಮ್ ||೨೨೧||
ಶಶ್ವತ್ ಸ್ರವತ್ಯಥಾಸ್ರಾವಂ ತೃಷ್ಣಾದಾಹಜ್ವರಾನ್ವಿತಮ್ ||
ಕ್ಷೀಣರಕ್ತಾಂ ದುರ್ಬಲಾಂ ಚ ತಾಮಸಾಧ್ಯಾಂ ವಿವರ್ಜಯೇತ್ ||೨೨೨||

**ಅರ್ಥ—** ಜಡ ಮುಂತಾದ ಆಹಾರಗಳಿಂದ ಕುಪಿತವಾದ ಕಫವು ರಕ್ತವನ್ನು ಹೆಚ್ಚಿಸಿ ಪ್ರದರವನ್ನುಂಟುಮಾಡುತ್ತದೆ. ಅದರ ಯಥಾರ್ಥ ಲಕ್ಷಣವನ್ನು ಕೇಳಿರಿ. || ೨೧೬ || ಇದರಲ್ಲಿ ಜಿಗಟು, ಬಿಳೇಬಣ್ಣದ, ಜಡ, ಸ್ನಿಗ್ಧ, ತಣ್ಣಗಿನ, ಕಫಕೂಡಿದ ಬಹಳ ನೋವಿಲ್ಲದ ಸ್ರಾವವು ಆಗುತ್ತದೆ. || ೨೧೭ || ಅದರಲ್ಲಿ ವಾಂತಿ, ಅರುಚಿ, ಓಕರಿಕೆ, ಕೆಮ್ಮು ದಮ್ಮುಗಳಿರುವವು. ಮೂರೂ ಲಕ್ಷಣಗಳಿಂದ ಕೂಡಿದ ಒಂದೇ ಅವಸ್ಥೆಯಿರುವದಿಲ್ಲ. || ೨೧೮ || ಅತಿಶಯ ಕ್ಲೇಶ ಅಥವಾ ರಕ್ತಕ್ಷಯವಾಗಲು ಎಲ್ಲ ಕಾರಣಗಳಿಂದ ಕುಪಿತವಾದ ವಾಯುವು || ೨೧೯ || ಅಪತ್ಯಮಾರ್ಗದಿಂದ ಬಲಹಾನಿಯನ್ನುಂಟುಮಾಡುವ ದುರ್ಗಂಧ, ಜಿಗಟು, ಹಳದಿಯಾದ ಕಫವನ್ನು ಬಿಡುವದು. ಪಿತ್ತತೇಜಸ್ಸಿನಿಂದ ವಿದಗ್ಧವಾದ ವಾಯುವು ||೨೨೦|| ಎಲ್ಲ ನೆಣ ಮೇದಗಳನ್ನು ತಕ್ಕೊಂಡು, ಘೃತ ಮಜ್ಜೆ ನೆಣದಂತೆ ಇದ್ದ ಸ್ರಾವವವನ್ನು ಆಪತ್ರಾ ಮಾರ್ಗದಿಂದ ವೇಗದಿಂದ ಕೆಡವುವದು. ||೨೨೧|| ಆ ಸ್ರಾವವು

ಯಾವಾಗಲೂ ಸ್ರವಿಸುವದು. ಮತ್ತು ಯಾವಾಗಲೂ ನೀರಡಿಕೆ ದಾಹಗಳಿರುವವು. ಅಶಕ್ತ ಆರ್ತವ ಕ್ಷಯವುಳ್ಳ ಆ ಸ್ತ್ರೀಯು ಅಸಾಧ್ಯಳೆಂದು ತಿಳಿಯಬೇಕು. ||೨೨೨||

ಶುದ್ಧಾರ್ತವದ ಲಕ್ಷಣವನ್ನು ಹೇಳುತ್ತಾರೆ—

**ಮಾಸಾನ್ನಿಷ್ಪಿಚ್ಛದಾಹಾರ್ತಿ ಪಂಚರಾತ್ರಾನುಬಂಧಿ ಚ ||**
**ನೈವಾತಿಬಹುಲಾತ್ಯಲ್ಪಮಾರ್ತವಂ ಶುದ್ಧಮಾದಿಶೇತ್ ||೨೨೩||**
**ಗುಂಜಾಫಲಸವರ್ಣಂ ಚ ಯದ್ವಾಲಕ್ತಕಸನ್ನಿಭಮ್ ||**
**ಇಂದ್ರಗೋಪಕಸಂಕಾಶಮಾರ್ತವಂ ಶುದ್ಧಮಾದಿಶೇತ್ ||೨೨೪||**
**ವಾತಾಧ್ಯಾನಾಂ ಚ ಯೋನೀನಾಂ ಯದುಕ್ತಮಿಹ ಭೇಷಜಮ್ ||**
**ಚತುರ್ಣಾಂ ಪ್ರದರಾಣಾಂ ಚ ತತ್ಸರ್ವಂ ಕಾರಯೇದ್ಭಿಷಕ್ ||೨೨೫||**
**ರಕ್ತಾತಿಸಾರಿಣಾಂ ಯಚ್ಚ ತಥಾ ಲೋಹಿತಪಿತ್ತಿನಾಂ ||**
**ರಕ್ತಾರ್ಶಸಾಂ ಚ ಯತ್ಪ್ರೋಕ್ತಂ ಭೇಷಜಂ ತಚ್ಚ ಕಾರಯೇತ್ ||೨೨೬||**

**ಅರ್ಥ—** ತಿಂಗ ತಿಂಗಳಿಗೆ— ಲೋಳೆ, —ದಾಹ, —ನೋವುಗಳಿಲ್ಲದೆ ಅತ್ಯಲ್ಪ ಅಥವಾ ಅತಿ ಬಹಳವಿರದೆ ಇದ್ದ— ಐದು ದಿವಸ ಬರುವ ಆರ್ತವವು ಶುದ್ಧವೆಂದು ತಿಳಿದಿರಬೇಕು. ||೨೨೩|| ಗುಲಗಂಜಿಯಂತೆ ಇರುವ ಅಥವಾ ಅಲತಿಗೆಯ ಬಣ್ಣದಂತೆ ಇರುವ ಅಥವಾ ಇಂದ್ರಗೋಪ ಹುಳದಂತೆ ಕೆಂಪಗಿರುವ ಆರ್ತವವು ಶುದ್ಧವೆಂದು ತಿಳಿಯಬೇಕು. ||೨೨೪|| ವಾತದೂಷಿತ ಯೋನಿಗಳಿಗೆ ಈ ಅಧ್ಯಾಯದಲ್ಲಿ ಹೇಳಿದ ಎಲ್ಲ ಔಷಧಗಳನ್ನು ವೈದ್ಯನು ನಾಲ್ಕೂ ಪ್ರದರಗಳಲ್ಲಿ ಕೊಡಬೇಕು. ||೨೨೫|| ಅದರಂತೆ ರಕ್ತಾತಿಸಾರ, ರಕ್ತಪಿತ್ತ, ರಕ್ತಮೂಲವ್ಯಾಧಿಗಳಲ್ಲಿ ಹೇಳಿದ ಔಷಧಗಳನ್ನು ಕೊಡಬೇಕು. ||೨೨೬||

ಸ್ತನ್ಯದೋಷಗಳನ್ನು ಹೇಳುತ್ತಾರೆ—

**ಧಾತ್ರೀಸ್ತನಸ್ತನ್ಯಸಂಪದುಕ್ತಾ ವಿಸ್ತರತಃ ಪುರಾ ||**
**ಸ್ತನ್ಯಸಂಜನನಂ ಚೈವ ಸ್ತನ್ಯಸ್ಯ ಚ ವಿಶೋಧನಮ್ ||೨೨೭||**
**ವಾತಾದಿದುಷ್ಟಲಿಂಗಂ ಚ ಕ್ಷೀಣಸ್ಯ ಚ ಚಿಕಿತ್ಸಿತಮ್ ||**
**ತತ್ಸರ್ವಮುಕ್ತಂ ಯೇ ತ್ವಷ್ಟೌ ಕ್ಷೀರದೋಷಾಃ ಪ್ರಕೀರ್ತಿತಾಃ ||೨೨೮||**

ವಾತಾದಿಷ್ವೇವ ತಾನ್ವಿದ್ಯಾಚ್ಛಾಸ್ತ್ರಚಕ್ಷುರ್ಭಿಷಗ್ವರಃ ||
ತ್ರಿವಿಧಾಸ್ತು ಯತಃಶಿಷ್ಯಾಸ್ತತೋ ವಕ್ಷ್ಯಾಮಿ ವಿಸ್ತರಮ್ ||೨೨೯||

ಅಜೀರ್ಣಾಸಾತ್ಮ್ಯವಿಷಮವಿರುದ್ಧಾತ್ಯರ್ಥಭೋಜನಾತ್ ||
ಲವಣಾಮ್ಲಕಟುಕ್ಷಾರಪ್ರಕ್ಲಿನ್ನಾನಾಂ ಚ ಸೇವನಾತ್ ||೨೩೦||

ಮನಃಶರೀರಸಂತಾಪಾದಸ್ವಪ್ನಾನ್ನಿಶಿಚಿಂತನಾತ್ ||
ಪ್ರಾಪ್ತವೇಗಪ್ರತೀಘಾತಾದಪ್ರಾಪ್ತೋದೀರಣೇನ ಚ ||೨೩೧||

ಪರಮಾನ್ನಂ ಗುಡಘೃತಂ ಮತ್ಸ್ಯಂ ಚ ಕೃಶರಾಂ ದಧಿ ||
ಅಭಿಷ್ಯಂದೀನಿ ಮಾಂಸಾನಿ ಗ್ರಾಮ್ಯಾನೂಪೌದಕಾನಿ ಚ ||೨೩೨||

ಭುಕ್ತ್ವಾ ಭುಕ್ತ್ವಾ ದಿವಾ ಸ್ವಪ್ನಾತ್ ಮದ್ಯಸ್ಯಾತಿ ಚ ಸೇವನಾತ್ ||
ಅಭಿಚಾರಾದಸಾಯಾಸಾದ್ ವ್ಯಾಧಿಭಿಃ ಕರ್ಷಣೇನ ಚ ||೨೩೩||

ದೋಷಾಃ ಕ್ಷೀರಾಶ್ರಯಾಃ ಪ್ರಾಪ್ಯ ಸಿರಾಃ ಸ್ತನ್ಯಂ ಪ್ರದೂಷ್ಯ ಚ ||
ಕುರ್ಯುರಷ್ಟವಿಧಂ ಭೂಯೋ ದೋಷತಸ್ತನ್ನಿಬೋಧ ಮೇ ||೨೩೪||

ವೈರಸ್ಯಂ ಫೇನಸಂಘಾತೋ ರೌಕ್ಷ್ಯಂ ಚೇತ್ಯನಿಲಾತ್ಮಕೇ ||
ಪಿತ್ತಾದ್ ವೈವರ್ಣ್ಯದೌರ್ಗಂಧ್ಯೇ ಸ್ನೇಹಪೈಚ್ಛಿಲ್ಯಗೌರವಮ್ ||೨೩೫||

**ಅರ್ಥ—** ಹಿಂದೆ (ಜಾತೀಯಾತ್ರೀಯ ಅಧ್ಯಾಯದಲ್ಲಿ) ಧಾತ್ರಿ, ಆಕೆಯ ಸ್ತನ ಮತ್ತು ಅವರಲ್ಲಿಯ ಹಾಲು ಹೇಗೆ ಇರಬೇಕೆಂಬುದನ್ನು, ಸ್ತನ್ಯವನುಂಟು ಮಾಡುವ ಮತ್ತು ಅದನ್ನು ಶುದ್ಧಿ ಮಾಡುವ ಔಷಧಗಳನ್ನು ||೨೨೭|| ವಾತಾದಿಗಳ ದುಷ್ಟಿಯಿಂದಾಗುವ ಲಕ್ಷಣಗಳನ್ನು, ಹಾಲು ಕಡಿಮೆಯಾದರೆ ಮಾಡಬೇಕಾದ ಚಿಕಿತ್ಸೆಯೆಲ್ಲವನ್ನು ವಿಸ್ತಾರವಾಗಿ ಹೇಳಿದೆವು. ಮತ್ತು ಎಂಟು(ವಿವರ್ಣತೆ, ವಿಗಂಧತೆ, ವಿರಸತೆ, ಲೋಳೆ, ಬುರುಗು, ರುಕ್ಷತೆ, ಜಡತ್ವ, ಅತಿಸ್ನಿಗ್ಧತ್ವ) ಕ್ಷೀರದೋಷಗಳನ್ನು ಹೇಳಿದೆವು. ||೨೨೮|| ಶಾಸ್ತ್ರಜ್ಞನಾದಂಥ ವೈದ್ಯಶ್ರೇಷ್ಠನು ವಾತಾದಿ ದೋಷಗಳಲ್ಲಿಯೇ ಆ ೮ ದೋಷಗಳನ್ನು ಕಂಡುಕೊಂಡು ಅದರಂತೆ ಚಿಕಿತ್ಸೆ ಮಾಡಬಲ್ಲನು. ಆದರೆ ಶಿಷ್ಯರು ಉತ್ತಮ, ಮಧ್ಯಮ, ಕನಿಷ್ಟ, ಎಂದು ಮೂರು ಪ್ರಕಾರವಿರುವದರಿಂದ ಮಧ್ಯಮ ಮತ್ತು ಕನಿಷ್ಟ ವೈದ್ಯರಿಗೆ ತಿಳಿಯುವದಕ್ಕಾಗಿ ವಿಸ್ತಾರದಿಂದ ಹೇಳುವೆನು. ||೨೨೯|| ಜೀರ್ಣಿಸದ ಮಾನಿಸದ, ವಿಷಮ, ವಿರುದ್ಧ ಮತ್ತು ಅತಿ ಆಹಾರದಿಂದ ಉಪ್ಪು, ಹುಳಿ ಕಾರ, ಕ್ಷಾರ, ಹಳಸಿದ ಪದಾರ್ಥಗಳನ್ನು ಸೇವಿಸುವದರಿಂದ || ೨೩೦ ||

ಶರೀರ ಮನಸ್ಸುಗಳ ತಾಪದಿಂದ, ರಾತ್ರಿ ಜಾಗರಣೆಯಿಂದ, ಚಿಂತೆಯಿಂದ ವೇಗಗಳ ಧಾರಣ ಮತ್ತು ಉದೀರ್ಣಗಳಿಂದ ||೨೩೧|| ಪರಮಾನ್ನ, ಬೆಲ್ಲ, ತುಪ್ಪ, ಮೊಸರು, ಹುಗ್ಗಿ, ಮೊಸರು, ಕಫಕಾರಕವಾದ ಗ್ರಾಮ್ಯ ಮಲಿನಾಡಿನ ಮತ್ತು ನೀರಿನಲ್ಲಿರುವ ಪ್ರಾಣಿಗಳ ಮಾಂಸವನ್ನು ||೨೩೨|| ತಿಂದು ತಿಂದು ಹಗಲು ಮಲಗುವದರಿಂದ, ಬಹಳ ಮದ್ಯ ಕುಡಿಯುವದರಿಂದ, ಪೀಡಿಯಿಂದ, ಶ್ರಮ ಮಾಡದೇ ಇರೋಣದಿಂದ, ಬೇನೆಯಿಂದ ಅಶಕ್ತವಾಗುವದರಿಂದ, ||೨೩೩|| ದೋಷಗಳು ಕ್ಷೀರವಿರುವ ಸಿರೆಗಳಲ್ಲಿ ಸೇರಿ, ಹಾಲನ್ನು ಕೆಡಿಸಿ, ಎಂಟು ತರದ ದುಷ್ಟಿಯನ್ನುಂಟುಮಾಡುವವು. ಅವುಗಳು ಯಾವ ದೋಷಗಳಿಂದುಂಟಾಗುತ್ತವೆಂಬದನ್ನು ಹೇಳುವೆನು ಕೇಳು ||೨೩೪|| ವಾತ ದುಷ್ಟ ಸ್ತನ್ಯದಲ್ಲಿ ವಿವರ್ಣತೆ ದುರ್ಗಂಧಗಳೂ ಕಫದುಷ್ಟ ಸ್ತನ್ಯದಲ್ಲಿ ಸ್ನಿಗ್ಧತೆ, ಲೋಳ, ಜಡತ್ವಗಳೂ ಇರುವವು. ||೨೩೫||

ಮೇಲೆ ಹೇಳಿದ ವೈರಸ್ಯ, ಬುರುಗು, ರೂಕ್ಷತೆ ಈ ದೋಷಗಳು ವಾತದಿಂದ ಹೇಗೆ ಉಂಟಾಗುವವೆಂಬುದನ್ನೂ ಅವುಗಳ ಕಾರ್ಯಗಳನ್ನೂ ಹೇಳುತ್ತಾರೆ—

**ಕಷಾಯ್ ಭವತಿ ರೌಕ್ಷ್ಯಾದ್ವೈರನಿಲಃ ಸ್ವೈಃ ಪ್ರಕೋಪಣೈಃ ||**
**ಕ್ರುದ್ಧಃ ಕ್ಷೀರಾಶ್ರಯಃ ಪ್ರಾಪ್ಯ ರಸಂ ಸ್ತನ್ಯಂ ಪ್ರದೂಷಯೇತ್ ||೨೩೬||**
**ವಿರಸಂ ವಾತಸಂಸೃಷ್ಟಂ ಕೃಶೋ ಭವತಿ ತತ್ ಪಿಬನ್ ||**
**ನ ಚಾಸ್ಯ ಸ್ವದತೇ ಕ್ಷೀರಂ ಕೃಚ್ಛ್ರೇಣ ಚ ವಿವರ್ಧತೇ ||೨೩೭||**
**ತಥೈವ ವಾಯುಃ ಕುಪಿತಃ ಸ್ತನ್ಯಮಂತರ್ವಿಲೋಡಯನ್ ||**
**ಕರೋತಿ ಫೇನಸಂಘಾತಂ ತತಃ ಕೃಚ್ಛ್ರಾತ್ ಪ್ರವರ್ತತೇ ||೨೩೮||**
**ತೇನ ಕ್ಷಾಮಸ್ವರೋ ಬಾಲೋ ಬದ್ಧವಿಣ್ಮೂತ್ರಮಾರುತಃ ||**
**ವಾತಿಕಂ ಶೀರ್ಷರೋಗಂ ವಾ ಪೀನಸಂ ವಾ ಸ ಗಚ್ಛತಿ ||೨೩೯||**
**ಪೂರ್ವವತ್ ಕುಪಿತಸ್ತನ್ಯೇ ಸ್ನೇಹಂ ಶೋಷಯತೇಽನಿಲಃ ||**
**ರೂಕ್ಷಂ ತತ್‌ಪಿಬತೋ ರೌಕ್ಷ್ಯಾದ್ ಬಲಹ್ರಾಸಶ್ಚ ಜಾಯತೇ ||೨೪೦||**

**ಅರ್ಥ—** ಹಾಲಿನಲ್ಲಿ ಸೇರಿದ ವಾತವು ರೂಕ್ಷತೆ ಮುಂತಾದ ಕಾರಣಗಳಿಂದ ಕುಪಿತವಾಗಿ ಸ್ತನ್ಯದ ರಸವನ್ನು ಕೆಡಿಸುವದು || ೨೩೬ || ಹೀಗೆ ವಾತಯುಕ್ತ, ರಸಹೀನವಾದ ಹಾಲನ್ನು ಕುಡಿಯುವ ಕೂಸು ಕೃಶವಾಗುವದು. ಹಾಲು ಸವಿ ಹತ್ತದು. ಆದ್ದರಿಂದ ಕಷ್ಟದಿಂದ ಬೆಳೆಯುವದು ||೨೩೭||

ಅದರಂತೆ ಕುಪಿತವಾಯುವು ಸ್ತನ್ಯದಲ್ಲಿ ಸೇರಿ ಒಳಗೆ ಬುರುಗನ್ನು ಉಂಟು ಮಾಡುತ್ತದೆ. ಅದರಿಂದ ಅದು ಜೀರ್ಣಿಸಲು ಕಠಿಣವಾಗುವದು. ||೨೩೮|| ಅದರ ಧ್ವನಿ ಬೀಳುವದು. ಮಲಮೂತ್ರಗಳು ಕಟ್ಟುವವು. ವಾತಜ, ತಲೆ ಶೂಲೆಯನ್ನು ನೆಗಡಿಯನ್ನು ಹೊಂದುವದು. ||೨೩೯|| ಹಿಂದೆ ಹೇಳಿದಂತೆ ತನ್ನ ಕಾರಣಗಳಿಂದ ಕುಪಿತವಾದ ವಾಯುವು ಸ್ತನ್ಯದಲ್ಲಿ ಸೇರಿ ಸ್ನೇಹವನ್ನು ಒಣಗಿಸುವದು. ಅದರಿಂದ ರೂಕ್ಷವಾದ ಹಾಲನ್ನು ಕುಡಿಯುವ ಹುಡುಗನಿಗೆ ರೌಕ್ಷ್ಯದಿಂದ ಬಲನಾಶವಾಗುವದು. ||೨೪೦||

ವಿವರ್ಣತೆ, ದುರ್ಗಂಧ ಎಂಬ ಸ್ತನ್ಯ ದೋಷಗಳು ಪಿತ್ತದಿಂದ ಹೇಗೆ ಉಂಟಾಗುತ್ತವೆಂಬುದನ್ನೂ ಅವುಗಳ ಕಾರ್ಯವನ್ನೂ ಹೇಳುತ್ತಾರೆ—

**ಪಿತ್ತಮುಷ್ಣಾದಿಭಿಃ ಕ್ರುದ್ಧಂ ಸ್ತನ್ಯಾಶ್ರಯಮುಭಿಸ್ಥಿತಮ್ ||**
**ಕರೋತಿ ಸ್ತನ್ಯವೈವರ್ಣ್ಯಂ ನೀಲಪೀತಾಸಿತಾದಿಕಮ್ ||೨೪೧||**

**ವಿವರ್ಣಗಾತ್ರಃ ಸ್ವಿನ್ನಃ ಸ್ಯಾತ್ ತೃಷ್ಣಾಲುರ್ಭಿನ್ನವಿಟ್ ಶಿಶುಃ ||**
**ನಿತ್ಯಮುಷ್ಣಶರೀರಶ್ಚ ನಾಭಿನಂದತಿ ತಂ ಸ್ತನಮ್ ||೨೪೨||**

**ಪೂರ್ವವತ್ ಕುಪಿತೇ ಪಿತ್ತೇ ದೌರ್ಗಂಧ್ಯಂ ಕ್ಷೀರಮೃಚ್ಛತಿ ||**
**ಪಾಂಡ್ವಾಮಯಸ್ತತ್ ಪಿಬತಃ ಕಾಮಲಾ ವಾ ಭವೇಚ್ಛಿಶೋಃ ||೨೪೩||**

**ಅರ್ಥ—** ಉಷ್ಣ ಮುಂತಾದ ತನ್ನ ಕಾರಣಗಳಿಂದ ಕುಪಿತವಾದ ಪಿತ್ತವು ಕ್ಷೀರದಲ್ಲಿ ಸೇರಿ, ಅದರ ಬಣ್ಣವನ್ನು ಕೆಡಿಸಿ, ಅದರಲ್ಲಿ ನೀಲ, ಹಳದಿ, ಕಪ್ಪು ಮುಂತಾದ ಬೇರೆ ವರ್ಣವನ್ನುಂಟುಮಾಡುತ್ತದೆ. ||೨೪೧|| ಅದರಿಂದ ಹುಡುಗನ ಶರೀರದ ಬಣ್ಣವು ಬೇರೆಯಾಗುವದು. ಬಹಳ ಬೆವರು ಬರುವದು; ನೀರಡಿಕೆಯಾಗುವದು; ಮಲವು ತೆಳ್ಳಗಾಗುವದು; ಮೈ ಬಿಸಿಯಾಗುವದು. ಅವನು ಮೊಲೆಯನ್ನು ಕುಡಿಯುವದಿಲ್ಲ. ||೨೪೨|| ಮೊದಲು ಹೇಳಿದಂತೆ ಪಿತ್ತವು ಕುಪಿತವಾಗಲು ಹಾಲು ದುರ್ಗಂಧವಾಗುವದು. ಅದನ್ನು ಕುಡಿಯುವ ಹುಡುಗನಿಗೆ ಪಾಂಡುರೋಗ ಅಥವಾ ಕಾಮಣಿಯುಂಟಾಗುವದು. ||೨೪೩||

ಸ್ನಿಗ್ಧತ್ವ, ಜಿಗಟು, ಜಡತ್ವವೆಂಬ ಕ್ಷೀರದೋಷಗಳನ್ನು ಕಫವು ಹೇಗೆ ಉಂಟು ಮಾಡುವದೆಂಬುದನ್ನೂ ಮತ್ತು ಅದರ ಕಾರ್ಯವನ್ನೂ ಹೇಳುತ್ತಾರೆ—

**ಕ್ರುದ್ಧೋ ಗುರ್ವಾದಿಭಿಃ ಶ್ಲೇಷ್ಮಾ ಕ್ಷೀರಾಶ್ರಯಗತಃ ಸ್ತ್ರಿಯಾಃ ||**
**ಸ್ನೇಹಾನ್ವಿತಂ ವಾ ತತ್ ಕ್ಷೀರಮತಿಸ್ನಿಗ್ಧಂ ಕರೋತಿ ಸಃ ||೨೪೪||**

**ಛರ್ದನಃ ಕುಂಥನಸ್ತೇನ ಲಾಲಾಲುರ್ಜಾಯತೇ ಶಿಶುಃ ||**
**ನಿತ್ಯೋಪದಿಗ್ಧೈಃ ಸ್ರೋತೋಭಿರ್ನಿದ್ರಾಕ್ಲಮಸಮನ್ವಿತಃ ||೨೪೫||**
**ಶ್ವಾಸಕಾಸಪರೀತಶ್ಚ ಪ್ರಸೇಕತಮಕಾನ್ವಿತಃ ||**
**ಅಭಿಭೂಯ ಕಫಸ್ತನ್ಯಂ ಪಿಚ್ಛಿಲಂ ಕುರುತೇ ಯದಾ ||೨೪೬||**
**ಲಾಲಾಲುಃ ಸೂನವಕ್ತ್ರಾಕ್ಷೋ ಜಡಃ ಸ್ಯಾತ್ತತ್ಪಿಬನ್ ಶಿಶುಃ ||**
**ಕಫಃ ಕ್ಷೀರಾಶಯಗತೋ ಗುರುತ್ವಾತ್ ಕ್ಷೀರಗೌರವಮ್ ||೨೪೭||**
**ಕುರ್ಯಾತ್ ಕ್ಷೀರಾನ್ವಿತಂ ಪೀತಂ ತದ್ಭಾವಾತ್ಕಫರೋಗವಾನ್ ||**
**ಅನ್ಯಾಂಶ್ಚ ವಿವಿಧಾನ್ ರೋಗಾನ್ಕುರ್ಯಾತ್ಕ್ಷೀರಸಮಾಶ್ರಿತಾನ್ ||೨೪೮||**

**ಅರ್ಥ—** ಜಡ ಮುಂತಾದ ಪದಾರ್ಥಗಳಿಂದ ಕುಪಿತವಾದ ಕಫವು ಕ್ಷೀರಕ್ಕೆ ಆಶ್ರಯವಾದ ಸ್ತ್ರೀಯಳ ಸ್ತನವನ್ನು ಸೇರಿ ಅಲ್ಲಿಯ ಕ್ಷೀರವನ್ನು ಅಸ್ನಿಗ್ಧ ಅಥವಾ ಅತಿಸ್ನಿಗ್ಧವನ್ನಾಗಿಮಾಡುತ್ತದೆ. ||೨೪೪|| ಅದರಿಂದ ಹುಡುಗನಿಗೆ ವಾಂತಿ, ತಿಣುಕುವಿಕೆ, ಜೊಲ್ಲುಸುರಿಯೋಣ, ಈ ವಿಕಾರಗಳುಂಟಾಗುತ್ತವೆ. ಅವನ ಎಲ್ಲ ಸ್ರೋತಸ್ಸುಗಳು ಯಾವಾಗಲೂ ಜಿಗಟು ಇದ್ದು, ಅವನಲ್ಲಿ ನಿದ್ದೆ ಮತ್ತು ದಣುವು ||೨೪೫|| ಕೆಮ್ಮು, ದಮ್ಮು, ಬಾಯಿಂದ ನೀರು ಸುರಿಯೋಣ, ತಮಕಶ್ವಾಸಗಳು ಉಂಟಾಗುವವು. ಕಫವು ಸ್ತನದಲ್ಲಿದ್ದ ಕ್ಷೀರವನ್ನು ಸೇರಿ, ಅದನ್ನು ಲೋಳೆಮಾಡಲು, ||೨೪೬|| ಅದನ್ನು ಕುಡಿಯುವ ಕೂಸಿಗೆ ಜೊಲ್ಲು ಸೋರುವದು, ಮೋರೆ ಕಣ್ಣುಗಳು ಬಾಯುವವು, ಜಡತ್ವ ಈ ವಿಕಾರಗಳುಂಟಾಗುವವು. ಕ್ಷೀರದ ಆಶ್ರಯವಾದ ಸ್ತನದಲ್ಲಿರುವ ಕಫವು ತನ್ನ ಜಡತ್ವದಿಂದ ಹಾಲಿನಲ್ಲಿ ಜಡತ್ವವನ್ನುಂಟುಮಾಡುವದು. ||೨೪೭|| ಸ್ನಿಗ್ಧವಾದ ಆ ಹಾಲು ಗುರುತ್ವ ಗುಣದಿಂದ ಅದನ್ನು ಕುಡಿದ ಹುಡುಗನಲ್ಲಿ ಕಫರೋಗವನ್ನು ಅದರಿಂದ ಹಾಲಿನ ಸಂಬಂಧಿ ಬೇರೆ ಅನೇಕ ರೋಗಗಳನ್ನು ಉಂಟುಮಾಡುತ್ತದೆ. ||೨೪೮||

ಕ್ಷೀರ ದೋಷಗಳ ಸಾಮಾನ್ಯ ಚಿಕಿತ್ಸೆಯನ್ನು ಹೇಳುತ್ತಾರೆ—

**ಕ್ಷೀರೇ ವಾತಾದಿಭಿರ್ದುಷ್ಟೇ ಸಂಭವಂತಿ ತದಾಮಯಾಃ ||**
**ತತ್ರಾದೌ ಕ್ಷೀರ ಶುದ್ಧ್ಯರ್ಥಂ ಧಾತ್ರೀಂ ಸ್ನೇಹೋಪಪಾದಿತಾಮ್ ||೨೪೯||**
**ಸಂಸ್ವೇದ್ಯ ವಿಧಿವದ್ವೈದ್ಯೋ ವಮನೇನೋಪಪಾದಯೇತ್ ||**
**ವಚಾಪ್ರಿಯಂಗುಯಷ್ಟ್ಯಾಹ್ವಫಲವತ್ಸಕಸರ್ಷಪೈಃ ||೨೫೦||**

ಕಲ್ಕೈರ್ನಿಂಬಪಟೋಲಾನಾಂ ಕ್ವಾಥೈಃ ಸಲವಣೈರ್ವಮೇತ್ ||
ಸಮ್ಯಗ್ವಾಂತಾಂ ಯಥಾನ್ಯಾಯಂ ಕೃತಸಂಸರ್ಜನಾಂ ತತಃ ||೨೫೧||

ದೋಷಕಾಲಬಲಾಪೇಕ್ಷೀ ಸ್ನೇಹಯಿತ್ವಾ ವಿರೇಚಯೇತ್ ||
ತ್ರಿವೃತಾಮಭಯಾಂ ವಾಪಿ ತ್ರಿಫಲಾರಸಸಂಯುತಾಮ್ ||೨೫೨||

ಪಾಯಯೇನ್ಮಧುಸಂಯುಕ್ತಾಂ ವಿರೇಕಾರ್ಥಂಭಿಷಗ್ವರಃ ||
ಸಮ್ಯಗ್ವಿರಿಕ್ತಾಂ ಮತಿಮಾನ್ ಕೃತಸಂಸರ್ಜನಾಂ ಪುನಃ ||೨೫೩||

ತತೋದೋಷಾವಶೇಷಘ್ನೈರನ್ನಪಾನೈರುಪಾಚರೇತ್ ||
ಶಾಲಯಃ ಷಷ್ಟಿಕಾ ಶ್ಯಾಮಾಕಾ ಭೋಜನೇ ಹಿತಾಃ ||೨೫೪||

ಪ್ರಿಯಂಗವಃ ಕೋರದೋಷಾ ಯವಾ ವೇಣುಯವಾಸ್ತಥಾ ||
ವಂಶವೇತ್ರಕಲ್ಲಾಯಾಶ್ಚ ಶಾಕಾರ್ಥೇ ಸ್ನೇಹಸಂಸ್ಕೃತಾಃ ||೨೫೫||

ಮುದ್ಗಾನ್ ಮಸೂರಾನ್ ಯೂಷಾರ್ಥೇ ಕುಲಿತ್ಥಾಂಶ್ಚ ಪ್ರಕಲ್ಪಯೇತ್ ||
ನಿಂಬವೇತ್ರಾಗ್ರಕುಲಕವಾರ್ತಾಕಾಮಲಕೈಃ ಶೃತಾನ್ ||೨೫೬||

ಸವ್ಯೋಷಸೈಂಧವಾನ್ ಯೂಷಾನ್ ಪಾಪಯೇತ್ ಸ್ತನ್ಯಶೋಧನಾನ್
ಶಶಾನ್ ಕಪಿಂಜಲಾನೇಣಾನ್ ಸಂಸ್ಕೃತಾಂಶ್ಚ ಪ್ರದಾಪಯೇತ್||೨೫೭||

ಶಾಙ್ಗೇಷ್ಟಾ ಸಪ್ತಪರ್ಣತ್ವಕ್ ಬಸ್ತಗಂಧಾಶೃತಂ ಜಲಮ್ ||
ಪಾಪಯೇತ್ಸ್ತನ್ಯಶುದ್ಧ್ಯರ್ಥಮಥವಾ ರೋಹಿಣೀಕೃತಮ್ ||೨೫೮||

ಅಮೃತಾಸಪ್ತಪರ್ಣತ್ವಕ್ ಕ್ವಾಥಂ ಚೈವ ಸನಾಗರಮ್ ||
ಕಿರಾತತಿಕ್ತಕಕ್ವಾಥಂ ಶ್ಲೋಕಪಾದೇರಿತಾನ್ ಪಿಬೇತ್ ||೨೫೯||

ತ್ರೀನೇತಾನ್ ಸ್ತನ್ಯಶುದ್ಧ್ಯರ್ಥಮಿತಿ ಸಾಮಾನ್ಯಭೇಷಜಮ್ ||
ಕೀರ್ತಿತಂ ಸ್ತನ್ಯದೋಷಾಣಾಂ ಪೃಥಗನ್ಯಾನ್ನಿಬೋಧ ಮೇ ||೨೬೦||

**ಅರ್ಥ—** ಹಾಲು ವಾತಾದಿಗಳಿಂದ ದುಷ್ಟವಾಗಲು ವಾತಾದಿ ದೋಷ ಗಳುಂಟಾಗುವವು. ಹಾಲಿನ ಸಿದ್ಧಿಗಾಗಿ ಧಾತ್ರಿಗೆ ಸ್ನೇಹಸ್ವೇದಗಳನ್ನು ಕೊಟ್ಟು ||೨೪೯|| ವಿಧಿಯಂತೆ ಮುಂದೆ ಹೇಳುವ ವಮನವನ್ನು ಕೊಡಬೇಕು. ಬೇವು ಕಹಿ ಪಡುವಲಗಳ ಕಷಾಯದಲ್ಲಿ ಬಜೆ, ಪ್ರಿಯಂಗು(ಗವ್ವಲಾ), ಜೇಷ್ಠಮಧು, ಮಂಗಾರಿಕಾಯಿ, ಇಂದ್ರಜಾವಿ, ಸಾಸಿವೆಗಳ, ಕಲ್ಕವನ್ನೂ ||೨೫೦|| ಸೈಂಧವವನ್ನು ಹಾಕಿ ವಮನ ಮಾಡಿಸಬೇಕು. ಚನ್ನಾಗಿ ವಾಂತಿಯಾದನಂತರ

ಅಪಥ್ಯವಾದ ಪೇಯಾದಿ ಕ್ರಮವನ್ನು ಮಾಡಿಸಿ ॥೫೫॥ ದೋಷ, ಕಾಲ, ಮತ್ತು ಅವನ ಬಲವನ್ನು ವಿಚಾರಿಸಿ, ಸ್ನೇಹನಕೊಟ್ಟು (ಮುಂದೆ ಹೇಳಿದ) ವಿರೇಚನ ಕೊಡಬೇಕು. ತ್ರಿಫಲೆಯ ಕಷಾಯದಲ್ಲಿ ನಿಶೋತ್ತರ ಅಥವಾ ಚಣಿಲೆಯ ಚೂರ್ಣವನ್ನು ಹಾಕಿ ॥೫೬॥ ಜೇನು ಕೂಡಿಸಿ ವೈದ್ಯಶ್ರೇಷ್ಠನು ವಿರೇಚನಕ್ಕಾಗಿ ಕೊಡಬೇಕು. ಚನ್ನಾಗಿ ವಿರೇಚನವಾಗಲು ಜಾಣನಾದ ವೈದ್ಯನು ಪುನಃ ಪೇಯಾದಿ ಕ್ರಮವನ್ನು ಮಾಡಿಸಿ, ॥೫೭॥ ಉಳಿದ ದೋಷವನ್ನು ಕಳೆಯುವ (ಮುಂದೆ ಹೇಳಿದ) ಅನ್ನ ಪಾನಗಳಿಂದ ಉಪಚರಿಸಬೇಕು. ಊಟಕ್ಕೆ ಅಕ್ಕಿ, ಷಷ್ಟಿಕ ಅಕ್ಕಿ, ಸಾವಿ, ॥೫೮॥ ನವಣೆ, ಹಾರಕ, ಜವೆ ಮತ್ತು ಬಿದ - ಇವು ಹಿತಕರವಾದವು. ಪಲ್ಯೆಗಾಗಿ ಬಿದಿರಿನ ಅಂಕುರ, ಬೆತ್ತದ ಅಂಕುರ ಬಟಕಡಲೆ, ಇವುಗಳನ್ನು ತುಪ್ಪ ಎಣ್ಣೆಗಳ ವಗ್ಗರಣೆಕೊಟ್ಟು ಉಪಯೋಗಿಸಬೇಕು ॥೫೯॥ ಕಟ್ಟಿಗಾಗಿ ಹೆಸರು- ಚನ್ನಂಗಿ– ಹುರುಳಿಗಳನ್ನು ತೆಗೆದುಕೊಳ್ಳಬೇಕು. ಬೇವು, ಬೆತ್ತದ ಮೊಳಕೆ, ಪಡವಲದ ಎಲೆ, ಬದನೇ ಕಾಯಿ ನೆಲ್ಲಿ ಇವುಗಳನ್ನೂ ॥೬೦॥ ಮತ್ತು ತ್ರಿಕಟು ಸೈಂಧವಗಳನ್ನು ಹಾಕಿ ಕುದಿಸಿ ಮಾಡಿದ ಕಟ್ಟುಗಳನ್ನು ಕೊಡಬೇಕು. ಜಿವರಂತಿ ಮೂಲ, ಕಪಿಂಜಲ (ಬಿಳಿ ತಿತ್ತಿರಿ ಪಕ್ಷಿ), ಚಿಗರೆ ಮಾಂಸಗಳನ್ನು ಒಗ್ಗರಣೆಕೊಟ್ಟು ಕೊಡಬೇಕು. ಇವು ಮೊಲೆ ಹಾಲನ್ನು ಶುದ್ಧ ಮಾಡುವವು ॥೬೧॥ ಗಜಗ, ಸಪ್ತಪರ್ಣದ ತೊಗಟೆ ಅಜಮೋದಗಳ ಕಷಾಯವನ್ನು ಅಥವಾ ಕಟುಕರೋಣಿ ಕಷಾಯವನ್ನು ಕೊಡಬೇಕು. ಅದು ಸ್ತನದ ಶುದ್ಧಿಯನ್ನು ಮಾಡುವದು ॥೬೨॥ ಅಮೃತಬಳ್ಳಿ ಸಪ್ತ ಪರ್ಣಗಳ ತೊಗಟೆಗಳ ಕಲ್ಕವನ್ನು ನೀರಿನೊಡನೆ ಅಥವಾ ಅವುಗಳ ಕಷಾಯವನ್ನು ಶುಂಠೀಚೂರ್ಣ ಹಾಕಿ ಅಥವಾ ಚಿರಾಯತದ ಕಷಾಯವನ್ನು, ಹೀಗೆ ಶ್ಲೋಕದ ಒಂದೊಂದು ಪಾದದಿಂದ ಹೇಳಿದ ಮೂರೂ ಕಷಾಯಗಳನ್ನು ಕುಡಿಯಬೇಕು. ॥೬೩॥ ಹಾಲು ಶುದ್ಧವಾಗುವದಕ್ಕಾಗಿ, ಸ್ತನ್ಯದೋಷಗಳನ್ನು ಕಳೆಯುವದಕ್ಕೆ ಸಾಮಾನ್ಯವಾದ ಔಷಧಗಳನ್ನು ಹೇಳಿದೆವು. ಇನ್ನು ಬೇರೆ ಬೇರೆ ದೋಷಗಳಿಗೆ ಔಷಧಗಳನ್ನು ಹೇಳುತ್ತೇವೆ; ಕೇಳಿರಿ. ॥೬೪॥

ವಾತಜನ್ಯ ವೈರಸ್ಯ ಮುಂತಾದ ಕ್ಷೀರದೋಷಗಳಿಗೆ ಬೇರೆ ಬೇರೆ ಚಿಕಿತ್ಸೆಯನ್ನು ಹೇಳುತ್ತಾರೆ—

**ಪಾಯಯೇದ್ವಿರಸಕ್ಷೀರಾಂದ್ರಾಕ್ಷಾ ಮಧುಕಶಾರಿವಾಃ ॥**
**ಶ್ಲಕ್ಷ್ಣಪಿಷ್ಟಾಂ ಪಯಸ್ಯಾಂ ಚ ಸಮಾಲೋಡ್ಯಸುಖಾಂಬುನಾ ॥೬೫॥**

**ಸ್ತನ್ಯಸಂಶೋಧನಾರ್ಥಂ ತು ಧಾತ್ರೀಂ ತು ಪಾಯಯೇದ್ ಭಿಷಕ್ ||**
**ಪಂಚಕೋಲಕುಲತ್ಥೈಶ್ಚ ಪಿಷ್ಟೈರಾಲೇಪಯೇತ್ ಸ್ತನೌ ||೨೬೨||**
**ಶುಷ್ಕೌ ಪ್ರಕ್ಷಾಲ್ಯ ನಿರ್ದುಹ್ಯಾತ್ ತಥಾ ಸ್ತನ್ಯಂ ವಿಶುಧ್ಯತಿ ||**
**ಫೇನಸಂಘಾತವತ್ ಕ್ಷೀರಂ ಯಸ್ಯಾಸ್ತಾಂ ಪಾಯಯೇತ್ ಸ್ತ್ರಿಯಮ್ ||೨೬೩||**

**ಪಾಠಾನಾಗರಶಾಂಙ್ಗೇಷ್ಟಾಮೂರ್ವಾಃ ಪಿಷ್ಟ್ವಾ ಸುಖಾಂಬುನಾ ||**
**ಅಂಜನಂ ನಾಗರಂ ದಾರುಬಿಲ್ವಮೂಲಪ್ರಿಯಂಗವಃ ||೨೬೪||**

**ಸ್ತನಯೋಃ ಪೂರ್ವವತ್ ಕಾರ್ಯಂ ಲೇಪನಂ ಕ್ಷೀರಶೋಧನಮ್ ||**
**ಕಿರಾತತಿಕ್ತಕಂ ಶುಂಠೀ ಸಾಮೃತಾ ಕ್ವಾಥಯೇದ್ ಭಿಷಕ್ ||೨೬೫||**

**ತಂ ಕ್ವಾಥಂ ಪಾಯಯೇದ್ ಧಾತ್ರೀಂ ಸ್ತನ್ಯದೋಷನಿಬರ್ಹಣಮ್ ||**
**ಸ್ತನೌ ಚಾಲೇಪಯೇತ್ ಪಿಷ್ಟೈರ್ಯವಗೋಧೂಮಸರ್ಷಪೈಃ ||೨೬೬||**
**ಷಡ್ವಿರೇಕಾಶ್ರಿತೀಯೋಕ್ತೈರೌಷಧೈಃ ಸ್ತನ್ಯಶೋಧನೈಃ ||**
**ರೂಕ್ಷಕ್ಷೀರಾ ಪಿಬೇತ್ ಕ್ಷೀರಂ ತೈರ್ವಾ ಸಿದ್ಧಂ ಘೃತಂ ಪಿಬೇತ್ ||೨೬೭||**

**ಪೂರ್ವವದ್ ಜೀವಕಾದ್ಯಂ ಚ ಪಂಚಮೂಲಂ ಚ ಲೇಪನಮ್ ||**
**ಶ್ಲಕ್ಷ್ಣಂ ಪಿಷ್ಟ್ವಾ ಜಲೇನೈವ ಲೇಪನಂ ಭಿಷಜಾ ಸ್ತ್ರಿಯಾಃ ||೨೬೮||**
**ಸ್ತನಯೋಃ ಸಂವಿಧಾತವ್ಯಂ ಸುಖೋಷ್ಣಂ ಸ್ತನ್ಯಶೋಧನಮ್ ||**

**ಅರ್ಥ—** ವೈರಸ್ಯ ದೋಷವಿದ್ದರೆ ಹಾಲಿನ ಶುದ್ಧಿಗಾಗಿ ದ್ರಾಕ್ಷೆ, ಜೇಷ್ಠಮಧು, ಅನಂತಮೂಲ ಕಲ್ಕವನ್ನು ಅಥವಾ ಕ್ಷೀರಕಾಕೋಲಿಯ ಕಲ್ಕವನ್ನು ಬೆಚ್ಚಗಿನ ನೀರಿನಲ್ಲಿ ಕಲಸಿ ||೨೬೦|| ಧಾತ್ರಿಗೆ ಕುಡಿಯಲು ಕೊಡಬೇಕು. ಪಿಪ್ಪಲೀ, ಮೋಡಿ, ಜವಕ, ಚಿತ್ರಕ, ಸುಂಠಿ, ಹುರಳಿಗಳ ಕಲ್ಕದಿಂದ ಸ್ತನಕ್ಕೆ ಲೇಪಮಾಡಬೇಕು ||೨೬೧|| ಒಣಗಲು ಅದನ್ನು ತೊಳೆದು ಹಾಲನ್ನು ಹಿಂಡಿ ತೆಗೆಯಬೇಕು. ಅಂದರೆ ಹಾಲು ಶುದ್ಧವಾಗುವದು. ಯಾವಳ ಹಾಲು ಬುರಗು ಬುರುಗು ಇರುವದೋ ಆ ಸ್ತ್ರೀಯಳಿಗೆ ||೨೬೨|| ಅಗಳ ಸುಂಠಿ, ಸುಂಠಿ, ಗಜಗು, ಹೆಗ್ಗೊರಟಿಗೆ ಇವುಗಳ ಕಲ್ಕವನ್ನು ಬಿಸಿನೀರಿನೊಡನೆ ಕುಡಿಯಲು ಕೊಡಬೇಕು ರಸಾಂಜನ, ಸುಂಠಿ, ದೇವದಾರು. ಬಿಲ್ವಮೂಲ, ಗವ್ಹಲಾ, (ಪ್ರಿಯಂಗು) ||೨೬೪|| ಇವುಗಳ ಕಲ್ಕದ ಲೇಪವನ್ನು ಹಿಂದೆ ಹೇಳಿದಂತೆ ಸ್ತನಗಳಿಗೆ ಮಾಡಬೇಕು. ಅದು ಹಾಲನ್ನು ಶುದ್ಧಗೊಳಿಸುವದು. ಚಿರಾಯತ, ಸುಂಠಿ, ಅಮೃತಬಳ್ಳಿ, ಇವುಗಳ ಕಷಾ

ಯನ್ನು ವೈದ್ಯನು ಧಾತ್ರಿಗೆ ಕುಡಿಸಬೇಕು. ||೨೬೫|| ಇದು ಹಾಲಿನ ದೋಷವನ್ನು ಕಳೆಯುವದು. ಜವೆ, ಗೋದಿ, ಸಾಸಿವೆಗಳ ಕಲ್ಕದ ಲೇಪ ವನ್ನು ಸ್ತನಗಳಿಗೆ ಮಾಡಬೇಕು. ||೨೬೬|| ಷಡ್ವಿರೇಚನಾ ಶ್ರಿತಿಯಾಧ್ಯಾ ಯದಲ್ಲಿ ಹೇಳಿದ ಕ್ಷೀರ ಶುದ್ಧಮಾಡುವ ಹತ್ತು ಔಷಧಗಳ ಕಲ್ಕದ ಲೇಪ ಗಳನ್ನು ಸ್ತನಗಳಿಗೆ ಮಾಡಬೇಕು. ಕ್ಷೀರವು ದುಷ್ಟವಿದ್ದರೆ ಹಾಲು ಕುಡಿಯ ಬೇಕು. ಅಥವಾ ಹಾಲಿನಲ್ಲಿ ಸಿದ್ಧವಾದ ಘೃತವನ್ನು ಕುಡಿಯಬೇಕು ||೨೬೭|| ಜೀವನೀಯ ಔಷಧಗಳ ಅಥವಾ ಮಹಾ ಪಂಚಮೂಲಗಳನ್ನು ನೀರಿನಲ್ಲಿ ಚೆನ್ನಾಗಿ ಅರೆದು ಬೆಚ್ಚಗೆಮಾಡಿ ವೈದ್ಯನು ಸ್ತನಗಳಿಗೆ ಲೇಪಮಾಡ ಬೇಕು.||೨೬೮|| ಇದು ಕ್ಷೀರ ಶುದ್ಧಿಯನ್ನು ಮಾಡುವದು. || ೨೬೮ || ||

ಪಿತ್ತಜನ್ಯ ಕ್ಷೀರದೋಷಗಳಾದ ವಿವರ್ಣತೆ ದುರ್ಗಂಧಗಳಿಗೆ ಬೇರೆ ಬೇರೆ ಚಿಕಿತ್ಸೆಯನ್ನು ಹೇಳುತ್ತಾರೆ.

**ಯಷ್ಟೀ ಮಧುಕಮದ್ವೀಕಾಪಯಸ್ಯಾಸಿಂಧುವಾರಿಕಾ ||೨೬೯||**
**ಶೀತಾಂಬುನಾ ಪಿಬೇತ್ ಕಲ್ಕಂ ಕ್ಷೀರವೈವರ್ಣ್ಯನಾಶನಮ್ ||**
**ದ್ರಾಕ್ಷಾಮಧುಕಕಲ್ಕೇನ ಸ್ತನೌ ಚಾಸ್ಯಾಃ ಪ್ರಲೇಪಯೇತ್ ||೨೭೦||**
**ಪ್ರಕ್ಷಾಲ್ಯ ವಾರಿಣಾ ಚೈವ ನಿರ್ದುಹ್ಯಾತ್ ತೌ ಪುನಃ ಪುನಃ ||**
**ವಿಷಾಣಿಕಾಜಶೃಂಗ್ಯೌ ಚ ತ್ರಿಫಲಾಂ ರಜನೀಂ ವಚಾಮ್ ||೨೭೦||**
**ಪಿಬೇತ್ ಕ್ಷೀರಾಂಬುನಾ ಪಿಷ್ಟ್ವಾ ಕ್ಷೀರದೌರ್ಗಂಧ್ಯನಾಶನಮ್ ||**
**ಲಿಹ್ಯಾದ್ ವಾಪ್ಯಭಯಾಚೂರ್ಣಂ ಸಕ್ಷೌದ್ರಂ ಮಾಕ್ಷಿಕಪ್ಲುತಮ್ ||೨೭೨||**
**ಕ್ಷೀರದೌರ್ಗಂಧ್ಯನಾಶಾರ್ಥಂ ಧಾತ್ರೀ ಪಥ್ಯಾಶಿನೀ ತಥಾ ||**
**ಸಾರಿವೋಶೀರಮಂಜಿಷ್ಠಾ ಶ್ಲೇಷ್ಮಾತ್ಕೈರ್ವಾ ಸಚಂದನೈಃ ||೨೭೩||**
**ಪತ್ರಾಂಬುಚಂದನೋಶೀರೈಃ ಸ್ತನೌ ಚಾಸ್ಯಾಃ ಪ್ರಲೇಪಯೇತ್ ||೨೭೩|| ||**

**ಅರ್ಥ—** ಜೇಷ್ಠಮಧು, ದ್ರಾಕ್ಷೆ, ಕ್ಷೀರಕಾಕೋಲಿ, ಲಕ್ಕಿ, ಇವುಗಳ ಕಲ್ಕವನ್ನು ||೨೬೯|| ತಣ್ಣೀರಿನೊಡನೆ ಕುಡಿಯಬೇಕು ಇದು ಹಾಲಿನ ವಿವರ್ಣತೆಯನ್ನು ಕಳೆಯುವದು. ದ್ರಾಕ್ಷೆ ಜೇಷ್ಠಮಧುವಿನ ಕಲ್ಕಗಳ ಲೇಪ ವನ್ನು ಆಕೆಯ ಸ್ತನಗಳಿಗೆ ಮಾಡಿ ಒಣಗಿದ ಬಳಿಕ ||೨೭೦|| ನೀರಿನಿಂದ ತೊಳೆದು ಹಾಲನ್ನು ಹಿಂಡಿ ತೆಗೆಯಬೇಕು. ಹೀಗೆ ಪುನಃ ಪುನಃ ಮಾಡುತ್ತಿರ

ಬೇಕು ಮೇಷಶೃಂಗೀ, ವಿಷಾಣಿಕಾ, (ಮೇಷಶೃಂಗೀ ಭೇದ) ತ್ರಿಫಳೆ, ಅರಿಷಿಣ, ಬಜೆ ಇವುಗಳನ್ನು ||೨೭೧|| ಹಾಲಿನಲ್ಲಿ ಅರೆದು ಕುಡಿಯಬೇಕು, ಅದು ಹಾಲಿನ ದುರ್ಗಂಧವನ್ನು ಕಳೆಯುವದು, ಅಥವಾ ಕ್ಷೀರದುರ್ಗಂಧ ಹೋಗುವದಕ್ಕಾಗಿ ಧಾತ್ರಿಯು ಪಥ್ಯಮಾಡುತ್ತ ಅಳ್ಳೀಕಾಯಿಯ ಚೂರ್ಣವನ್ನು ಅಥವಾ ತ್ರಿಕಟು ಚೂರ್ಣವನ್ನು ಜೇನಿನಲ್ಲಿ ನೆಕ್ಕಬೇಕು, ||೨೭೨|| ಅಥವಾ ಅನಂತಮೂಲ, ಕರೇ ಬಾಳದ ಬೇರು, ಮಂಜಿಷ್ಠೆ, ಚಳ್ಳೆ, ಚಂದನಗಳ ಕಲ್ಕದಿಂದ, ||೨೭೩|| ಅಥವಾ ತಮಾಲ ಪತ್ರ, ಬಾಳದ ಬೇರು, ಚಂದನ, ಕರೇ ಬಾಳದ ಬೇರು ಇವುಗಳ ಕಲ್ಕದಿಂದ ಆಕೆಯ ಸ್ತನಗಳಿಗೆ ಲೇಪಮಾಡಬೇಕು. ||೨೭೩ || ||

ಕಫಜನ್ಯ ಕ್ಷೀರದೋಷಗಳಾದ ಸ್ನಿಗ್ಧತ್ವ, ಜಿಗಟು, ಜಡತ್ವಗಳಿಗೆ ಬೇರೆ ಬೇರೆ ಚಿಕಿತ್ಸೆಯನ್ನು ಹೇಳುತ್ತಾರೆ.

**ಸ್ನಿಗ್ಧಕ್ಷೀರಾ ದಾರು ಮುಸ್ತಂ ಪಾಠಾಂ ಪಿಷ್ಟ್ವಾ ಸುಖಾಂಬುನಾ||೨೭೪||**
**ಪೀತ್ವಾ ಸಸೈಂಧವಾಃ ಕ್ಷಿಪ್ರಂ ಕ್ಷೀರಶುದ್ಧಿಮವಾಪ್ನುಯಾತ್ ||**
**ಪಾಯಯೇತ್ ಪಿಚ್ಛಿಲಕ್ಷೀರಾಂ ಶಾಂಙ್ಗ್ರ್ಯೇಷ್ಟಾಮಭಯಾಂ ವಚಾಮ್ ||೨೭೫||**
**ಮುಸ್ತನಾಗರಪಾಠಾಶ್ಚ ಪೀತಾಃಸ್ತನ್ಯವಿಶೋಧನಾಃ ||**
**ತಕ್ರಾರಿಷ್ಟಂ ಪಿಬೇಚ್ಚಾಪಿ ಅರ್ಶಸಾಂ ಯನ್ನಿದರ್ಶಿತಮ್ ||೨೭೬||**
**ವಿದಾರೀಬಿಲ್ವಮಧುಕೈಃ ಸ್ತನೌ ಚಾಸ್ಯಾಃ ಪ್ರಲೇಪಯೇತ್ ||**
**ತ್ರಾಯಮಾಣಾಮೃತಾನಿಂಬಪಟೋಲತ್ರಿಫಲಾಶೃತಮ್ ||೨೭೭||**
**ಗುರುಕ್ಷೀರಾ ಪಿಬೇದೇತತ್ ಸ್ತನ್ಯದೋಷವಿಶುದ್ಧಯೇ ||**
**ಪಿಬೇದ್ವಾ ಪಿಪ್ಪಲೀಮೂಲಚವ್ಯಚಿತ್ರಕನಾಗರಮ್ ||೨೭೮||**
**ಬಲಾನಾಗರಶಾಂಙ್ಗ್ರ್ಯೇಷ್ಟಾಮೂರ್ವಾಭಿರ್ಲೇಪಯೇತ್ ಸ್ತನೌ ||**
**ಪೃಶ್ನಿಪರ್ಣೀಪಯಸ್ಯಾಭ್ಯಾಂ ಸ್ತನೌ ಚಾಸ್ಯಾಃ ಪ್ರಲೇಪಯೇತ್||೨೭೯||**
**ಅಷ್ಟಾವೇತೇ ಕ್ಷೀರದೋಷಾಃ ಹೇತುಲಕ್ಷಣಭೇಷಜೈಃ ||**
**ನಿರ್ದಿಷ್ಟಾಃ ಕ್ಷೀರದೋಷೋತ್ಥಾಸ್ತತ್ರೋಕ್ತಾಃ ಕೇಚಿದಾಮಯಾಃ ||೨೮೦||**

**ಅರ್ಥ—** ಹಾಲಿನಲ್ಲಿ ಸ್ನಿಗ್ಧತ್ವದೋಷವುಳ್ಳವಳು ದೇವದಾರು, ಜೇಕು, ಅಗಳ ಸುಂಠಿ, ಸೈಂಧವಗಳನ್ನು ಬಿಸಿನೀರಿನಲ್ಲಿ ಅರೆದು ||೨೭೪|| ಕುಡಿದರೆ

ತೀವ್ರವಾಗಿ ಕ್ಷೀರಶುದ್ಧಿಯಾಗುವದು. ಹಾಲಿನಲ್ಲಿ ಜಿಗಟುತನವಿದ್ದರೆ ಗಜಗ, ಅಥವಾ ಅಳ್ಳೀಕಾಯಿ ಅಥವಾ ಬಜೆ ಇವುಗಳನ್ನು ಬಿಸಿನೀರಿನಲ್ಲಿ ಅರೆದು ಕುಡಿಯಬೇಕು. ||೨೭೫|| ಅಥವಾ ಜೇಕು, ಸುಂಠಿ, ಅಗಳ ಸುಂಠಿಗಳನ್ನು ಬಿಸಿನೀರಿನಲ್ಲಿ ಅರೆದು ಕುಡೆಯಬೇಕು. ಇವು ಹಾಲನ್ನು ಶುದ್ಧಿಗೊಳಿಸುವವು. ಮತ್ತು ಮೂಲವ್ಯಾಧಿಗೆ ಹೇಳಿದ ತಕ್ರಾರಿಷ್ಟವನ್ನು ಕುಡಿಯಬೇಕು. ||೨೭೬|| ನೆಲಗುಂಬಳ, ಬಿಲ್ವ, ಜೇಷ್ಠಮಧುಗಳ ಕಲ್ಕದಿಂದ ಆಕೆಯಸ್ತನಗಳಿಗೆ ಲೇಪ ಮಾಡಬೇಕು. ಹಾಲಿನಲ್ಲಿ ಜಡತ್ವವುಳ್ಳವಳು ತ್ರಾಯಮಾಣ, ಅಮೃತಬಳ್ಳಿ, ಬೇವು, ಕಹಿಪಡವಲ, ತ್ರಿಫಳೆಗಳ ಕಷಾಯವನ್ನು ಕುಡಿಯಬೇಕು. ||೨೭೭|| ಆದು ಹಾಲನ್ನು ಶುದ್ಧಮಾಡುವದು. ಅಥವಾ ಮೋಡಿ, ಚವಕ, ಚಿತ್ರಕ, ಸುಂಠಿಗಳ ಕಷಾಯವನ್ನು ಕುಡಿಯಬೇಕು. ||೨೭೮|| ಕಳ್ಳಂಗಡಲೆ, ಸುಂಠಿ, ಗಜಗ, ಹೆಗ್ಗೊರಟಿಗೆಗಳ ಕಲ್ಕದಿಂದ, ಅಥವಾ ಮೂರೆಲೆ ಹೊನ್ನೆ, ಕ್ಷೀರಕಾಕೋಲಿಗಳ ಕಲ್ಕದಿಂದ ಆಕೆಯ ಸ್ತನಗಳಿಗೆ ಲೇಪಮಾಡಬೇಕು. ||೨೭೯|| ಈ ಎಂಟು (೧ ಆರಸತ್ವ ೨ ಬುರುಗು ೩ ರುಕ್ಷತೆ ೪ ವಿವರ್ಣತೆ ೫ ದುರ್ಗಂಧ ೬ ಸ್ನಿಗ್ಧತೆ ೭ ಜಿಗಟು ೮ ಜಡತ್ವ) ಹಾಲಿನ ದೋಷಗಳ ಕಾರಣ—ಲಕ್ಷಣ—ಔಷಧಗಳನ್ನು ಮತ್ತು ಈ ದೋಷಗಳಿಂದುಂಟಾಗುವ ಕೆಲವು ರೋಗಗಳನ್ನು ಹೇಳುವೆವು. ||೨೮೦||

ಬಾಬ ಚಿಕಿತ್ಸೆಯನ್ನು ಹೇಳುತ್ತಾರೆ.

**ದೋಷದೂಷ್ಯಾ ಮಲಾಶ್ಚೈವ ಮಹತಾಂ ಯೇ ತಥಾಮಯಾಃ ||**
**ತ ಏವ ಸರ್ವೇ ಬಾಲಾನಾಂ ಮಾತ್ರಾ ತ್ವಲ್ಪತರಾಮತಾ ||೨೮೧||**
**ನಿವೃತ್ತಿರ್ವಮನಾದೀದಾಂ ಮೃದುತ್ವಂ ಪರತಂತ್ರತಾ ||**
**ವಾಕ್‌ಚೇಷ್ಟಯೋಶ್ಚ ಸಾಮರ್ಥ್ಯಂ ವೀಕ್ಷ್ಯ ಬಾಲೇಷು ಶಾಸ್ತ್ರವಿತ್ ||೨೮೨||**
**ಭೇಷಜಂ ಚಾಲ್ಪಮಾತ್ರಂ ತು ಯಥಾವ್ಯಾಧಿ ಪ್ರಯೋಜಯೋತ್ ||**
**ಮಧುರಾಣಿ ಕಷಾಯಾಣಿ ಕ್ಷೀರವಂತಿ ಮೃದೂನಿ ಚ ||೨೮೩||**
**ಅತ್ಯರ್ಥಸ್ನಿಗ್ಧರೂಕ್ಷೋಷ್ಣಮಮ್ಲಂ ಕಟುವಿಪಾಕಿ ಚ ||**
**ಗುರುಚೌಷಧಪಾನಾನ್ನಮೇತದ್ ಬಾಲೇಷು ಗರ್ಹಿತಮ್ ||೨೮೪||**
**ಸಮಾಸಾತ್ ಸರ್ವರೋಗಾಣಾಮೇತದ್ ಬಾಲೇಷು ಭೇಷಜಮ್ ||**
**ನಿರ್ದಿಷ್ಟಂ ಶಾಸ್ತ್ರವಿದ್‌ವೈದ್ಯೈಃ ಪ್ರವಿಭಜ್ಯ ಪ್ರಯೋಜಯೇತ್ ||೨೮೫||**

**ಅರ್ಥ—** ದೊಡ್ಡವರಿಗೆ ಇರುವ ದೋಷ ದೂಷ್ಯ [ ಧಾತು ] ಮಲ ಮತ್ತು ರೋಗಗಳೇ ಹುಡುಗರಿಗೂ ಇರುತ್ತವೆ. ಆದರೆ ಅವುಗಳ ಪ್ರಮಾಣವು ಅಲ್ಪವಿರುತ್ತದೆ. ||೨೮೧|| ಶಾಸ್ತ್ರವನ್ರು ಬಲ್ಲ ವೈದ್ಯನು ಹುಡುಗರಲ್ಲಿ ಇರುವ ವಮನ ಮುಂತಾದ ಶೋಧನಗಳ ಅನಿಚ್ಛೆ, ಕೋಮಲತ್ವ, ಮಾತು, ಕ್ರಿಯೆಗಳಲ್ಲಿರುವ ಅವುಗಳ ಪಾರತಂತ್ರ್ಯ, ಮತ್ತು ಸಾಮರ್ಥ್ಯವನ್ನು ವಿಚಾರಿಸಿ ||೨೮೨|| ಬೇನೆಗೆ ತಕ್ಕ ಔಷಧವನ್ನು ಅಲ್ಪಪ್ರಮಾಣದಿಂದಲೇ ಕೊಡಬೇಕು ಮಧುರ, ಒಗರು, ಹಾಲುಹಾಪದ ಸೌಮ್ಯ ಔಷಧಗಳನ್ನೇ ಕೊಡಬೇಕು ||೨೮೩|| ಬಹಳ ಸ್ನಿಗ್ಧ ಬಹಳ ರೂಕ್ಷ, ಬಹಳಉಷ್ಣ, ಬಹಳಹುಳಿ, ಬಹಳ ಕಾರ, ಜಡ ಔಷಧ ಅನ್ನ-ಪಾನ ಇವನ್ನು ಹುಡುಗರಿಗೆ ಕೊಡಬಾರದು ||೨೮೪|| ಹುಡುಗರ ಎಲ್ಲ ರೋಗಗಳಿಗೆ ಸಾಧಾರಣವಾಗಿ ಈ ಔಷಧವು ಹೇಳಲ್ಪಟ್ಟಿತು, ಶಾಸ್ತ್ರಜ್ಞನಾದ ವೈದ್ಯನು ಆಯಾ ರೋಗಗಳಲ್ಲಿ ತಕ್ಕಂತೆ ವಿಭಾಗಿಸಿ ಪ್ರಯೋಗಿಸಬೇಕು, ||೨೮೫||

## ಭವಂತಿ ಚಾತ್ರ

**ಇತಿ ಸರ್ವವಿಕಾರಾಣಾಮುಕ್ತಮೇತತ್ ಚಿಕಿತ್ಸಿತಮ್ ||**
**ಸ್ಥಾನಮೇತದ್ಧಿ ತಂತ್ರಸ್ಯ ರಹಸ್ಯಂ ಪರಮುಚ್ಯತೇ ||೨೮೬||**

**ಅಸ್ಮಿನ್ ಸಪ್ತದಶಾಧ್ಯಾಯಾಃ ಕಲ್ಪಾಃ ಸಿದ್ಧಯ ಏವ ಚ ||**
**ನಾಸಾದ್ಯಾತೇಽಗ್ನಿವೇಶಸ್ಯ ತಂತ್ರೇ ಚರಕಸಂಸ್ಕೃತೇ ||೨೮೭||**

**ತಾನೇತಾನ್ ಕಾಪಿಲಬಲಿಃ ಶೇಷಾನ್ ದೃಢಬಲೋಽಕರೋತ್ ||**
**ತಂತ್ರಸ್ಯಾಸ್ಯ ಮಹಾರ್ಥಸ್ಯ ಪೂರಣಾರ್ಥಂ ಯಥಾತಥಮ್ ||೨೮೮||**

**ರೋಗಾ ಯೇಪ್ಯತ್ರ ನೋದ್ದಿಷ್ಟಾ ಬಹುತ್ವಾನ್ನಾಮರೂಪತಃ ||**
**ತೇಷಾಮಪ್ಯೇತದೇವ ಸ್ಯಾದ್ ದೋಷಾದೀನ್ ವೀಕ್ಷ್ಯ ಭೇಷಜಮ್ ||೨೮೯||**

**ದೋಷದೂಷ್ಯನಿದಾನಾನಾಂ ವಿಪರೀತಂ ಹಿತಂ ಧ್ರುವಮ್ ||**
**ಉಕ್ತಾನುಕ್ತಾನ್ ಗದಾನ್ ಸರ್ವಾನ್ ಸಮ್ಯಗ್ ಯುಕ್ತಂ ನಿಯಚ್ಛತಿ ||೨೯೦||**

**ದೇಶಕಾಲಪ್ರಮಾಣಾನಾಂ ಸಾತ್ಮ್ಯಾತ್ಮ್ಯಸ್ಯ ಚೈವ ಹಿ ||**
**ಸಮ್ಯಗ್ಯೋಗ್ಯೋಽನಥಾ ಹ್ಯೇಷಾಂ ಪಥ್ಯಮಪ್ಯನ್ಯಥಾ ಬವೇತ್ ||೨೯೧||**

ಆಸ್ಯಾದಾಮಾಶಯಸ್ಥಾಂಶ್ಚ ರೋಗಾನ್ ನಸ್ತಃ ಶಿರೋಗತಾನ್ ||
ಗುದಾತ್ ಪಕ್ವಾಶಯಸ್ಥಾಂಶ್ಚ ಹಂತ್ಯಾಶು ದತ್ತಮೌಷಧಮ್ ||೨೯೨||

ಶರೀರಾವಯವೋತ್ಥೇಷು ವಿಸರ್ಪಪಿಡಕಾದಿಷು ||
ಯಥಾದೇಶಂ ಪ್ರದೇಹಾದಿ ಶಮನಂ ಸ್ಯಾದ್ ವಿಶೇಷತಃ ||೨೯೩||

ದೀನಾತುರೌಷಧವ್ಯಾಧಿ ಜೀರ್ಣಲಿಂಗರ್ತ್ವವೇಕ್ಷಣಾತ್ ||
ಕಾಲಂ ವಿದ್ಯಾದ್ ದಿನಾವೇಕ್ಷಂ ಪೂರ್ವಾಹ್ಣೇ ವಮನಂ ಯಥಾ ||೨೯೪||

ರೋಗನೇಷಾ ಯಥಾ ಪ್ರಾತರ್ನಿರನ್ನೋ ಬಲವಾನ್ ಪಿಬೇತ್ ||
ಭೇಷಜಂ ಲಘುಪಥ್ಯಾದ್ಯೈರ್ಯುಕ್ತಮದ್ಯಾತ್ತು ದುರ್ಬಲಃ ||೨೯೫||

ಭೈಷಜ್ಯಕಾಲೋ ಭುಕ್ತಾದೌ ಮಧ್ಯೇ ಪಶ್ಚಾನ್ಮುಹುರ್ಮುಹುಃ ||
ಸಾಮುದ್ಗಂ ಭಕ್ತಸಂಯುಕ್ತಂ ಗ್ರಾಸೇ ಗ್ರಾಸಾಂತರೇ ದಶ ||೨೯೬||

ಅಪಾನೇ ವಿಗುಣೇ ಪೂರ್ವಂ ಸಮಾನೇ ಮಧ್ಯಭೋಜನಮ್ ||
ವ್ಯಾನೆ ತು ಪ್ರಾತರಾಶಾದ್ಯಮುದಾನೇ ಭೋಜನೋತ್ತರಮ್ ||೨೯೭||

ವಾಯೌ ಪ್ರಾಣೇ ಪ್ರದುಷ್ಟೇ ತು ಗ್ರಾಸೇ ಗ್ರಾಸಾಂತರಿಷ್ಯತೇ ||
ಶ್ವಾಸಕಾಸಪಿಪಾಸಾಸು ತ್ವವಚಾರ್ಯಂ ಮುಹುರ್ಮುಹುಃ ||೨೯೮||

ಸಾಮುದ್ಗಂ ಹಿಕ್ಕಿನೇ ದೇಯಂ ಲಘುನಾನ್ನೇನ ಸಂಯುತಮ್ ||
ಸಂಭೋಜ್ಯಂ ಚೌಷಧಂ ಭೋಜ್ಯೈರ್ವಿಚಿತ್ರೈರರುಚೌ ಹಿತಮ್ ||೨೯೯||

ಜ್ವರೇ ಪೇಯಾಃ ಕಷಾಯಾಶ್ಚ ಕ್ಷೀರಂ ಸರ್ಪಿರ್ವಿರೇಚನಮ್ ||
ಷಡಹೇ ಷಡಹೇ ದೇಯಂ ಕಾಲಂ ವೀಕ್ಷ್ಯಾಮಯಸ್ಯ ಚ ||೩೦೦||

ಕ್ಷುದ್ ವೇಗಮೋಕ್ಷೌ ಲಘುತಾ ವಿಶುದ್ಧಿ ರ್ಜೀರ್ಣಲಕ್ಷಣಮ್ ||
ತದಾ ಭೇಷಜಮಾದೇಯಂ ಸ್ಯಾದ್ ದೋಷವದತೋಽನ್ಯಥಾ ||೩೦೧||

ಚಯಾದಯಶ್ಚ ದೋಷಾಣಾಂ ವರ್ಜ್ಯಂ ಸೇವ್ಯಂ ಚ ಯತ್ರಯತ್ ||
ಋತಾವವೇಕ್ಷ್ಯ ತತ್ಕಾರ್ಯಸರ್ವಂ ಪೂರ್ವಮುದಾಹೃತಮ್ ||೩೦೨||

ಉಪಕ್ರಮಾಣಾಂ ಕರಣೇ ಪ್ರತಿಷೇಧೇಚಕಾರಣಮ್ ||
ವ್ಯಾಖ್ಯಾತಮಬಲಾನಾಂ ಚ ಸವಿಕಲ್ಪಾನಾಮವೇಕ್ಷಣೇ ||೩೦೩||

ಮುಹುರ್ಮುಹುಶ್ಚ ರೋಗಾಣಾಮವಸ್ಥಾ ಆತುರಸ್ಯ ಚ ||
ಅವೇಕ್ಷಮಾಣಸ್ತು ಭಿಷಕ್ ಚಿಕಿತ್ಸಾಸು ನ ಮುಹ್ಯತಿ ||೩೦೪||

**ಇತ್ಯೇವಂ ಷಡ್ವಿಧಂ ಕಾಲಮನವೇಕ್ಷ್ಯ ಭಿಷಗ್ ಜಿತಮ್ ॥**
**ಪ್ರಯುಕ್ತಮಹಿತಾಯ ಸ್ಯಾತ್ಸಸ್ಯಸ್ಯಾಕಾಲವರ್ಷವತ್ ॥೩೦೫॥**

**ಅರ್ಥ —** ಈ ಪ್ರಕಾರ ಎಲ್ಲ ರೋಗಗಳಿಗೆ ಚಿಕಿತ್ಸೆಯು ಹೇಳಲ್ಪಟ್ಟಿತು. ಆದ್ದದಂಪ ಈ ಚಿಕಿತ್ಸಾಸ್ಥಾನವು ಈ ಗ್ರಂಥದ ಮು:ಖ್ಯ ರಹಸ್ಯವೆಂದು ಹೇಳಲ್ಪಡುತ್ತದೆ. ॥೨೮೬॥ ಈ ಚಿಕಿತ್ಸಾ ಸ್ಥಾನದ (ಕಡೆಯ) ೧೭ ಅಧ್ಯಾಯಗಳು ಮತ್ತು ಕಲ್ಪ ಮತ್ತು ಸಿದ್ಧಿಯೆಂಬ ೨ ಸ್ಥಾನಗಳು ಚರಕಾಚಾರ್ಯರಿಂದ ಸಂಸ್ಕಾರ ಹೊಂದಿದ ಅಗ್ನಿವೇಶದ ಗ್ರಂಥದತ ಕಂಡುಬರುವದಿಲ್ಲ. ॥೨೮೭॥ ಕಪಿಲಬಲ ಋಷಿಗಳ ಮಪಕ್ಕಳಾದ ದೃಢಬಲಾಚಾರ್ಯರು ಬಹಳ ಮಹತ್ವದ್ದಾದ ಈ ಗ್ರಂಥದ ಸಂಪೂರ್ತಿಗಾಗಿ ಉಳಿದ ಆ ಭಾಗವನ್ನು ಮಾಡಿಹಾಕಿದ್ದಾರೆ. ॥೨೮೮॥ ಬಹಳ ಇರುವದರಿಂದ ಅನೇಕ ರೋಗಗಳ ಹೆಸರನ್ನು ಮತ್ತು ಲಕ್ಷಣವನ್ನು ಇಲ್ಲಿ ಹೇಳಿಲ್ಲ. ಅಂಥ ರೋಗಗಳಿಗೆ ಅವುಗಳ ದೋಷ ದೂಷ್ಯಗಳನ್ನು ವಿಚಾರಿಸಿ ಇದೇ ಔಷಧವನ್ನು ಕೊಡಬೇಕು. ॥೨೮೯॥ ದೋಷ ದೂಷ್ಯ ಮತ್ತು ಕಾರಣಗಳ ವಿಪರೀತವಿದ್ದ ದ್ರವ್ಯವು ನಿಶ್ಚಿತವಾಗಿ ಹಿತಕಾರಿಯಾಗುವದು. ಅದನ್ನು ಚನ್ನಾಗಿ ಉಪಯೋಗಿಸಿದರೆ ಅದು ಹೇಳಿದ ಮತ್ತು ಹೇಳದೇ ಇದ್ದ ಎಲ್ಲ ರೋಗಗಳನ್ನು ಕಳೆಯುವದು ॥೨೯೦॥ ದೇಶ–ಕಾಲ–ಪ್ರಮಾಣ–ಸಾತ್ಮ್ಯ–ಅಸಾತ್ಮ್ಯ ದ್ರವ್ಯಗಳ ಸಮ್ಯಗ್ಯೋಗವು ಎಲ್ಲ ರೋಗಗಳನ್ನು ಕಳೆಯುವದು. ಇಲ್ಲವಾದರೆ ಅವು ಪಥ್ಯಗಳಾಗಿದ್ದರೂ ರೋಗವನ್ನುಂಟುಮಾಡುವವು ॥೨೯೧॥ ಬಾಯಿಯಿಂದ ಕೊಟ್ಟ ಔಷಧವು ಆಮಾಶಯದಲ್ಲಿದ್ದ, ಮೂಗಿನಿಂದ ಕೊಟ್ಟ ಔಷಧವು ತಲೆಯಲ್ಲಿದ್ದ, ಗುದದ್ವಾರದಿಂದ ಕೊಟ್ಟ ಔಷಧವು ಪಕ್ವಾಶಯದಲ್ಲಿದ್ದ ರೋಗಗಳನ್ನು ತೀವ್ರವಾಗಿ ಕಳೆಯುವದು. ॥೨೯೨॥ ಶರೀರದ ಅವಯವಗಳಲ್ಲಿ ಉಂಟಾದ ಇಸಬು, ಬಕ್ಕೆ, ಮುಂತಾದವುಗಳ ಮೇಲೆ ಅವುಗಳ ಸ್ಥಾನದಂತೆ ಲೇಪ ಮುಂತಾದ ಉಪಚಾರಗಳನ್ನು ವಿಶೇಷವಾಗಿ ಮಾಡಬೇಕು. ಅವು ರೋಗಶಮವನ್ನು ಮಾಡುವವು. ॥೨೯೩॥ ೧ ದಿವಸ ೨ ರೋಗಿ ೩ ಔಷಧ ೪ ಬೇನೆ ೫ ವಚನ ೬ ಋತು ಇವುಗಳ ಸಾಪೇಕ್ಷವಾಗಿ ಚಿಕಿತ್ಸಾಕಾಲವು ಇರುವದು. ಅದನ್ನು ತಿಳಿದುಕೊಳ್ಳಬೇಕು. ೧ ದಿವಸವನ್ನು ಅವಲಂಬಿಸಿದ ಕಾಲವು.— ಉ. ಮುಂಜಾನೆ ವಮನವನ್ನು ಕೊಡಬೇಕು. ॥೨೯೪॥ ೨ ರೋಗಿಯನ್ನು ಅವಲಂಬಿಸಿದ ಕಾಲವು— ಉ. ರೋಗಿಯು ಬಲಿಷ್ಠನಿದ್ದರೆ ಊಟ ಮಾಡದ ಮೊದಲೇ ಔಷಧವನ್ನು ಕುಡಿಯಬೇಕು. ದುರ್ಬಲನಿದ್ದರೆ ಹಗುರಾದ ಆಹಾರ

ಮುಂತಾದವುಗಳೊಡನೆ ಔಷಧ ಕೊಡಬೇಕು. ||೨೯೫|| ೩ ಔಷಧ ಸಾಪೇಕ್ಷೆ ಕಾಲವು— ೧೦. ಊಟದ ಮೊದಲು, ಅಥವಾ ನಡುವೆ, ಅಥವಾ ಆಹಾರದೊಡನೆ, ಅಥವಾ ತುತ್ತು ತುತ್ತಿಗೆ, ಅಥವಾ ತುತ್ತುಗಳ ನಡುವೆ, ಮತ್ತು ಹಿಂದೆ ಹೇಳಿದ ಊಟಕ್ಕಿಂತ ಮೊದಲು ಪಥ್ಯ ಪದಾರ್ಥಗಳನ್ನು ಕೂಡಿಸಿ ಹೀಗೆ ಹತ್ತು ಔಷಧ ಕೊಡುವ ಕಾಲಗಳಿರುತ್ತವೆ. ||೨೯೬|| ೧ ಅಪಾನವಾಯುವು ವಿಕೃತವಾಗಿದ್ದರೆ ಊಟಕ್ಕಿಂತ ಮೊದಲು, ೨ ಸಮಾನವಾಯುವು ವಿಕೃತವಾಗಿದ್ದರೆ ಊಟದ ನಡುವೆ, ೩ ವ್ಯಾನವು ವಿಕೃತವಾಗಿದ್ದರೆ ಮುಂಜಾನೆ ಊಟದ ಮೊದಲು, ೪ ಉದಾನವಾಯುವು ವಿಕೃತವಾಗಿದ್ದರೆ ಊಟದನಂತರ ||೨೯೭|| ೫ ಪ್ರಾಣವಾಯುವು ದುಷ್ಟವಾಗಿದ್ದರೆ ತುತ್ತು ತುತ್ತಿಗೆ ಅಥವಾ ತುತ್ತಿನ ಮಧ್ಯದಲ್ಲಿ, ೬ ಕೆಮ್ಮು, ದಮ್ಮು. ಸೀರಡಿಕೆಗಳನ್ನು ಆಗಾಗ್ಗೆ ||೨೯೮|| ೭ ಬಿಕ್ಕುಗಳಲ್ಲಿ ಹಗುರು ಆಹಾರದ ಮಧ್ಯದಲ್ಲಿ, ೮ ಅರುಚಿಯಲ್ಲಿ ತರತರದ ಆಹಾರದೊಡನೆ ಔಷಧವನ್ನು ಕೊಡಬೇಕು ||೨೯೯|| ೪ ವ್ಯಾಧಿ ಸಾಪೇಕ್ಷ ಕಾಲವು— ಜ್ವರವಿದ್ದರೆ ಮೊದಲು ಆರು ದಿವಸ ಪೇಯ, ಎರಡನೇ ಆರು ದಿವಸ ಕಷಾಯ, ಮುಂದಿನ ಆರು ದಿವಸ ಹಾಲು, ಮುಂದೆ ಘೃತ, ಮುಂದೆ ವಿರೇಚನ, ಹೀಗೆ ರೋಗದಿಂದ ಕಾಲವನ್ನು ವಿಚಾರಿಸಿ ಕೊಡಬೇಕು. ||೩೦೦|| ೫ ಪಚನ ಸಾಪೇಕ್ಷಕಾಲವು— ಹಸಿವೆ, ಮಲಮೂತ್ರಗಳು ಆಗೋಣ, ಲಘುತ್ವ, ಚಲೋ ತೇಗುಬರೋಣ, ಈ ಅನ್ನ ಪಕ್ವವಾದ ಲಕ್ಷಣವನ್ನು ನೋಡಿ ಔಷಧವನ್ನು ಕೊಡಬೇಕು, ಇಲ್ಲವಾದರೆ ಅಪಾಯವಾಗುವದು. ||೩೦೧|| ೬. ಋತು ಸಾಪೇಕ್ಷಕಾಲವು— ಯಾವ ಯಾವ ಋತುಗಳಲ್ಲಿ ಯಾವ ಯಾವ ದೋಷಗಳ ಸಂಚಯ ಕೋಪ–ಶಮನಗಳಾಗುವವೊ, ಅವುಗಳ ಯಾವ ಯಾವ ದ್ರವ್ಯಗಳನ್ನು ತಕ್ಕೊಳ್ಳಬೇಕು ಯಾವವುಗಳನ್ನು ಬಿಡಬೇಕು. ಇವನ್ನೆಲ್ಲ (ಸೂತ್ರ ಸ್ಥಾನದಲ್ಲಿ) ಹೇಳಿದ್ದೇವೆ. ಅವನ್ನು ವಿಚಾರಿಸಿ ಔಷಧವನ್ನು ಕೊಡಬೇಕಾಗುವದು. ||೩೦೨|| ಉಪಚಾರಗಳನ್ನು ಎಲ್ಲಿ ಮಾಡಬೇಕು; ಎಲ್ಲಿ ಮಾಡಬಾರದು; ಮತ್ತು ಅವುಗಳ ಕಾರಣವೇನು? ಸಬಲ–ದುರ್ಬಲರ ವಿಚಾರ ಇವುಗಳನ್ನು ಹಿಂದೇ ಷಡುಪಕ್ರಮಣೀಯ ಅಧ್ಯಾಯದಲ್ಲಿ ಹೇಳಿದೆ ||೩೦೩|| ಆಗಾಗ್ಗೆ ರೋಗಗಳನ್ನು ರೋಗಿಯ ಅವಸ್ಥೆಯನ್ನು ನೋಡುತ್ತಿರುವ ವೈದ್ಯನು ಚಿಕಿತ್ಸೆಯಲ್ಲಿ ತಪ್ಪಲಾರನು, ||೩೦೪|| ಈ ಪ್ರಕಾರ ಆರು ತರದ ಕಾಲವನ್ನು ವಿಚಾರಿಸದೇ ಮಾಡಿದ ಚಿಕಿತ್ಸೆಯು ಅಕಾಲದಲ್ಲಿ ಬಿದ್ದ ಮಳೆಯು ಬೆಳೆಗೆ ಅಪಾಯ ಮಾಡುವಂತೆ ಅಪಾಯವನ್ನುಂಟುಮಾಡುವದು ||೩೦೫||

ವ್ಯಾಧೀನಾಮೃತ್ವಹೋರಾತ್ರವಯಸಾಂ ಭೋಜನಸ್ಯ ಚ ||
ವಿಶೇಷೋ ಭಿದ್ಯತೇ ಯಸ್ತು ಕಾಲಾಪೇಕ್ಷಃ ಸ ಉಚ್ಯತೇ ||೩೦೬||

ವಸಂತೇ ಶ್ಲೇಷ್ಮಜಾ ರೋಗಾಃ ಶರತ್ಕಾಲೇ ತು ಪಿತ್ತಜಾಃ ||
ವರ್ಷಾಸು ಕಾತಿಕಾಶ್ಚೈವ ಪ್ರಾಯಃ ಪ್ರಾದುರ್ಭವಂತಿ ಹಿ ||೩೦೭||

ನಿಶಾಂತೇ ದಿವಸಾಂತೇ ಚ ವರ್ಧಂತೇ ವಾತಜಾ ಗದಾಃ ||
ಪ್ರಾತಃ ಕ್ಷಪಾದೌ ಕಫಜಾಸ್ತಯೋರ್ಮಧ್ಯೇ ತು ಪಿತ್ತಜಾಃ ||೩೦೮||

ವಯೋಽನ್ತಮಧ್ಯಪ್ರಥಮೇ ವಾತಪಿತ್ತಕಫಾಮಯಾಃ ||
ಬಲವಂತೋ ಭವಂತ್ಯೇವ ಸ್ವಭಾವಾದ್ ವಯಸೋ ನೃಣಾಮ್
||೩೦೯||

ಜೀರ್ಣಾಂತೇ ವಾತಜಾ ರೋಗಾ ಜೀರ್ಯಮಾಣೇ ತು ಪಿತ್ತಜಾಃ ||
ಶ್ಲೇಷ್ಮದಾ ಭುಕ್ತಮಾತ್ರೇ ತು ಲಭಂತೇ ಪ್ರಾಯಶೋಬಲಮ್||೩೧೦||

**ಅರ್ಥ—** ರೋಗ, ಋತು, ಹಗಲು, ರಾತ್ರಿ, ವಯಸ್ಸು, ಊಟ, ಇವುಗಳ ಅವಸ್ಥಾವಿಶೇಷದಿಂದ ಉಂಟಾಗುವ ಭೇದವು ಕಾಲಾಪೇಕ್ಷೆಯೆಂದು ಕರೆಯಲ್ಪಡುತ್ತದೆ, ||೩೦೬|| ವಸಂತಋತುವಿನಲ್ಲಿ ಬಹಳವಾಗಿ ಕಫದ ರೋಗಗಳೂ ಶರತ್ಕಾಲದಲ್ಲಿ ಬಹಳವಾಗಿ ಪಿತ್ತರೋಗಗಳೂ ವರ್ಷಾಕಾಲದಲ್ಲಿ ಬಹುಶಃ ವಾತರೋಗಗಳೂ ಉಂಟಾಗುತ್ತವೆ, ಇದು ರೋಗಾವೇಕ್ಷಣವು, ||೩೦೭|| ರಾತ್ರಿಯ ಮತ್ತು ಹಗಲಿನ ಕೊನೆಯಲ್ಲಿ ವಾತದರೋಗಗಳೂ ಮುಂಜಾನೆ ಮತ್ತು ರಾತ್ರಿಯ ಮೊದಲ ಭಾಗದಲ್ಲಿ ಕಫರೋಗಗಳೂ ಅವುಗಳ ಮಧ್ಯದಲ್ಲಿ ಪಿತ್ತರೋಗಗಳೂ ಉಂಟಾಗುತ್ತವೆ, ಇದು ಅಹೋರಾತ್ರಾವೇಕ್ಷಣವು ||೩೦೮|| ವಯಸ್ಸಿನ ಕೊನೆಯಲ್ಲಿ (ಮುಪ್ಪಿನಲ್ಲಿ) ವಾತರೋಗಗಳೂ ಮಧ್ಯ (ತಾರುಣ್ಯ) ದಲ್ಲಿ ಪಿತ್ತರೋಗಗಳೂ ಆರಂಭ (ಬಾಲ್ಯ) ದಲ್ಲಿ ಕಫರೋಗಗಳೂ ಮನುಷ್ಯನ ವಯಸ್ಸಿನ ಸ್ವಭಾವದಿಂದಲೇ ಬಲಿಷ್ಠವಾಗಿರುತ್ತವೆ, ಇದು ವಯೋವೇಕ್ಷಣವು, ||೩೦೯|| ಅನ್ನಪಚನವಾಗಲು ವಾತರೋಗಗಳೂ ಅನ್ನಪಚನವಾಗುತ್ತಿರಲು ಪಿತ್ತಜರೋಗಗಳೂ ಉಂಡ ಕೂಡಲೇ ಕಫಜರೋಗಗಳೂ ಬಹಳವಾಗಿ ಬಲಿಷ್ಠವಾಗುತ್ತವೆ, ಇದು ಜೀರ್ಣಾವೇಕ್ಷಣವು ||೩೧೦||

ಪ್ರಮಾಣಸಾಪೇಕ್ಷ ಚಿಕಿತ್ಸಾಕಾಲವನ್ನು ಹೇಳುತ್ತಾರೆ.

**ನಾಲ್ಪಂ ಹಂತ್ಯೌಷಧಂ ವ್ಯಾಧಿಂ ಯಥಾಪೋಽಲ್ಪಾ ಮಹಾನಲಮ್ ||**
**ದೋಷವಚ್ಚಾತಿಮಾತ್ರಂ ಸಸ್ಯಸ್ಯಾತ್ಯುದಕಂ ಯಥಾ ||೩೧೧||**
**ಸಂಪ್ರಧಾರ್ಯ ಬಲಂ ತಸ್ಮಾದಾಮಯಸ್ಯೌಷಧಸ್ಯ ಚ ||**
**ನೈವಾತಿಬಹುಲಾತ್ಯಲ್ಪಂ ಭೈಷಜ್ಯಂ ಚಾವಚಾರಯೇತ್ ||೩೧೨||**

**ಅರ್ಥ—** ಸ್ವಲ್ಪ ನೀರು ದೊಡ್ಡ ಬೆಂಕಿಯನ್ನು ಹೇಗೆ ನಂದಿಸದೋ, ಹಾಗೆ ಸ್ವಲ್ಪ ಔಷಧವು ದೊಡ್ಡ ಬೇನೆಯನ್ನು ಕಳೆಯದು. ಬಹಳ ನೀರು ಹೇಗೆ ಬೆಳೆಗೆ ಅಪಾಯಕಾರಕವೋ ಹಾಗೆ ಬಹಳ ಔಷಧವೂ ಬೇನೆಯುಳ್ಳವನಿಗೆ ಅಪಾಯವನ್ನುಂಟು ಮಾಡುವದು. ||೩೧೧|| ಆದ್ದರಿಂದ ರೋಗ ಮತ್ತು ಔಷಧಗಳ ಬಲವನ್ನು ನಿಶ್ಚಯಿಸಿ ಬಹಳ ಹೆಚ್ಚು ಅಥವಾ ಬಹಳ ಕಡಿಮೆ ಯಾಗುವಂತೆ ಔಷಧವನ್ನು ಪ್ರಯೋಗಿಸಬೇಕು. ||೩೧೨||

ಸಾತ್ಮ್ಯಾಪೇಕ್ಷ ಚಿಕಿತ್ಸಾ ಕಾಲವನ್ನು ಹೇಳುತ್ತಾರೆ.

**ಔಚಿತ್ಯಾದ್ ಯಸ್ಯ ಯತ್ ಸಾತ್ಮ್ಯಂ ದೇಶಸ್ಯ ಪುರುಷಸ್ಯ ಚ ||**
**ಅಪಥ್ಯಮಪಿ ನೈಕಾಂತಾತ್ ಸಂತ್ಯಜ್ಯಾ ಲಭತೇ ಸುಖಮ್ ||೩೧೩||**
**ಬಾಹ್ಲಿಕಾಃ ಶಾದ್ವಲಾಶ್ಚೀನಾಃ ಶುನೀಕಾ ಯವನಾಃ ಶಕಾಃ ||**
**ಮಾಂಸಗೋಧೂಮಮಾಧ್ವೀಕಶಸ್ತ್ರವೈಶ್ವಾನರೋಚಿತಾಃ ||೩೧೪||**
**ಮತ್ಸ್ಯಸಾತ್ಮ್ಯಾಸ್ತಥಾ ಪ್ರಾಚ್ಯಾಃ ಕ್ಷೀರಸಾತ್ಮ್ಯಾಶ್ಚ ಸೈಂಧವಾಃ ||**
**ಅಶ್ಮಕಾವಂತಿಕಾನಾಂ ತು ತೈಲಾಮ್ಲಂ ಸಾತ್ಮ್ಯಮುಚ್ಯತೇ ||೩೧೫||**
**ಕಂದಮೂಲಫಲಂ ಸಾತ್ಮ್ಯಂ ವಿದ್ಯಾನ್ಮಲಯವಾಸಿನಾಂ ||**
**ಸಾತ್ಮ್ಯಂ ದಕ್ಷಿಣತಃಪೇಯಾಮಂಡಶ್ಚೋತ್ತರಪಶ್ಚಿಮೇ ||೩೧೬||**
**ಮಧ್ಯದೇಶೇ ಭವೇತ್ ಸಾತ್ಮ್ಯ ಯವಗೋಧೂಮಗೋರಸಾಃ ||**
**ಸಾತ್ಮ್ಯಂ ಹ್ಯಾಶು ಬಲಂ ಧತ್ತೇ ನಾತಿದೋಷಂ ಚ ಬಹ್ವಪಿ ||೩೧೭||**

**ಅರ್ಥ—** ರೂಢಿಯಿಂದ ಯಾವ ದೇಶಕ್ಕೆ ಅಥವಾ ಯಾವನ ಪ್ರಕೃತಿಗೆ ಯಾವದು ಸಾತ್ಮ್ಯವಾಗಿದೆಯೋ ಅದು ಅಪಥ್ಯವಾಗಿದ್ದರೂ ಅದನ್ನು ಸಂಪೂರ್ಣ ಬಿಟ್ಟರೆ ಅದರಿಂದ ಹಿತವಾಗುವದು. ||೩೧೩|| ಬಾಹ್ಲೀಕ (ದೇಶ ವಿಶೇಷ), ಶಾದ್ವಲ, ಚೀನ, ಶುನೀಕ, ಯವನ, ಶಕ, ಈ ಜನರಿಗೆ ಮಾಂಸ, ಗೋದಿ, ಮದ್ಯ, ಶಸ್ತ್ರ, ಅಗ್ನಿದಾಹಗಳ ರೂಢಿಯು ಇರುತ್ತದೆ.

||೩೧೪|| ಪೂರ್ವದೇಶದವರಿಗೆ ಮೀನಿನ ರೊಟ್ಟಿಯೂ ಸಿಂಧುದೇಶದವರಿಗೆ ಹಾಲಿನ ರೊಟ್ಟಿಯೂ ಅಶ್ಮಕ, ಅವಂತಿ (ಉಜ್ಜಯಿನಿ) ದೇಶದವರಿಗೆ ಎಣ್ಣೆ ತುಪ್ಪಗಳೂ ಸಾತ್ಮ್ಯವಾಗಿರುತ್ತವೆ. ||೩೧೫|| ಮಲಯ ದೇಶದವರಿಗೆ ಗಡ್ಡೆ ಬೇರು ಫಲಗಳ ಸಾತ್ಮ್ಯವಿರುತ್ತದೆ. ದಕ್ಷಿಣದೇಶದವರಿಗೆ ಪೇಯವೂ ಉತ್ತರ ಪಶ್ಚಿಮ ದೇಶದವರಿಗೆ ಗಂಜಿಯೂ ಸಾತ್ಮ್ಯವಾಗಿರುತ್ತದೆ. ||೩೧೬|| ಮಧ್ಯ ದೇಶದವರಿಗೆ ಜವೆಗೋದಿ ಆಕಳಹಾಲುಗಳು ಸಾತ್ಮ್ಯವಾಗಿರುತ್ತವೆ. ಸಾತ್ಮ್ಯವಾದ ದ್ರವ್ಯವು ಶೀಘ್ರವಾಗಿ ಬಲವನ್ನು ಕೊಡುವದು. ಹೆಚ್ಚು ತಿಂದರೂ ಬಹಳ ಅಪಾಯವಾಗದು ||೩೧೭||

ಚಿಕಿತ್ಸೋಪಯುಕ್ತ ಬೇರೆ ಸೂಚನೆಗಳನ್ನು ಹೇಳುತ್ತಾರೆ.

**ಯೋಗೈರೇಹಂ ಚಿಕಿತ್ಸನ್ ಹಿ ದೇಶಾದ್ಯಜ್ಞೋಽಪರಾಧ್ಯತಿ ||**
**ತೇಷಾಂ ತತ್ ಸಾತ್ಮ್ಯಯುಕ್ತಾಶ್ಚ ವಯೋವಸ್ಥಾಯುತಾಸ್ತಥಾ||೩೧೮||**

**ಆಯುರ್ಬಲಶರೀರಾದಿ ಭೇದಾ ಹಿ ಬಹವೋ ಮತಾಃ ||**
**ತಥಾಂತಃಸಂಧಿಮಾರ್ಗಾಣಾಂ ದೋಷಾಣಾಂ ಗೂಢಚಾರಿಣಾಮ್ ||೩೧೯||**

**ಭವೇತ್ ಕದಾಚಿತ್ ಕುತ್ರಾಪಿ ವಿರುದ್ಧಾಭಿಮತಾ ಕ್ರಿಯಾ ||**
**ಪಿತ್ತಮಂತರ್ಗತಂಗೂಢಂಸ್ವೇದಸೇಕೋಪನಾಹನೈಃ ||೩೨೦||**

**ನೀಯತೇ ಬಹಿರುಷ್ಣೈರ್ಹಿ ತಥೋಷ್ಣಂ ಶಮಯಂತಿ ತೇ ||**
**ಬಾಹ್ಯೈಃ ಶೀತೈಶ್ಚ ಸೇಕಾದ್ಯೈರೂಷ್ಮಾಂತರ್ಯಾತಿ ಪೀಡಿತಃ ||೩೨೧||**

**ಸೋಽಂತರ್ಗೂಢಂ ಕಫಂಹಂತಿ ಶೀತಃ ಶೀತೈಸ್ತಥಾ ವ್ರಜೇತ್ ||**
**ಶ್ಲಕ್ಷ್ಣಪಿಷ್ಟೋ ಘನೋ ಲೇಪಶ್ಚಂದನಸ್ಯಾಪಿ ದಾಹಕೃತ್ ||೩೨೨||**

**ತ್ವಗ್ಗತಸ್ಯೋಷ್ಮಣೋ ರೋಧಾದ್ ದಾಹಹೃತ್ ತ್ವನ್ಯಥಾಗುರೋಃ ||**
**ಛರ್ದಿಘ್ನೀ ಮಕ್ಷಿಕಾವಿಷ್ಠಾ ಮಕ್ಷಿಕಾ ಬಹು ವಾಮಯೇತ್ ||೩೨೩||**

**ದ್ರವ್ಯೇಷು ಚ ವಿದಗ್ಧೇಷು ಚೈವಂ ತೇಷು ಚ ವಿಕ್ರಿಯಾ ||**
**ಏತಸ್ಮಾದೌಷಧಾದೀನಿ ಪರೀಕ್ಷ್ಯ ದಶ ತತ್ವತಃ ||೩೨೪||**

**ಕುರ್ಯಾಚ್ಚಿಕಿತ್ಸಿತಂ ಪ್ರಾಜ್ಞೋ ನ ಯೋಗೈರೇವಕೇವಲಮ್ ||**
**ನಿವೃತ್ತೋಽಪಿಪುನರ್ವ್ಯಾಧಿಃ ಸ್ವಲ್ಪೇನಾಯಾತಿ ಹೇತುನಾ ||೩೨೫||**

**ಕ್ಷೀಣೇ ಮಾರ್ಗೀಕೃತೇ ದೋಷೇ ಶೇಷಃ ಸೂಕ್ಷ್ಮ ಇವಾನಲಃ ||**
**ತಸ್ಮಾತ್ ತಮನುಬಧ್ನೀಯಾತ್ ಪ್ರಯೋಗೇಣಾನಪಾಯಿನಾ ||೩೨೬||**

ದಾಢ್ಯಾರ್ಥಂ ಪ್ರಾಕ್‌ಪ್ರಯುಕ್ತಸ್ಯ ಸಿದ್ಧಸ್ಯಾಪ್ಯೌಷಧಸ್ಯ ತು ||
ಕಠಿನಾದೂನಭಾವಾಚ್ಚ ದೋಷೋಽಂತಃ ಕುಪಿತೋ ಮಹಾನ್||೩೨೭||
ಪಥ್ಯೈರ್ಮೃದ್ವಲ್ಪತಾಂ ನೀತೋ ಮೃದುದೋಷಕರೋ ಭವೇತ್ ||
ಪಥ್ಯಮಪ್ಯಶ್ನತಸ್ತಸ್ಮಾದ್ ಯೋ ವ್ಯಾಧಿರುಪಜಾಯತೇ ||೩೨೮||
ಜ್ಞಾತ್ವೈವಂ ವೃದ್ಧಿಮಭ್ಯಾಸಮಥವಾನ್ಯಸ್ಯ ಕಾರಯೇತ್ ||
ಸಾತತ್ಯಾತ್ ಸ್ವಾದ್ವಭಾವಾಚ್ಚ ಪಥ್ಯಂ ದ್ವೇಷ್ಯತ್ವಮಾಗತಮ್ ||೩೨೯||
ಕಲ್ಪನಾವಿಧಿಭಿಸ್ತೈಸ್ತೈಃ ಪ್ರಿಯತ್ವಂ ಗಮಯೇತ್‌ಪುನಃ ||
ಮನಸೋ ನಾನುಕೂಲ್ಯತ್ವಾತ್ ತುಷ್ಟಿರೂರ್ಜಾ ರುಚಿರ್ಬಲಮ್ ||೩೩೦||
ಸುಖೋಪಭೋಗತಾ ಚ ಸ್ಯಾದ್ ವ್ಯಾಧೇಶ್ಚಾತೋ ಬಲಕ್ಷಯಃ ||
ಲೌಲ್ಯಾದ್ ದೋಷಕ್ಷಯಾದ್‌ವ್ಯಾಧಿವೈಧರ್ಮ್ಯಾದ್ ಮಾಪಿ ಯಾ
ರುಚಿಃ ||೩೩೧||
ತಾಸು ಪಥ್ಯೋಪಚಾರಃ ಸ್ಯಾದ್ ಯೋಗೇನಾದ್ಯಂ ವಿಕಲ್ಪಯೇತ್ ||

**ಅರ್ಥ—** ಈ ದೇಶಾದಿಗಳ ಜ್ಞಾನವಿಲ್ಲದ ವೈದ್ಯನು ಔಷಧಗಳನ್ನು ಕೊಟ್ಟು ಚಿಕಿತ್ಸಿಸಿದರೆ ತಪ್ಪಾಗುವದು. ಈ ಜನರ (ಮೇಲೆ ಹೇಳಿದ) ದ್ರವ್ಯಗಳ ಸಾತ್ಮ್ಯವುಳ್ಳ ಬೇರೆ ಬೇರೆ ವಯಸ್ಸು ಅವಸ್ಥೆಗಳಿಂದ ಕೂಡಿದ ||೩೨೮|| ಆಯುಷ್ಯ, ಬಲ, ಶರೀರ ಮುಂತಾದವುಗಳ ಅನೇಕ ಭೇದಗಳು ಇರುತ್ತವೆ. ಅದರಂತೆ ಒಳಗೆ ಅಥವಾ ಸಂಧಿ ಮಾರ್ಗಗಳಲ್ಲಿ ಇರುವ ಮತ್ತು ಗುಪ್ತವಾಗಿ ಸಂಚರಿಸುವ ದೋಷಗಳಿಗೆ ||೩೨೯|| ಒಮ್ಮೊಮ್ಮೆ ಒಂದೊಂದು ಕಡೆಯಲ್ಲಿ ವಿರುದ್ಧವೆಂದ್ಯುಬಗೆದ ಚಿಕಿತ್ಸೆಯನ್ನು ಮಾಡಬೇಕಾಗುವದು. ಒಳಗೆ ಗುಪ್ತವಾಗಿ ಇದ್ದ ಪಿತ್ತವು ಸ್ವೇದ, ಪರಿಷೇಕ, ಉಪನಾಹಗಳಿಂದ ||೩೩೦|| ಹೊರಗೆ ತೆಗೆಯಲ್ಪಡುತ್ತದೆ. ಹೀಗೆ ಉಷ್ಣಗಳಿಂದ ಉಷ್ಣವು ಕಳೆಯಲ್ಪಡುತ್ತದೆ, ಹೊರಗಿನ ಶೀತ, ಪರಿಷೇಕ ಮುಂತಾದವುಗಳಿಂದ ಪೀಡಿತವಾದ ಉಷ್ಣತೆಯು ||೩೩೧|| ಒಳಗೆ ಅಡಗಿಕೊಂಡ ಕಫವನ್ನು ಕಳೆಯುತ್ತದೆ. ಹೀಗೆ ಶೀತದಿಂದ ಶೀತವು ಹೋಗುವದು ಚಂದನವು ಶೀತವಿದ್ದರೂ ಚೆನ್ನಾಗಿ ಅರೆದ ಅದರ ಪಟ್ಟಲೇಪವು ದಾಹವನ್ನುಂಟುಮಾಡುವದು. ||೩೩೨|| ಇದರ ವಿಪರೀತವಾಗಿ ಉಷ್ಣವಾದ ಅಗರುವಿನ ಕಲ್ಕದ ಲೇಪವು ತ್ವಚೆಯಲ್ಲಿಯ ಉಷ್ಣತೆಯ ಪ್ರತಿಬಂಧವನ್ನು ಮಾಡುವದರಿಂದ ದಾಹವನ್ನು ಕಳೆಯುವದು ನೊಣದ ಮಲವು ವಾಂತಿಯನ್ನು ಕಳೆಯುವದು. ಆದರೆ ನೊಣವು ಬಹಳ ವಾಂತಿ

ಯನ್ನುಂಟುಮಾಡುವದು. ||೩೨೩|| ಇದರಂತೆ ಬೇಯಿಸಿ ತಿನ್ನುವದರಿಂದ ದ್ರವ್ಯಗಳಲ್ಲಿ ಗುಣಗಳು ಬರುವವು. ಆದ್ದರಿಂದ ಔಷಧ ಮುಂತಾದ ೧೦ ಸಂಗತಿಗಳನ್ನು (ಹಿಂದೆ ವಿಮಾನ ಸ್ಥಾನದಲ್ಲಿ ಹೇಳಿದಂತೆ) ಚೆನ್ನಾಗಿ ಚಿಕಿತ್ಸೆಯನ್ನು ಮಾಡಬೇಕೇ ಹೊರತು ಕೇವಲ ಔಷಧಗಳಿಂದಲೇ ಚಿಕಿತ್ಸಿಸಬಾರದು ಸ್ವಲ್ಪೇ ಉಳಿದಿದ್ದರೂ ಬೆಂಕಿಗೆ ಸ್ವಲ್ಪ ಗಾಳಿ ಅಥವಾ ಉರವಲು ಸಿಕ್ಕಕೂಡಲೇ ಅದು ದೊಡ್ಡದಾಗುವಂತೆ ದೋಷವು ಸ್ವಲ್ಪೇ ಉಳಿದಿದ್ದರೂ ಅದರಿಂದ ಹಾದಿಯು ಸಿಗುವದರಿಂದ ಬೇನೆಯು ಹೋಗಿದ್ದರು ಕೂಡ ಸ್ವಲ್ಪ ಕಾರಣದಿಂದಲೇ ತಿರುಗುತ್ತದೆ. ||೩೨೪|| ಆದ್ದರಿಂದ ಮೊದಲು ಉಪಯೋಗಿಸಿದ, ಗುಣಪಡಿಸಿದ ಔಷಧದದಾರ್ಢ್ಯಕ್ಕಾಗಿ ಅಪಾಯವಿಲ್ಲದ ಚಿಕಿತ್ಸೆಯನ್ನು ಕೆಲ ಕಾಲಮಾಡಬೇಕಾಗುವದು. ||೩೨೬|| ಔಷಧವು ತೀಕ್ಷ್ಣವಿರುವದರಿಂದ ಅಥವಾ ಅವರಲ್ಲಿಯೆ ಬೇರೆ ನ್ಯೂನತೆಯಿಂದ ಒಳಗೆ ಬಹಳ ದೋಷವು ಕುಪಿತವಾಗಿದ್ದರೂ ||೩೨೭|| ಪಥ್ಯಗಳಿಂದ ಮೃದು ಅಥವಾ ಅಲ್ಪತೆಯನ್ನು ಹೊಂದಿ ಸ್ವಲ್ಪೇ ಅಪಾಯವನ್ನು ಮಾಡುವದು. ಪಥ್ಯವನ್ನು ಮಾಡುತ್ತಿದ್ದರೂ ಅದರಿಂದ ಬೇನೆಯುಂಟಾದರೆ ||೩೨೮|| ಅದರಿಂದ ಆಗುವ ರೋಗ ವೃದ್ಧಿಯನ್ನು ಕಂಡು ಬೇರೆ ಪಥ್ಯವನ್ನು ಮಾಡಿಸಬೇಕು. ಬಹಳ ದಿವಸ ಅದನ್ನೇ ತಕ್ಕೊಳ್ಳುವದರಿಂದ ಅದರಲ್ಲಿ ರುಚಿಯಿಲ್ಲದ್ದರಿಂದ ಪಥ್ಯದ ಪದಾರ್ಥದ ದ್ವೇಷ ವುಂಟಾದರೆ ||೩೨೯|| ಬೇರೆ ಬೇರೆ ವಿಧಾನಗಳಿಂದ ಅದನ್ನು ಸಿದ್ಧಪಡಿಸಿ ಅದು ಪ್ರಿಯವಾಗುವಂತೆ ಮಾಡಬೇಕು. ಏಕಂದರೆ ಪದಾರ್ಥಗಳು ಮನಸ್ಸಿಗೆ ಅನುಕೂಲವಾಗಿದ್ದರೆ ಅದರಿಂದ ತೃಪ್ತಿ, ಉತ್ಸಾಹ, ರುಚಿ, ಬಲ ||೩೩೦|| ಸುಖಗಳು ಉಂಟಾಗುತ್ತವೆ. ಮತ್ತು ಅದರಿಂದ ದೋಷದ ಬಲವು ಕಡಿಮೆಯಾಗುವದು. ಅಭಿಲಾಷೆಯಿಂದ ಅಥವಾ ದೋಷಗಳ ಕ್ಷಯದಿಂದ ಅಥವಾ ರೋಗದ ವೈಧರ್ಮ್ಯದಿಂದ ಅರುಚಿ ಉಂಟಾದರೆ ||೩೩೧|| ಅದಕ್ಕೆ ಪಥ್ಯೋಪಚಾರವನ್ನು ಮಾಡುತ್ತ ರುಚಿಯಾಗುವಂತೆ ಸಂಸ್ಕಾರಗಳನ್ನು ಕೊಟ್ಟು ಊಟವನ್ನು ಬಡಲು ಮಾಡಬೇಕು. ||೩೩೧|| ||

## ಭವಂತಿ ಚಾತ್ರ ಶ್ಲೋಕಾಃ

ಉಪಸಂಹಾರವನ್ನು ಮಾಡುತ್ತಾರೆ—

**ವಿಂಶತಿರ್ವ್ಯಾಪದೋ ಯೋನ್ಯೈರ್ನಿದಾನಂ ಲಿಂಗಮೇವ ಚ ||೩೩೨||**

ಚಿಕಿತ್ಸಾ ಚಾಪಿ ನಿರ್ದಿಷ್ಟಾ ಶಿಷ್ಯಾಣಾಂ ಹಿತಕಾಮ್ಯಯಾ || ||
ಶುಕ್ರದೋಷಾಸ್ತಥಾ ಚಾಷ್ಟೌ ನಿದಾನಾಕೃತಿಭೇಷಜೈಃ ||೩೩೩||
ಕ್ಲೈಬ್ಯಾನ್ಯುಕ್ತಾನಿ ಚತ್ವಾರಿ ಚತ್ವಾರಃ ಪ್ರದರಾಸ್ತಥಾ ||
ತೇಷಾಂ ನಿದಾನಂ ಲಿಂಗಂ ಚ ಭೈಷಜ್ಯಂ ಚೈವ ಕೀರ್ತಿತಮ್ ||೩೩೪||
ಕ್ಷೀರದೋಷಾಸ್ತಥಾ ಚಾಷ್ಟೌ ದೋಷಾಕೃತಿಭಿಷಗ್‌ಜಿತೈಃ ||
ರೇತಸೋ ರಜಸಶ್ಚೈವ ಕೀರ್ತಿತಂ ಶುದ್ಧಿ ಲಕ್ಷಣಮ್ ||೩೩೫||
ಉಕ್ತಾನುಕ್ತಚಿಕಿತ್ಸಾ ಚ ಸಮ್ಯಗ್‌ಯೋಗಸ್ತಥೈವ ಹಿ ||
ದೇಶಾದಿಗುಣಯೋಗಾಶ್ಚ ಕಾಲಃ ಷಡ್‌ವಿಧ ಏವ ಚ ||೩೩೬||
ದೇಶೇ ದೇಶೇ ಚ ಯತ್‌ಸಾತ್ಮ್ಯಂ ಯಥಾ ವೈದ್ಯೋಽಪರಾಧ್ಯತಿ ||
ಚಿಕಿತ್ಸಾ ಚಾಪಿ ನಿರ್ದಿಷ್ಟಾ ದೋಷಾಣಾಂ ಗೂಢಚಾರಿಣಾಮ್ ||೩೩೭||
ಯೋನಿವ್ಯಾಪದಿಕೇಽಧ್ಯಾಯೇ ಪುನರ್ವಸುನಿದರ್ಶಿತಾ ||
ಯಸ್ತು ಸಮ್ಯಗ್ ನ ಜಾನಾತಿ ಶಾಸ್ತ್ರಂ ಶಾಸ್ತ್ರಾರ್ಥಮೇವ ಚ ||೩೩೮||
ನ ಕುರ್ಯಾತ್ ಸತ್ಕ್ರಿಯಾಂ ಚಿತ್ರಮಚಕ್ಷುರಿವಚಿತ್ರಕೃತ್ || ೩೩೮|| ||

**ಅರ್ಥ—** ಈ ಅಧ್ಯಾಯದಲ್ಲಿ ಇಪ್ಪತ್ತು ಯೋನಿರೋಗಗಳನ್ನು ಅವುಗಳ ಕಾರಣ ಲಕ್ಷಣಗಳನ್ನು ||೩೩೨|| ಚಿಕಿತ್ಸೆಯನ್ನು ಶಿಷ್ಯರ ಹಿತಕ್ಕಾಗಿ ಹೇಳಿದೆ. ಅದರಂತೆ ಎಂಟು ಶುಕ್ರದೋಷಗಳೂ ಅವುಗಳ ನಿದಾನ ಲಕ್ಷಣ ಔಷಧಗಳೂ ||೩೩೩|| ನಾಲ್ಕು ತರದ ನಪುಂಸಕತ್ವ ನಾಲ್ಕು ತರದ ಪ್ರದರ, ಅವುಗಳ ನಿದಾನ, ಲಕ್ಷಣ, ಔಷಧಗಳೂ ಹೇಳಲ್ಪಟ್ಟವು. ||೩೩೪|| ಅದರಂತೆ ಎಂಟು ಕ್ಷೀರದೋಷಗಳೂ ಅವುಗಳ ಲಕ್ಷಣ, ಔಷಧ ಮತ್ತು ಶುದ್ಧ ಶುಕ್ರದ ಮತ್ತು ಶುದ್ಧ ಆರ್ತವದ ಲಕ್ಷಣವೂ ಹೇಳಲ್ಪಟ್ಟವು. ||೩೩೫|| ಹೇಳಿದ ಮತ್ತು ಹೇಳದ ರೋಗಗಳ ಚಿಕಿತ್ಸೆಯನ್ನು ಮಾಡುವ ರೀತಿಯೂ ಅದರಂತೆ ಸಮ್ಯಗ್ಯೋಗವೂ ದೇಶ ಪ್ರಕೃತಿ ಮುಂತಾದವುಗಳ ಗುಣಗಳೂ ಮತ್ತು ಆರು ಪ್ರಕಾರದ ಕಾಲಗಳೂ ಹೇಳಲ್ಪಟ್ಟವು ||೩೩೬|| ಬೇರೆ ಬೇರೆ ದೇಶಗಳಿಗೆ ಸಾತ್ಮ್ಯವಾದ ಆಹಾರವು ಮತ್ತು ವೈದ್ಯನು ಹೇಗೆ ತಪ್ಪುಮಾಡುವನೆಂಬುದೂ ಒಳಗೇ ಗುಪ್ತವಾಗಿರುವ ದೋಷಗಳ ಚಿಕಿತ್ಸೆಯೂ ||೩೩೭|| ಈ ಯೋನಿವ್ಯಾಪಚ್ಚಿಕಿತ್ಸಾಧ್ಯಾಯದಲ್ಲಿ ಪುನರ್ವಸು ಋಷಿಗಳಿಂದ ತೋರಿಸಲ್ಪಟ್ಟಿತು. ಯಾವನು ಶಾಸ್ತ್ರವನ್ನು ಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿಯನೋ ||೩೩೮|| ಕಣ್ಣಿಲ್ಲದ ಚಿತ್ರಕಾರನು ಚಿತ್ರವನ್ನು ಹೇಗೆ ಬರೆಯಬಾರದೊ ಅದರಂತೆ ಇವನು ಚಿಕಿತ್ಸೆಯನ್ನು ಮಾಡಬಾರದು. ||೩೩೮|| ||

**ಇತ್ಯಗ್ನಿವೇಶಕೃತೇ ತಂತ್ರೇ ದೃಢಬಲಪ್ರತಿಸಂಸ್ಕೃತೇ ಚಿಕಿತ್ಸಿತಸ್ಥಾನೇ ಯೋನಿವ್ಯಾಪ ಚಿಕಿತ್ಸಿತಂ ನಾಮ ತ್ರಿಂಶೋಽಧ್ಯಾಯಃ ॥೩೦॥**

**ಅರ್ಥ—** ಈ ಪ್ರಕಾರ ಅಗ್ನಿವೇಶರಿಂದ ರಚಿಸಲ್ಪಟ್ಟು ದೃಢಬಲರಿಂದ ಸಂಸ್ಕಾರ ಪಡೆದ ಚರಕ ಸಂಹಿತೆಯ ಚಿಕಿತ್ಸಾಸ್ಥಾನದಲ್ಲಿ **ಯೋನಿವ್ಯಾಪ ಚಿಕಿತ್ಸೆ ಎಂಬ** ಮೂವತ್ತನೆಯ ಅಧ್ಯಾಯವು ಮುಗಿದುದು.

ಶ್ರೀ ಮದಾದ್ಯ ಬಾಬಾಚಾರ್ಯರ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ ಚರಕ 'ಚಿಕಿತ್ಸಾ-ಬೋಧಿನಿ' ಎಂಬ ಚರಕ ಸಂಹಿತೆಯ ಟಿಪ್ಪಣಿಯಲ್ಲಿ **ಯೋನಿವ್ಯಾಪ** ಚಿಕಿತ್ಸೆ ಎಂಬ ಮೂವತ್ತನೆಯ ಅಧ್ಯಾಯವು ಮುಗಿದುದು.

ಮುಗಿದುದು

ಪರಿಶಿಷ್ಟ ೧.

# ಚರಕ ಚಿಕಿತ್ಸಾ ಸ್ಥಾನ

## ೧ನೇ, ೨ನೇ ಮತ್ತು ೩ನೇ ಭಾಗಗಳಲ್ಲಿಯ ಔಷಧಗಳ ಸೂಚಿ.

(ಆಕಾರಾದಿ)

## ಆಕಾರಾದಿ



## ಇಕಾರಾದಿ

| ಔಷಧ | ಭಾಗ | ಪುಟ |
|---|---|---|
| **ಉಕಾರಾದಿ** | | |
| ಉತ್ಪಾದನ ದ್ರವ್ಯ | ೧ | ೩೦೬ |
| ಉತ್ಪಾದನ | ೨ | ೩೯೯ |
| ಉದುಂಬರಾದಿ ಲೇಹ | ೩ | ೨೯ |
| ಉದುಂಬರಾದಿ ತೈಲ | ೩ | ೧೭೩ |
| **ಏಕಾರಾದಿ** | | |
| ಏಲಾದಿ ಗುಟಿಕಾ | ೧ | ೩೫೩ |
| **ಐಕಾರಾದಿ** | | |
| ಐಂದ್ರ ರಸಾಯನ | ೧ | ೩೮ |
| ಐಂದ್ರೀ | ೧ | ೩೮ |
| ಐಂದ್ರೀ | ೧ | ೫೫ |
| **ಔಕಾರಾದಿ** | | |
| ಔಡಲ ಎಣ್ಣೆಯ ಗುಣ | ೩ | ೮ |
| **ಕಕಾರಾದಿ** | | |
| ಕನಕ ಚೂರ್ಣ | ೧ | ೧೨ |
| ಕೇವಲಾಮಲಕ ಬ್ರಹ್ಮ ರಸಾಯನ | ೧ | ೩೫ |
| ಕಾಷ್ಠಗೋಧಾ (ವನಸ್ಪತಿ) | ೧ | ೫೧ |
| ಕ್ರಿಯಾಕ್ರಮದ ದ್ರವ್ಯಗಳು | ೧ | ೧೩೩ |
| ಕನಕ ಬಿಂದ್ವರಿಷ್ಟ | ೧ | ೨೫೩ |
| ಕುಷ್ಟಿಗಳಿಗೆ ಲೇಪ | ೧ | ೨೫೪ |
| ,, ಕಷಾಯ | ೧ | ೨೫೬ |
| ಕನಕ ಕ್ಷೀರೀ ತೈಲ | ೧ | ೨೫೯ |
| ಕಲ್ಯಾಣಕ ಘೃತ | ೧ | ೩೨೨ |
| ಕಾಶಾದಿ ಘೃತ | ೧ | ೩೪೧ |
| ಕ್ಷಾರ ಗುಟಿಕೆ | ೧ | ೩೮೦ |
| ಕಂಸ ಹರೀತಕೀ | ೧ | ೩೮೨ |
| ಕನಕಾರಿಷ್ಟ | ೨ | ೩೯ |
| ಕಾಲೀಮಕ ಘೃತ | ೨ | ೧೨೨ |
| ಕಂಟಕಾರೀ ಘೃತ (೧ನೇ) | ೨ | ೧೭೮ |

## ಗಕಾರಾದಿ



## ಘಕಾರಾದಿ

## ಯಕಾರಾದಿ

## ಶಕಾರಾದಿ

## ಹಕಾರಾದಿ

## ಪರಿಶಿಷ್ಟ, ೨

**ಚರಕಸಂಹಿತಾ ಚಿಕಿತ್ಸಾಸ್ಥಾನದಲ್ಲಿ ಬಂದ ಋಷಿಗಳ, ದೇವ, ಸ್ಥಳಗಳ, ಮತ್ತು ಮಹತ್ವದ ಶಬ್ದಗಳ ಸೂಚಿ ಹೆಸರುಗಳು—**

| ಔಷಧ | ಭಾಗ | ಪುಟ |
| --- | --- | --- |
| ಕೈಲಾಸ | ೧ | ೩೯೯ |
| ನಂದನ | ,, | |
| ಭಿಷಗ್ವಿದ್ಯಾಪ್ರವರ್ತಕ | ,, | |
| ಶಿಲಾಜತು | ,, | |
| ಗುಗ್ಗುಲು | ,, | |
| ಶಲ್ಯಹರ್ತೃಣಾ | ೧ | ೪೨೬ |
| ರೂಪ್ಯಮೂಲ | ೨ | ೨೧೬ |
| ಮಾಕ್ಷಿಕ | ,, | |
| ಸ್ಫಟಿಕ | ೨ | ೧೬೫ |
| ಅಂಜನ | ೨ | ೧೬೫ |
| ವಂಶಲೋಚನ | ೨ | ೧೮೪ |
| ನರೀಷ್ಯನ್ | | |
| ನಾಭಾಗ | | |
| ಪೃಷಧ್ರರಾಜ | ೨ | ೨೦೯ |
| ವಿಷ್ಣು | ೨ | ೩೧೧ |
| ಕೃಷ್ಣ | ,, | |
| ವೃಶಾಕಪಿ | ,, | |
| ವಾಸುದೇವ | ,, | |
| ರೋಹಿತ ಪಿತ್ತ | ೨ | ೩೨೯ |
| ಶಾಲಾಕ್ಯಾತಂತ್ರ | ೩ | ೩೬ |

# ಪರಿಶಿಷ್ಟ ೩.

## ಪ್ರಸಿದ್ಧ ಔಷಧಿಗಳ ಪ್ರಮಾಣ

ಶ್ರೀ ಜಯದೇವ ವಿದ್ಯಾಲಂಕಾರ ಇವರ ಹಿಂದೀ ಗ್ರಂಥದಿಂದ ಈ ಪ್ರಮಾಣ ಬರೆಯಲಾಗಿದೆ–

### ರಸಾಯನ ೧ನೇ ಅಧ್ಯಾಯ

| ಔಷಧ | ಪ್ರಮಾಣ |
| --- | --- |
| ಬ್ರಹ್ಮರಸಾಯನ (೧ನೇ) | ೧ ತೊಲಿ |

## ವಾಜೀಕರಣ ೨ನೇ ಅಧ್ಯಾಯ



## ಜ್ವರ ಚಿಕಿತ್ಸೆ ೩ನೇ ಅಧ್ಯಾಯ



## ರಕ್ತಪಿತ್ತ ಚಿಕಿತ್ಸೆ ೪ನೇ ಅಧ್ಯಾಯ

## ಕುಷ್ಠಚಿಕಿತ್ಸೆ ೭ನೆಯ ಅಧ್ಯಾಯ

| | | |
|---|---|---|
| ಮುಸ್ತಾದಿ ಚೂರ್ಣ | | ೪ ಮಾಸಿ |
| ತ್ರಿಫಳಾದಿ ಚೂರ್ಣ | | ೧-೬ ಮಾಸಿ |
| ಬದ್ಧಪಾರದ | | ೧/೪-೧/೨ ರತ್ತಿ |
| ವಜ್ರಭಸ್ಮ | | ೩/೮-೧/೧೬ ರತ್ತಿ |
| ಮಧ್ವಾಸವ | | ೧೧/೪-೨೧/೨ ತೊ. |
| ಕನಕ ಬಿಂದ್ವರಿಷ್ಟ | | ,, |
| ತ್ರೈಫಲಯೋಗ | | ೧-೨ ತೊಲಿ |
| ತಿಕ್ತ ಷಟ್ಪಲಕ ಘೃತ | ಮುಂಜಾನೆ ೧ | ರಾತ್ರಿ ೧ತೊ೹ |
| ಮಹಾತಿಕ್ತಕ ಘೃತ | | ½ ತೊಲಿ |
| ಮಹಾಖಾದಿರ ಘೃತ | | ,, |

## ೮ನೆಯ ಅಧ್ಯಾಯ

| | |
|---|---|
| ದಶಮೂಲಾದಿ ಘೃತ | ೧/೨ ತೊಲಿ |
| ಖರ್ಜೂರಾದಿ ಘೃತ | ೧/೪ ,, |
| ಪಂಚಮೂಲ ಘೃತ | ೧/೨ ,, |
| ಸಿತೋಪಲಾದಿ ಚೂರ್ಣ | ೧ ಮಾಸಿ |
| ಗೋಕ್ಷುರಾದಿ ಘೃತ | ೧/೮ ತೊಲಿ |
| ಜೀವಂತ್ಯಾದಿ ಘೃತ | ,, |
| ತಾಲೀಸಾದಿ ಚೂರ್ಣ | ೧-೨ ಮಾಸಿ |
| ದಶಮೂಲಾದಿ ಘೃತ | ೧/೨ ತೊಲಿ |
| ಪಂಚಕೋಲಾದಿ ಘೃತ | ,, |
| ರಾಸ್ನಾದಿ ಘೃತ | ೧/೪-೧/೨ ತೊಲಿ |

## ೯ನೇ ಅಧ್ಯಾಯ

| | |
|---|---|
| ಹಿಂಗ್ವಾದಿ ಘೃತ | ೧/೪-೧/೨ ತೊಲಿ |
| ಕಲ್ಯಾಣಕ ಘೃತ | ೧/೨ ತೊಲಿ |
| ಮಹಾಕಲ್ಯಾಣಕ ಘೃತ | ,, |
| ಮಹಾಪೈಶಾಚಿಕ ಘೃತ | ,, |
| ಲಶುನಾದಿ ಘೃತ | ·।· - ·॥· ತೊ. |

ಚವ್ಯಾದಿ ಘೃತ ॥ ತೊಲಿ
ನಾಗರಾದಿ ಘೃತ ,,
ಪಿಪ್ಪಲ್ಯಾದಿ ಘೃತ(೧ನೇ) ,,
ಅಭಯಾರಿಷ್ಟ ೧। ೨॥
ದಂತ್ಯರಿಷ್ಟ ,,
ಫಲಾರಿಷ್ಟ ,,
ಶರ್ಕರಾಸವ ,,
ಕನಕಾರಷ್ಟ ,,
ಅತಿವಿಷಾದಿ ಚೂರ್ಣ ೧ ಮಾಸಿ
ಕುಟಜಾದಿ ರಸಕ್ರಿಯೆ ೪ ರತ್ತಿ
ನಿಲೋತ್ಪಲಾದಿ ಚೂರ್ಣ ೨ ಮಾಸಿ
ಪಾಠಾದಿ ಚೂರ್ಣ ೨ ಮಾಸಿ
ದಾರ್ವ್ಯಾದಿ ಚೂರ್ಣ ೨ ಮಾಸಿ
ಕುಟಜಫಲಾದಿ ಘೃತ ೨ ಮಾಸಿ
ದಾಡಿಮರಸಾದಿ ಘೃತ ೩ ಮಾಸಿ
ಹ್ರೀಬೇರಾದಿ ಘೃತ ॥ ತೊಲಿ
ಸುನಿಷಣ್ಣಕ ಚಾಂಗೇರಿ ಘೃತ ॥ ತೊಲಿ

## ೧೫ನೇ ಅಧ್ಯಾಯ

ದಶಮೂಲಾ ಘೃತ ॥ ತೊಲಿ
ಪಂಚಮೂಲಾದಿ ಘೃತ ,,
ಚಿತ್ರಕಾದಿ ಗುಟಿಕಾ ೪ ರತ್ತಿ
ಪಥ್ಯಾದಿ ಚೂರ್ಣ ೧—೨ ಮಾಸಿ
ಅಭಯಾದಿ ಕ್ವಾಥ ೨—೩ ಮಾಸಿ
ಅತಿವಿಷಾದಿ ಚೂರ್ಣ ೧ ಮಾಸಿ
ಪಿಪ್ಪಲ್ಯಾದಿ ಚೂರ್ಣ ೧—೨ ಮಾಸಿ
ಮರಿಚಾದಿ ಚೂರ್ಣ ೩ ಮಾಸಿ
ಚಂದನಾದಿ ಘೃತ ॥ ತೊಲಿ
ನಾಗರಾದಿ ಚೂರ್ಣ ೧ ಮಾಸಿ
ಭೂನಿಂಬಾದಿ ಚೂರ್ಣ ೧—೨ ಮಾಸಿ

| | |
|---|---|
| ವಚಾದಿ ಚೂರ್ಣ | ೨ ಮಾಸಿ |
| ಕಿರಾತಾದಿ ಚೂರ್ಣ | ೨ ಮಾಸಿ |
| ಮಧೂಕಾಸವ | ೧।-೨॥ ತೊಲಿ |
| ದುರಾಲಭಾಸವ | ,, |
| ಮೂಲಾಸವ | ೨೬-೩೮ ತೊಲಿ |
| ಪಿಂಡಾಸವ | ೮ ತೊಲಿ |
| ಮಧ್ವರಿಷ್ಟ | ೧೬-೨೮ ತೊಲಿ |
| ಪಿಪ್ಪಲ್ಯಾದಿ ಚೂರ್ಣ | ೧ ಮಾಸಿ |
| ಕ್ಷಾರ ಘೃತ | ೨ ಮಾಸಿ |
| ಭಲ್ಲಾತಕಾದಿ ಕ್ಷಾರ | ೪ ರತ್ತಿಯಿಂದ ೨ ಮಾಸಿ |
| ದುರಾಲಭಾದಿ ಕ್ಷಾರ | ೪ ರತ್ತಿಯಿಂದ ೧ ಮಾಸಿ |
| ಭೂನಿಂಬಾದಿ ಕ್ಷಾರ | ,, |
| ಹರಿದ್ರಾದಿ ಕ್ಷಾರ | ,, |
| ಕ್ಷಾರ ಗುಟಿಕಾ | ,, |
| ವತ್ಸಕಾದಿ ವೇಗ | ೪ ರತ್ತಿ |
| ತ್ರಿಫಲಾದಿ ಕ್ಷಾರ | ೧—೨ ಮಾಸಿ |

## ೧೬ನೇ ಅಧ್ಯಾಯ

| | |
|---|---|
| ದಾಡಿಮಾದಿ ಘೃತ | ೮ ತೊಲಿ |
| ಕಂಟಕಾದಿ ಘೃತ | ,, |
| ಪಥ್ಯಾ ,, | ,, |
| ದಂತೀ ,, | ೪ ಹನಿ |
| ದ್ರಾಕ್ಷಾ ,, | ೨ ಮಾಸಿ |
| ಹರಿದ್ರಾದಿ ,, | ೮ ತೊಲಿ |
| ತ್ರಿವೃಚ್ಚೂರ್ಣ | ೩—೪ ಮಾಸಿ |
| ಹರೀತಕೀ ಚೂರ್ಣ | ,, |
| ಆರಗ್ವಧ ಮಜ್ಜಾ | ೪ ಮಾಸಿ |
| ದಂತೀ ಕಲ್ಕ | ೧ ರತ್ತಿ |

| | |
|---|---|
| ನಿಶೋತ್ತರ | ೧—೨ ಮಾಸಿ |
| ವಿಶಾಲಾದಿ ಫಾಂಟ | ೪ ತೊಲಿ |
| ನವಾಯಸ ಚೂರ್ಣ | ೧—೪ ರತ್ತಿ |
| ಮಂಡೂರ ವಟಕಾ | ೩—೪ ರತ್ತಿ |
| ಯೋಗರಾಜ | ೪ ರತ್ತಿ |
| ,, | ,, |
| ಶಿಲಾಜತು ವಟಿಕಾ | ೬ ರತ್ತಿ |
| ಪುನರ್ನಾಲಾ ಮಂಡೂರ | ೩ ರತ್ತಿ |
| ಡಾರ್ವ್ಯಾದಿ ಲೇಹ | ೪ ರತ್ತಿ |
| ಅಯೋರಜ ವೃದ್ಧಿಚೂರ್ಣ | ೩ ರತ್ತಿ |
| ಧಾತ್ರ್ಯವ ಲೇಹ | ೨-೨½ ತೊಲಿ |
| ಮಂಡೂರ ವಟಿಕ | ೧—೪ ರತ್ತಿ |
| ಗೌಡಾರಿಷ್ಟ | ೧½-೨½ ತೊಲಿ |
| ಬೀಜಕಾರಿಷ್ಟ | ,, |
| ಧಾತ್ರ್ಯರಿಷ್ಟ | ,, |
| ವ್ಯೋಷಾದಿ ಘೃತ | ½ ತೊಲಿ |
| ಕೇಶರಾದಿ ಘೃತ | ,, |
| ಗುಡೂಚ್ಯಾದಿ ಘೃತ | ,, |

## ೧೭ನೇ ಅಧ್ಯಾಯ

| | |
|---|---|
| ಪಾಠಾದಿ ಸಂಧಾನ | ೬೦-೪೦ ಹನಿ |
| ಹಿಂಗ್ವಾದಿ ಚೂರ್ಣ | ೪ ರತ್ತಿ |
| ಮಯೂರಪಾದ ನಾಲಾದಿ ಚೂರ್ಣ | ೩—೪ ರತ್ತಿ |
| ಶಠ್ಯಾದಿ ಚೂರ್ಣ | ೨—೪ ಮಾಸಿ |
| ಮುಕ್ತಾದಿ ಚೂರ್ಣ | ೧ ರತ್ತಿ |
| ಶಠ್ಯಾದಿ ಚೂರ್ಣ | ೧ ಮಾಸಿ |
| ಲೋಹ ಭಸ್ಮ | ½—೨ ರತ್ತಿ |
| ವಶಮೂಲಾದಿ ಘೃತ | ½ ತೊಲಿ |
| ತೇಜೇಸತ್ಯಾದಿ ಘೃತ | ,, |
| ಮನಃ ಶಿಲಾದಿ ಘೃತ | ,, |

## ೧೮ನೇ ಅಧ್ಯಾಯ

| | |
|---|---|
| ಕಂಟಕಾರೀ ಘೃತ | ೧/೩ ತೊಲಿ |
| ಪಿಪ್ಪಲ್ಯಾದಿ ಘೃತ | ,, |
| ತ್ರ್ಯೂಷಣಾದಿ ಘೃತ | ,, |
| ರಾಸ್ನಾ ಘೃತ | ,, |
| ವಿಡಂಗಾದಿ ಚೂರ್ಣ | ೪-೧೨ ಮಾಸಿ |
| ದ್ವಿಕ್ಷಾರಾದಿ ಚೂರ್ಣ | ೧೧/೩ ಮಾಸಿ |
| ಶಠ್ಯಾದಿ ಕಲ್ಕ | ೬ ಮಾಸಿ |
| ದುರಾಲಭಾದಿ ಲೇಹ | ೨ ಮಾಸಿ |
| ದುಃಸ್ಪರ್ಶಾದಿ ಲೇಹ | ೧ ಮಾಸಿ |
| ವಿಡಂಗಾದಿ ಲೇಹ | ೧/೪—೧/೩ ರತ್ತಿ |
| ಚಿತ್ರಕಾದಿ ಲೇಹ | ೧/೩ ತೊಲಿ |
| ಅಗಸ್ತ್ಯಹರೀತಕೀ | ೧ ತೊಲಿ |
| ಸೈಂಧವಾದಿ ಚೂರ್ಣ | ೧ ಮಾಸಿ |
| ಶರ್ಕರಾದಿ ಲೇಹ | ೧/೩ ತೊಲಿ |
| ತ್ವಗಾದಿ ಲೇಹ | ೪ ಮಾಸಿ |
| ಜೀವಕಾದಿ ಘೃತ | ೧/೩—೧ ತೊಲಿ |
| ಶರ್ಕರಾದಿ ಚೂರ್ಣ | ೧ ತೊಲಿ |
| ಮಹಿಷ್ಯಾದಿ ಘೃತ | ೧/೩ ತೊಲಿ |
| ಪಾಠಾದಿ ಕಲ್ಕ | ೧—೨ ಮಾಸಿ |
| ಹಿಪ್ಪಲಿ ಕಲ್ಪ | ೧—೪ ರತ್ತಿ |
| ದೇವದಾರ್ವಾದಿ ಲೇಹ | ೨ ಮಾಸಿ |
| ಪಿಪ್ಪಲ್ಯಾದಿ ಲೇಹ | ,, |
| ,, (೨ನೇ) | ೪ ರತ್ತಿ |
| ಪಥ್ಯಾದಿ ಲೇಹ | ೧ ಮಾಸಿ |
| ದೇವದಾರ್ವಾದಿ ಲೇಹ (೨ನೇ) | ೧ ಮಾಸಿ |
| ವಿಶಾಲಾದಿ ಲೇಹ | ೧ ಮಾಸಿ |
| ಸೌವರ್ಚಲಾದಿ ಚೂರ್ಣ | ೬ ರತ್ತಿಯಿಂದ ೧೮ ಮಾಸಿ |
| ದಶಮೂಲಾದಿ ಘೃತ | ೧/೩ ತೊಲಿ |

## ೧೯ನೇ ಅಧ್ಯಾಯ



## ೨೦ನೇ ಅಧ್ಯಾಯ



## ೨೩ನೇ ಅಧ್ಯಾಯ

## ೨೪ನೇ ಅಧ್ಯಾಯ

## ೨೯ನೇ ಅಧ್ಯಾಯ

| | |
|---|---|
| ಶ್ರಾವಣ್ಯಾದಿ ಘೃತ | ॥ ತೊಲಿ |
| ಬಲಾ ಘೃತ | ,, |
| ಪಾರೂಷಕ ಘೃತ | ,, |
| ಜೀವಮಾನ ,, | ,, |
| ಸ್ಥಿರಾದಿ ಯಮಕ | \|—॥ ತೊಲಿ |
| ಸುಕುಮಾರಕ ತೈಲ | \|-॥ ತೊಲಿ |
| ಅಮೃತಾದಿ ತೈಲ | .. |

## ೩೦ನೇ ಅಧ್ಯಾಯ

| | |
|---|---|
| ಬಲಾನಿಯಮಕ | \|—॥ ತೊಲಿ |
| ಕಾಶ್ಮರ್ಯಾದಿ ಘೃತ | ॥ ತೊಲಿ |
| ಬ್ರಹ್ಮಚ್ಛತಾವರೀ ,, | |

ಮುಗಿದುದು.

